# ನಮ್ಮ ಮಾತು

'ಅತ್ತಿಗೆ' ಕಾದಂಬರಿಯೊಡನೆ ನಮ್ಮ ಮಾಲೆಯ ಆರನೆಯ ವರುಷ ಮುಗಿಯುತ್ತದೆ. ಈ ಕಾದಂಬರಿಯನ್ನು ಪ್ರಕಟಿಸಲು ಅನುಮತಿ ಕೊಟ್ಟ ಶ್ರೀ ಎಸ್. ಅನಂತನಾರಾಯಣರಿಗೆ ನಮ್ಮ ವಂದನೆಗಳು.

ಮಾಲೆಯ ಏಳನೆಯ ವರುಷದ ಮೊದಲನೆಯ ಕಾದಂಬರಿ ಪ್ರೊಫೆಸರ್ ಇನಾಂದಾರರು ಬರೆದ '**ಕಟ್ಟಿದ ಮನೆ**'—ಸುಮಾರು ೩೫೦ ಪುಟಗಳು—ಇದೇ ಅಕ್ಟೋಬರ್ ಮೊದಲ ವಾರದಲ್ಲಿ ಪ್ರಕಟವಾಗುವುದು. ನಮ್ಮ ಮಾಲೆಯಲ್ಲಿ ಎರಡನೆಯ ವರುಷ ಪ್ರಕಟವಾದ ಶ್ರೀಯುತರ 'ಕನಸಿನ ಮನೆ'ಯ ಮುಂದಿನ ಭಾಗವೇ 'ಕಟ್ಟಿದ ಮನೆ'.

ಆರು ವರುಷಗಳಿಂದ ಸಹಕಾರವನ್ನಿತ್ತ ಚಂದಾದಾರರಿಗೂ, ಬರಹಗಾರರಿಗೂ ನಮ್ಮ ವಂದನೆಗಳು.

ಮೈಸೂರು
೧೫—೯—೫೨

ಪ್ರಕಾಶಕ

ಸೊಸೆ. ತಮ್ಮ ಮಾತನ್ನು ಅಲ್ಲಗಳೆಯಲಾರಳೆಂಬ ಒಂದು ನಂಬಿಕೆಯೂ ಇತ್ತು. ಅದಕ್ಕೆಂದೆ ಮೃದುವಾದ ದನಿಯಲ್ಲಿ ಮೆಲ್ಲನೆ ಮಾತಾಡುತ್ತಿದ್ದರು :

"ನೋಡು ಶಾಂತ, ಅವನ ಮಾತೇನು ಬಿಟ್ಟುಬಿಡು. ಏನೊ ತಿಳಿವಳಿಕೆ ಇಲ್ಲ, ಚಿಕ್ಕವನು" ಎಂದು ಸಮಾಧಾನ ಹೇಳಿದರು. ಆದರೆ ಶಾಂತಳ ಉಗ್ರತೆಯೇನೂ ಇಳಿಯಲಿಲ್ಲ.

"ಚಿಕ್ಕವನು! ಇನ್ನೂ ಎಳೆಯ ಮಗು! ಹದಿನೆಂಟು ವರ್ಷದ ಹಸು ಗೂಸು ಅಷ್ಟೆ."

"ವಯಸ್ಸೇನು ಮಾಡುತ್ತೆ, ಶಾಂತ. ತಿಳಿವಳಿಕೆಯಿಲ್ಲ ಅಷ್ಟೆ" ಎಂದರು ಗಂಗಮ್ಮ, ತಮ್ಮ ಮಗನ ಮೇಲೆ ತಪ್ಪುಹಾಕುವವರಂತೆ.

"ತಿಳಿವಳಿಕೆಯಿಲ್ಲದೆ ಏನು ? ತಲೆಯೆಲ್ಲ ಮಾತಾಡಲು ಗೊತ್ತಾಗುತ್ತೆ. ಕಾಲೇಜಿನಲ್ಲಿ ಬೇರೆ ಓದುತಾನಂತೆ ಇವನು! ಯಾಕೊ ಕಾಣೆ—ಮಣ್ಣು ಹುಯ್ಯುಕೊಳ್ಳೋಕೆ."

ಶಾಂತಳ ಈ ಮಾತು ಅಲ್ಲಿಯೆ ತೆಪ್ಪನೆ ನಿಂತಿದ್ದ ಸೀನುವನ್ನು ಕೆಣಕಿತು. ಹುಬ್ಬು ಸೆಟೆಸಿಕೊಂಡು, ಮುಖ ಗಂಟುಹಾಕಿಕೊಂಡು ಒಂದು ಕಡೆ ನಿಂತಿದ್ದ ವನು ಇಷ್ಟು ಹೊತ್ತೂ ಸುಮ್ಮನಿದ್ದ. ಅತ್ತಿಗೆಯೂ ತಾಯಿಯೂ ಆಡುತ್ತಿದ್ದ ಮಾತುಗಳೊಂದೊಂದೂ ಅವನ ಮನಸ್ಸಿನಲ್ಲಿ ಉರಿಯುತ್ತಿದ್ದ ಬೆಂಕಿಯನ್ನು ಕೆದಕುತ್ತಿದ್ದವು. ನಾಲಗೆಯವರೆಗೂ ಉಕ್ಕಿಬಂದ ಕೋಪವನ್ನು ಉಗುಳಿ ನೊಂದಿಗೆ ಕಷ್ಟದಿಂದ ನುಂಗಿಕೊಂಡಿದ್ದ. ಒಂದೊಂದು ಸಾರಿ ಕೋಪ ಸಿಡಿಯುವುದೊ ಎನ್ನುವಂತೆ ಮುಖ ಧುಮುಗುಟ್ಟುತ್ತಿತ್ತು. ಕಣ್ಣು ಕೆಂಗಾರು ತ್ತಿತ್ತು. ಆದರೆ ಹೇಗೋ ಬಾಯಿ ಬಿಗಿ ಹಿಡಿದಿದ್ದ. ಈಗ ಈ ಮಾತಿನಿಂದ ಅವನ ಸಂಯಮ ಒಡೆಯಿತು. ಎದೆಯಲ್ಲಿ ತುಂಬಿದ್ದ ರೋಷವೆಲ್ಲ ಮಾತಿನಲ್ಲಿ ಸಿಡಿಯಿತು.

"ಅತ್ತಿಗೆ, ತಲೆಯೆಲ್ಲ ಮಾತಾಡತಿರೋದು ನಾನಲ್ಲ, ನೀನು. ತಿಳೀತೆ" ಎಂದು ಆರಂಭಿಸಿದ.

ಸೀನುವಿನ ರೌದ್ರ ಕಂಡು ಗಂಗಮ್ಮನವರೂ ನಡುಗಿದರು. ಆದರೆ ಅ ನನ್ನು ಮುಂದೆ ಮಾತಾಡಲು ಬಿಟ್ಟರೆ ಏನೋ ಅನರ್ಥವೆಂದು ತೋ ಆದರೆ ಅವನನ್ನು ಗದರಿಸಿಕೊಳ್ಳಲೂ ಇಷ್ಟವಿರಲಿಲ್ಲ. ಆದರೂ ಹೇಗೊ ಅವ

ಸಮಾಧಾನಪಡಿಸಬೇಕು. ಇಲ್ಲದಿದ್ದರೆ ಈ ಜಗಳ ಇಲ್ಲಿಗೆ ನಿಲ್ಲುವುದಿಲ್ಲವೆಂದು ಅವರ ಬುದ್ಧಿಗೆ ತೋಚಿತು. ನಡುವೆ ಬಾಯಿಹಾಕಿ ಸೀನುವಿನ ಮಾತಿಗೆ ತಡೆ ಹಾಕಿದರು :

"ಸೀನು, ಹೋಗೊ ನಿನ್ನ ರೂಮಿಗೆ, ಸುಮ್ಮನೆ ಮಾತಿಗೆ ಮಾತು ಬೆಳಸದೆ."

"ಯಾಕಮ್ಮಾ, ಹೋಗಲಿ. ನೋಡು, ಅವಳ ಮಾತನ್ನ. ನಾನು ಕಾಲೇಜಿನಲ್ಲಿ ಓದಿ ಮಣ್ಣು ಹುಯ್ಯುಕೋತಿನಂತೆ. ಮಣ್ಣಾದರೂ ಹುಯ್ಯುಕೋತೀನಿ, ಏನಾದರೂ ಮಾಡಿಕೋತೀನಿ, ಹಾಳಾಗಿಹೋಗ್ತೀನಿ. ಇವಳಿಗೇನಂತೆ? ತಲೆಯೆಲ್ಲ ಹರಟತಾಳೆ."

"ಸೀನು, ನೀನು ಸುಮ್ಮನೆ ಇರತೀಯೋ ಇಲ್ಲವೊ?" ಎಂದರು ಅಸಹಾಯತೆಯಿಂದ ಗಂಗಮ್ಮ. ಯಾರನ್ನು ಹೇಗೆ ಸಮಾಧಾನಪಡಿಸಬೇಕೆಂಬುದೆ ಅವರಿಗೆ ದೊಡ್ಡ ಯೋಚನೆಯಾಯಿತು.

"ಮಾತಾಡಲಿ ಬಿಡಿ, ಅತ್ತೆ. ಅವನ ಬಾಯಿಗೆ ಲಂಗು ಲಗಾಮು ಇದ್ದರೆ ತಾನೆ!" ತಾತ್ಸಾರದಿಂದ ಅಂದಳು ಶಾಂತ.

"ನಿನ್ನ ಬಾಯಿಗೆ ಬೀಗಹಾಕಿಕೊಂಡಿದೀಯೇನೊ—ನನಗೆ ಹೇಳೋಕೆ ಬರ್ತಾಳೆ" ಎಂದು ಶಾಂತಳ ಕಡೆಗೆ ತಿರುಗಿ ಸೀನು ಮತ್ತೆ ಸಿಟ್ಟಿನಿಂದ, "ಮಾಡುವುದನ್ನೆಲ್ಲ ಮಾಡಿಬಿಟ್ಟು ಈಗ ನನಗೆ ಹೇಳೋಕೆ ಬರ್ತಾಳೆ, ಹಾರಾಡತಾಳೆ" ಎಂದ.

"ನೋಡಿದಿರಾ, ಅತ್ತೆ. ಜಗಳ ಆರಂಭ ಮಾಡಿದವನೆ ಅವನು. ಈಗ ನನ್ನ ಮೇಲೆ ರೇಗಿಬೀಳ್ತಾನೆ. ಸಾಕಪ್ಪಾ ಸಾಕು."

ಇಷ್ಟು ಹೊತ್ತಾದರೂ ಶಾಂತಳ ಕಣ್ಣಿನಲ್ಲಿ ಒಂದು ಹನಿ ನೀರೂ ತೊಟ್ಟಿಕ್ಕಲಿಲ್ಲ. ಹೆಣ್ಣುಮಕ್ಕಳಿಗೆ ಕೋಪ ಕಣ್ಣೀರಾಗುವುದು ಬಹಳ ಬೇಗ. ಆದರೆ ಶಾಂತ ಅದು ಹೇಗೊ ಕಣ್ಣೀರನ್ನು ತಡೆಗಟ್ಟಿದ್ದಳು. ಒಪ್ಪವಾಗಿ ಕಡೆದು, ಕೆಂಪಿನಿಂದಲೆ ಮಾಡಿದಂತಹ ತುಟಿಗಳಲ್ಲಿ ಕೆಳಗಿನದು ದೃಢವಾಗಿದ್ದು ಹಟದ ಸ್ವಭಾವವನ್ನು ಎತ್ತಿ ತೋರಿಸುತ್ತಿತ್ತು. ಈಗಲೂ ಮನಸ್ಸಿನೊಳಗಿನ ಜ್ವಾಲಾಮುಖಿಯನ್ನು ಅದುಮಿಡಲೆಂದೊ ಏನೊ ತುಟಿಯ ಮೇಲೆ ಹಲ್ಲಿನ ಅಂಚನ್ನು ಒತ್ತಿದ್ದಳು. ಕೆಂದುಟಿ ಇನ್ನೂ ಕೆಂಪಾಗಿ ಕಾಣುತ್ತಿತ್ತು.

ಇವರಿಬ್ಬರ ಜಗಳದಲ್ಲಿ ಗಂಗಮ್ಮನಿಗೆ ಏನು ಮಾಡಲೂ ತೋರಲಿಲ್ಲ. ಹೇಗಾದರೂ ತಪ್ಪಿಸಿದರೆ ಸಾಕೆಂದು ಅವರಿಗೆ ಅನಿಸುತ್ತಿತ್ತು. ಆದರೆ ಯಾರನ್ನೂ ಬೈಯುವಂತಿರಲಿಲ್ಲ. ಯಾರನ್ನು ಬೈದರೂ ಕೋಪ. ಒಬ್ಬರನ್ನು ಬೈದು ಇನ್ನೊಬ್ಬರನ್ನು ಬಿಡುವಂತಿಲ್ಲ. ಇಬ್ಬರೂ ಬೇಕು. ಆದರೆ ಇಬ್ಬರನ್ನೂ ಸಮಾಧಾನಪಡಿಸಬೇಕು. ಇಬ್ಬರನ್ನೂ ಗದರಿಸಿಕೊಳ್ಳಬೇಕು.

"ಲೊ ಸೀನು, ನಿನ್ನ ರೂಮಿಗೆ ಹೋಗೊ ನೀನು. ಸುಮ್ಮನೆ ಹಾಗೆಲ್ಲ ದುಡುಕಬಾರದು, ಕಣೊ. ಹೋಗು, ಶಾಂತ. ನೀನೂ ಬಹಳ ದುಡುಕು ಸ್ವಭಾವ ದವಳು. ಇಬ್ಬರೂ ಆ ಮಾತನ್ನಲ್ಲಿಗೆ ಬಿಡಿ. ಹೋಗಿ, ಸ್ವಲ್ಪ ಹೊತ್ತಾದರೆ ಮನಸ್ಸು ಕೊಂಚ ಶಾಂತವಾಗುತ್ತೆ. ಎಲ್ಲ ಸರಿಹೋಗುತ್ತೆ" ಎಂದರು.

ಶಾಂತಳ ಮುಖದ ಮೇಲೊಂದು ನಗೆಯ ನೆರಳು ಸುಳಿಯಿತು. ಅದು ಅಪನಂಬಿಕೆ, ತಿರಸ್ಕಾರಗಳ ನಗು!

"ಸರಿಹೋಗುತ್ತೆ—ಒಂದೇ ದಿವಸ ಎಲ್ಲಾ ಸರಿಹೋಗೋದು" ಎಂದು ತಾನಾಗಿಯೆ ಅವಳ ಬಾಯಿಂದ ಮಾತು ಹೊರಬಿತ್ತು.

"ಥೂ! ಬಿಟ್ಟಿತು ಅನ್ನು, ಕೆಟ್ಟ ಮಾತಾಡಬೇಡ" ಎಂದರು ಗಂಗಮ್ಮ.

ಶಾಂತಳಿಗೂ ತಾನು ಆ ಮಾತಂದುದು ತಪ್ಪೆನಿಸಿತು. ಆದರೆ ಈಗ ನೆಲ ಬಿಟ್ಟುಕೊಟ್ಟರೆ ತಾನು ಉಳಿಯುವಂತಿಲ್ಲವೆಂದು ಅವಳ ಅಭಿಮಾನ ಹೇಳಿತು. ಆದರೂ ಮಾತೆತ್ತುವ ಧೈರ್ಯ ಬರಲಿಲ್ಲ. ಹೀಗಾಗಿ ಒಂದು ಕಡೆ ಮುಖ ಸಿಂಬಿಗಟ್ಟಿದ ಸೀನು, ಇನ್ನೊಂದು ಕಡೆ ಮುಖ ಸಪ್ಪೆಗೊಂಡ ಗಂಗಮ್ಮ, ಮತ್ತೊಂದು ಕಡೆ ಮುಖ ಸಿಡುಕುಗೊಂಡ ಶಾಂತ ಮಾತಿಲ್ಲದೆ ನಿಂತರು. ಮಳೆ ಸಿಡಿದು ಸುರಿಯುವ ಮೊದಲಿನ ಆಕಾಶದ ಮೌನದಂತೆ ತುಂಬಿತ್ತು—ಆ ಮೌನ. ಒಂದು ಕ್ಷಣ ಯಾರೂ ಮಾತಾಡಲಿಲ್ಲ. ಇನ್ನೇನು ಎಲ್ಲ ಹಗರಣ ಮುಗಿಯಿತು ಎಂದು ಗಂಗಮ್ಮ ಅಂದುಕೊಂಡರೂ ಇನ್ನೂ ಒಳಹೆದರಿಕೆ ಹೊಡೆದು ಕೊಳ್ಳುತ್ತಿತ್ತು. ಇಬ್ಬರೂ ತಮ್ಮ ತಮ್ಮ ರೂಮಿಗೆ ಹೊರಟುಹೋದರೆ ಸಾಕು, ಹೇಗಾದರೂ ಈ ಕಾವು ಇಳಿಯುವುದು ಎಂದುಕೊಂಡರು ಆ ಕ್ಷಣದಲ್ಲಿ. ಆದರೆ ಈ ಮೌನ, ಆಸೆ ಬಹಳ ಹೊತ್ತು ಉಳಿಯಲಿಲ್ಲ.

"ಹನ್ನೊಂದು ಗಂಟೆಗೆ ಬೆಂಗಳೂರಿಗೆ ರೈಲಿದೆ" ಎಂದಳು ಶಾಂತ ಮೆಲ್ಲನೆ.

ಶಾಂತಳ ಈ ಮಾತಿನಿಂದ ಗಂಗಮ್ಮನವರಿಗೂ ಸಹನೆ ಮೀರಿತು. ಸೊಸೆಯನ್ನು ತಾವು ವಹಿಸಿಕೊಂಡು ಮಾತಾಡಿದುದಕ್ಕೆ ಇಷ್ಟೇನೆ ಎನಿಸಿತು. ಅಲ್ಲದೆ ಈತನಕ ಸೊಸೆಯನ್ನು ಗದರಿಸಿಕೊಳ್ಳದೆ ಇರಲು ಇನ್ನೂ ಒಂದು ಕಾರಣವಿತ್ತು. ಶಾಂತಳ ಸ್ವಭಾವ ಮೊಂಡುತನದ್ದು. ಹೂಡಿದ ಹಟದಿಂದ ಹಿಂದೆಗೆಯುತ್ತಿರಲಿಲ್ಲ. ಒಳ್ಳೆಯ ಮಾತಿನಿಂದ ಅವಳನ್ನು ಒಲಿಸಿಕೊಂಡರೆ ಏನು ಬೇಕಾದರೂ ಮಾಡಲು ಸಿದ್ಧವಾಗಿರುತ್ತಿದ್ದಳು. ಆದರೆ ಕೊಂಚ ರೇಗಿಸಿದರೆ, ಬಿರುಸಾಗಿ ಮಾತಾಡಿದರೆ ಅವಳ ಹಟ ಹಾಗೆಯೆ ಗಟ್ಟಿಯಾಗುತ್ತಿತ್ತು. ಅವಳು ಮನೆಗೆ ಬಂದ ಎರಡು ವರ್ಷದಲ್ಲಿ ಈತನಕ ಅಂತಹ ಸಂದರ್ಭ ಅಷ್ಟಾಗಿ ಬಂದಿರಲಿಲ್ಲ. ಯಾವಾಗಲೂ ನಗುನಗುತ್ತಲೆ ಇರುತ್ತಿದ್ದಳು ಶಾಂತ. ಅಲ್ಲದೆ, ಸುಲಭವಾಗಿ ಎಲ್ಲರ ಕೂಡ ಹೊಂದಿಕೊಂಡಿದ್ದಳು. ಆದ್ದರಿಂದ ಗದರಿಕೆ, ಜಗಳಗಳಿಗೆ ಕಾರಣವೆ ಇರಲಿಲ್ಲ, ಆಸ್ಪದವೂ ಆಗುತ್ತಿರಲಿಲ್ಲ. ಆದರೂ ಸಂಸಾರದಲ್ಲಿ ಸಣ್ಣಪುಟ್ಟ ಸಂಘರ್ಷಣೆಗಳಿಲ್ಲದಿದ್ದರೆ ಅದು ಸಂಸಾರವೆನಿಸಿಕೊಳ್ಳುವುದೆ ಇಲ್ಲ. ಅಂತೆಯೆ ಒಂದೆರಡು ಸಣ್ಣ ಮಾತಾಗಿತ್ತು. ಆಗ ಶಾಂತಳನ್ನು ಅವರ ಮಾವ ಗದರಿಸಿಕೊಂಡಿದ್ದರು. ಆದರೂ ಅವಳು ಹಿಡಿದ ಹಟ ಬಿಡಲಿಲ್ಲ. ಆಗ ಗಂಗಮ್ಮನವರ ಒಳ್ಳೆಯ ಮಾತಿಗೆ, ನಾದಿನಿಯ ಪ್ರೀತಿಯ ಕಡೆಗೆ, ಶಾಂತ ಬಾಗಿದ್ದಳು. ಹಿಡಿದ ಕೆಲಸ ಸಾಧಿಸುವ ಅವಳ ಛಲ ಗಂಗಮ್ಮನವರಿಗೆ ಗೊತ್ತಿತ್ತು. ಆದ್ದರಿಂದ ಒಳ್ಳೆಯ ಮಾತಿನಲ್ಲೆ ಅವಳನ್ನು ದಾರಿಗೆ ತಂದುಕೊಂಡಿದ್ದರು. ಆದರೆ ಈಗ ಅವರಿಗೂ ತುಟಿ ಕಚ್ಚಿಕೊಂಡಿರಲಾಗಲಿಲ್ಲ.

"ಏನೆ ಅದು? ಹನ್ನೊಂದು ಗಂಟೆಗೆ ರೈಲಿದೆಯಂತೆ! ಎಲ್ಲರಿಗೂ ಗೊತ್ತಿದೆ!" ಎಂದರು ಕೊಂಚ ತಿಣುಕುವವರಂತೆ.

"ಅತ್ತಿಗೆ ಹೆದರಿಸ್ತಾ ಇದಾಳೆ, ಅಮ್ಮಾ. ಹೊರಟು ಹೋಗ್ತೀನೀಂತ ಹೆದರಿಕೆ ಹಾಕ್ತಿದಾಳೆ" ಎಂದು ಸೀನು ನಗೆಯಾಡಿದ.

ಅವನ ದನಿಯ ಅಣಕು ಶಾಂತಳನ್ನು ಮತ್ತೆ ಕೆರಳಿಸಿತು.

"ನೀನು ಸುಮ್ಮನೆ ಬಾಯಿ ಮುಚ್ಚಿಕೊಂಡಿರೊ, ಸಾಕು. ನಿನ್ನನ್ನ ಯಾರು ಬಾ ಅಂದರು ಎಲ್ಲದಕ್ಕೂ, ಬಾಯಿ ಹಾಕ್ಕೊಂಡು. ಸದ್ಯ! ಇನ್ನು ಇಲ್ಲಿ ಒಂದು ಕ್ಷಣವೂ ನಾನು ಇರೋದಿಲ್ಲ. ಈಗಲೆ ರೈಲಿಗೆ ಹೊರಟು ಬಿಡ್ತೀನಿ" ಎಂದಳು ಶಾಂತ, ಅವನ ಕಡೆಗೆ ಕೆಂಗಣ್ಣು ಬೀರಿ.

" ನಿನ್ನ ಕಾಲಿಗೆ ಬಿದ್ದು, ಇಲ್ಲೇ ಇದ್ದು, ನಮ್ಮನ್ನೆಲ್ಲ ಕಾಪಾಡಮ್ಮ ಅಂತ ಯಾರೂ ಬೇಡಿಕೊಳ್ಳೋದಿಲ್ಲ, ಅತ್ತಿಗೆ" ಎಂದ ಸೀನು, ಧೈರ್ಯ ತೋರುವವನಂತೆ.

ಮತ್ತೆ ಮಾತು ಮಿತಿಮೀರಿತೆಂದು ಗಂಗಮ್ಮನವರಿಗೆ ಅನಿಸಿತು. ತಕ್ಷಣವೆ ಸೀನುವನ್ನು,

" ಲೊ, ಸೀನು. ನೀನು ಸುಮ್ಮನೆ ಹೋಗ್ತೀಯೊ ಇಲ್ಲವೊ. ನಿನ್ನ ರೂಮಿಗೆ ಹೋಗೊ" ಎಂದು ಅವನ ಕಡೆ ಬಿರುನೋಟದಿಂದ ನೋಡಿದರು. ಆದರೆ ಸೀನ್ನ ನಿಂತಲ್ಲಿಯೆ ಹಾಗೆಯೆ ನಿಂತಿದ್ದ. ಕೊಂಚವೂ ಮಿಸುಕಾಡಲಿಲ್ಲ. ಗಂಗಮ್ಮನವರಿಗೆ ಅಲ್ಲಿ ತಮ್ಮ ಪ್ರಯತ್ನ ಸಫಲವಾಗದುದು ತಿಳಿದು ಶಾಂತಳ ಹತ್ತಿರ ಬಂದರು. ಮೆಲ್ಲನೆ ಮೃದುವಾಗಿ ನೇವರಿಸುವ ದನಿಯಲ್ಲಿ ಸೊಸೆಯನ್ನು ಸಂತಯಿಸಲು ಯತ್ನಿಸಿದರು.

" ಶಾಂತ, ಹಾಗೆಲ್ಲ ಆಡಬಾರದಮ್ಮ. ನೋಡಿದೋರು ನಾಲ್ಕು ಜನ ಏನಂತಾರೆ. ಮನೆ ಅಂತ ಅಂದಮೇಲೆ ಒಂದು ಮಾತು ಬರುತ್ತೆ, ಒಂದು ಮಾತು ಹೋಗುತ್ತೆ. ಸಂಸಾರ ಅಂದಮೇಲೆ ಅದೆಲ್ಲ ಇಲ್ಲದೆ ಆಗತ್ತೇನು ? ಅದನ್ನೆಲ್ಲ ಅಗಾಧ ಮಾಡಿಕೊಂಡರೆ ಹೇಗೆ ಹೇಳು. ನೀನೇನೂ ಚಿಕ್ಕವಳಲ್ಲ. ಬುದ್ಧಿ ತಿಳಿದವಳು. ಸಹನೆ ಕಲಿತುಕೊಳ್ಳಬೇಕು."

" ಹಾಗಂದರೆ ಅವನು ಅಂದುದನ್ನೆಲ್ಲ ಕೇಳಿಕೊಂಡು ತೆಪ್ಪಗೆ ಕೂತಿರಬೇಕೇನೊ ? " ಎಂದು ಶಾಂತ ಸೆಟೆದುಕೊಂಡೆ ಉತ್ತರಿಸಿದಳು.

" ಹಾಗಂತ ನಾನಂದೆನೇನು ? ಈಗ ಮಾತಾಯಿತು. ಅವನೂ ಏನೇನೊ ಅಂದ. ನೀನೇನು ಸುಮ್ಮನೆ ಇದ್ದೆಯಾ ? ಚಿಕ್ಕ ಹುಡುಗರು ಜಗಳ ಆಡುವ ಹಾಗೆ ಜಗಳವಾಡಿದಿರಿ. ಇನ್ನೇನು ಮುಗಿಯಿತಲ್ಲ. ನಿನ್ನ ರೂಮಿಗೆ ಹೋಗು. ಸ್ವಲ್ಪ ಹೊತ್ತು ಬಿಟ್ಟುಕೊಂಡು ಊಟಕ್ಕೇಳೋವರಂತೆ ಎಲ್ಲರೂ."

ಶಾಂತಳ ಮನಸ್ಸು ಅತ್ತೆಯ ಈ ಮಾತಿನಿಂದ ಕರಗಿತು. ಅತ್ತೆಗೆ ತನ್ನಲ್ಲಿ ಎಷ್ಟು ಪ್ರೀತಿವಿಶ್ವಾಸವೆಂಬುದು ಮೊದಲಿನಿಂದಲೂ ಅವಳ ಅನುಭವಕ್ಕೆ ಬಂದಿತ್ತು. ಈಗಲೂ ಅತ್ತೆಯ ಮಾತಿಗೆ ಹೂಂಗುಟ್ಟಿತು ಮನಸ್ಸು. ಆದರೆ ಇಷ್ಟು ಹೊತ್ತು ಬಿಗಿಯಾಗಿದ್ದು ಈಗ ಒಂದೆ ಬಾರಿಗೆ ಸಡಿಲಬಿಡುವುದು ಸರಿಯಲ್ಲ.

ಇನ್ನೊಂದು ಸಾರಿ ಉಪಚಾರದ ಮಾತಾಡಲಿ ಎಂದು ಆಸೆ. ಅದಕ್ಕೆಂದೆ ಹಾಗೆಯೆ ನಿಂತಿದ್ದಳು. ಮನಸ್ಸಿನಲ್ಲಿಲ್ಲದ ಬಿಗಿ ಮುಖದ ಮೇಲೆ ಕಾಣಿಸಿಕೊಂಡಿತ್ತು. ಗಂಗಮ್ಮನವರು ಅವಳ ಒಳಗಿನ ಮಿದು ಕಂಡುಕೊಂಡರೊ ಏನೊ—ಮತ್ತೊಮ್ಮೆ ಹೇಳಿದರು :

"ನಡಿಯಮ್ಮ ಶಾಂತ, ನಡಿ. ನಿನ್ನ ರೂಮಿಗೆ ಹೋಗು. ಸಾಸಿವೆ ಕಾಳನ್ನೆಲ್ಲ ಸಾವಿರ ಮಾಡಿಕೊಂಡು ಕೂತರೆ ಸಂಸಾರ ಹೇಗೆ ಮಾಡೋದು, ನಡಿ" ಎಂದರು. ಶಾಂತಳಿಗೆ ಬೇಕಾಗಿದ್ದುದೂ ಅಷ್ಟೆ. ಈ ಮಾತು ಸಾಕಾಯಿತು, ಅವಳನ್ನು ಪೂರ್ತಿಯಾಗಿ ಮಿದುಮಾಡಿ ಒಲಿಸಿಕೊಳ್ಳಲು. ಇನ್ನೇನು ಹೆಜ್ಜೆಯಿಟ್ಟು ತನ್ನ ರೂಮಿನ ಕಡೆ ಹೊರಡಬೇಕೆನ್ನುವಷ್ಟರಲ್ಲಿ, ಮತ್ತೆ ಸೀನು ಆಡಿದ ಮಾತು ಅವಳನ್ನು ಕೆಣಕಿಬಿಟ್ಟಿತು. ಉರುಬುವ ಕೊಳವೆಯಿಂದ ಉರುಬಿದಾಗ ಉರಿದ ಸೌದೆ, ಉರುಬುವುದನ್ನು ನಿಲ್ಲಿಸಿದೊಡನೆ ಹೊಗೆಯುಗುಳುವಂತೆ, ಅತ್ತೆಯ ಮಾತಿಗೆ ಮಿದುಗೊಂಡಿದ್ದ ಮನಸ್ಸು ಈಗ ಮತ್ತೆ ಹೊಗೆಕಾರಿತು : "ಕಾಲಿಗೆ ಬೀಳಮ್ಮ, ಕಾಲಿಗೆ ಬೀಳು! ಅದೊಂದು ಬಾಕಿ" ಎಂದುಬಿಟ್ಟ ಅವನ ಅಣಕುಮಾತು ಶಾಂತಳನ್ನು ಮತ್ತೆ ಗಟ್ಟಿಗೊಳಿಸಿತು. ಎತ್ತಿದ ಹೆಜ್ಜೆ ಹಿಂದಕ್ಕೆ ಬಂತು, ಮುಖ ಹೊಗೆಯಂತೆ ಧುಮುಗುಟ್ಟಿತು.

"ನೋಡಿದಿರಾ ಅತ್ತೆ, ಅವನ ಮಾತು! ನಾನು ಖಂಡಿತ ಇಲ್ಲಿರುವುದಿಲ್ಲ. ಈ ಕ್ಷಣ ಹೊರಟುಬಿಟ್ಟೆ. ಮತ್ತೆ ಈ ಹೊಸಲನ್ನೆಂದೂ ಮೆಟ್ಟುವುದಿಲ್ಲ" ಎಂದು ಭುಸುಗುಟ್ಟಿದಳು.

"ಹಾಗೆಲ್ಲ ಆಡಬಾರದಮ್ಮ, ಶಾಂತ" ಎಂದು ಗಂಗಮ್ಮ ಅವಳನ್ನು ಮತ್ತೆ ಸಂತಯಿಸಲು ಯತ್ನಿಸಿದರು.

ಆ ವೇಳೆಗೆ ಸರಿಯಾಗಿ ರಂಗಣ್ಣನವರು ಒಳಕ್ಕೆ ಬಂದರು. ಗಂಗಮ್ಮನವರು ತಮ್ಮ ಯಜಮಾನರು ಬಂದುದರಿಂದ ಸ್ಥಿತಿ ಹೇಗಾದೀತೊ ಎಂದು ಬಹಳ ಹೆದರಿದರು. ರಂಗಣ್ಣನವರು ಬರುತ್ತಲೆ, ಶಾಂತ ಸೆರಗನ್ನು ಸರಿ ಮಾಡಿಕೊಂಡು ನಿಂತಲ್ಲಿಯೆ ನಿಂತಳು. ಅತ್ತೆ ಮಾವ ಎನ್ನುವುದಕ್ಕಿಂತ ಹೆಚ್ಚಿಗೆ ಅವರಿಬ್ಬರೂ ತಾಯಿತಂದೆಗಳಂತಿದ್ದರು. ಅವಳನ್ನು ಮಗಳಂತೆ ನೋಡಿಕೊಳ್ಳುತ್ತಿದ್ದುದರಿಂದ ಅವಳಿಗೂ ಮಗಳ ಸ್ವಾತಂತ್ರ್ಯವೆ ಇತ್ತು. ಆದ್ದರಿಂದ ಮಾವನಿಗೆ ತೋರಬೇಕಾದ ಗೌರವಕ್ಕಾಗಿ ಕೊಂಚ ತಲೆತಗ್ಗಿಸಿ

ನಿಂತಳೆ ಹೊರತು ಶಾಂತ ಅಲ್ಲಿಂದ ಅಲುಗಾಡಲಿಲ್ಲ. ಸೀನುವಂತೂ ನಿಂತಲ್ಲಿಯೆ ವಿಗ್ರಹದಂತೆ ನಿಂತಿದ್ದ. ನೋಡಿ ರಂಗಣ್ಣನವರಿಗೆ ಮನೆಯಲ್ಲೇನೋ ರಾದ್ಧಾಂತ ನಡೆದಿದೆಯೆನಿಸಿತು. ಹೊರಗಿನಿಂದ ಮನಸ್ಸಿಗೆ ಬೇಸರ ತುಂಬಿಕೊಂಡೆ ಮನೆಗೆ ಬಂದಿದ್ದರು. ಮನೆಯಲ್ಲಿಯ ವಾತಾವರಣವೂ ವಿಷಮಗೊಂಡಿದೆಯೆನಿಸಿದೊಡನೆ ಅವರು ಸಿಡುಕಿನಿಂದ,

"ಏನಿದು ಮನೆಯಲ್ಲಿ, ಏನು ಗಲಾಟೆ?" ಎನ್ನುತ್ತಲೆ ಉತ್ತರಕ್ಕಾಗಿ ಕಾಯದೆ ತಮ್ಮ ರೂಮಿನೊಳಕ್ಕೆ ಹೊರಟುಹೋದರು. ಅಲ್ಲಿ ತಾವು ಹಾಕಿಕೊಂಡಿದ್ದ ಕರಿಯ ಅಂಗಿಯನ್ನು ಬಿಚ್ಚಿಟ್ಟು ಹೆಗಲ ಮೇಲೊಂದು ಟವಲು ಹಾಕಿಕೊಂಡು ಬಚ್ಚಲುಮನೆಗೆ ಹೊರಡಲು ಸಿದ್ಧವಾಗಿ ಹೊರಕ್ಕೆ ಬಂದರು, ಬರುತ್ತ ಮತ್ತೆ, "ಏನಿದು ಅಂತೀನಿ. ಏನು ರಾದ್ಧಾಂತ ಮನೇಲಿ. ಏನೊ ಸೀನು, ಏನಮ್ಮ ಶಾಂತ—ಏನು ಎಲ್ಲಾ ಹೀಗೆ ನಿಂತುಬಿಟ್ಟಿದ್ದೀರಿ?" ಎಂದರು. "ಏನೊ ತಕರಾರು, ತಂಟೆಗಳು ಇದ್ದೇ ಇರುತ್ತವೆ" ಎಂದು ಗೊಣಗಿಕೊಂಡು ಬಚ್ಚಲುಮನೆಯ ಕಡೆ ಹೊರಟರು.

"ಶಾಂತ ಊರಿಗೆ ಹೊರಟು ನಿಂತಿದಾಳೆ! ನೀವಾದರೂ ಹೇಳಿ" ಎಂದರು ಗಂಗಮ್ಮ.

"ಯಾಕಮ್ಮ ಶಾಂತ—ಏನು ಬೇಜಾರಾಯಿತೆ?" ಎಂದರು ರಂಗಣ್ಣ ಇದ್ದುದರಲ್ಲಿಯೆ ಸಮಾಧಾನವಾಗಿ. ತಮ್ಮ ಕೆಲಸ ಅಷ್ಟಕ್ಕೆ ಮುಗಿಯಿತೆಂದು ಕೊಂಡಂತೆ ಬಚ್ಚಲುಮನೆಗೆ ಹೊರಟೇ ಹೋದರು.

ಶಾಂತ ತಲೆ ತಗ್ಗಿಸಿ ನಿಂತವಳು ಹಾಗೆಯೆ ನಿಂತಿದ್ದಳು. ಗಂಗಮ್ಮನವರು ಬಚ್ಚಲು ಮನೆಯ ಬಾಗಿಲ ಹತ್ತಿರ ಬಂದು ರಂಗಣ್ಣನವರನ್ನು ಕುರಿತು, "ಸುಮ್ಮನೆ ನಿಂತಿದಾಳೆ. ಯಾಕೇಂತ ಕೇಳಬಾರದೆ, ಇನ್ನೊಂದು ಸಾರಿ" ಎಂದರು.

"ನನಗೆ ಅದೇ ಕೆಲಸ. ಬೇರೇನೂ ಕೆಲಸವೆ ಇಲ್ಲ, ನನಗೆ. ಅಡಿಗೆ ಆಗಿದ್ದರೆ ಊಟಕ್ಕೆ ಬಡಿಸು. ನಾನು ಈಗ ಕೋರ್ಟಿಗೆ ಹೋಗಬೇಡವೆ? ನನ್ನ ಕೇಸುಗಳ ಯೋಚನೆ ಮಾಡಲೆ—ಇಲ್ಲ, ನಿಮ್ಮ ತಂಟೆತಕರಾರುಗಳನ್ನು ನೋಡುತಾ ಕುಳಿತುಕೊಳ್ಳಲೆ? ಇಷ್ಟಕ್ಕೂ ನೀವು ಹೆಂಗಸರು—ಇಷ್ಟಕ್ಕೆ ಅಷ್ಟಕ್ಕೆಲ್ಲ ರಾದ್ಧಾಂತ ಮಾಡಿಡತೀರಿ. ಅವಳು ನಿನ್ನ ಸೊಸೆ ಅಲ್ಲವೆ? ನಿನಗೆ

ಹೇಳದೆ ಇದ್ದದ್ದನ್ನ ನನಗೆ ಹೇಳುವಳೆ? ನೀನೇ ಕೇಳು."

"ಏನೋ ಸಣ್ಣ ಪುಟ್ಟ ಮಾತು" ಎಂದು ರಾಗ ತೆಗೆದರು ಗಂಗಮ್ಮ.

"ಸಣ್ಣ ಪುಟ್ಟ ಮಾತಂತೆ! ಸಣ್ಣ ಪುಟ್ಟ ಮಾತು!" ಎಂದು ಶಾಂತ ಗೊಣಗಿದಳು.

"ಶಾಂತ, ಸಣ್ಣ ಪುಟ್ಟ ಮಾತಲ್ಲದೆ ಇನ್ನೇನೆ?" ಎಂದು ಗಂಗಮ್ಮ ಅವಳ ಕಡೆ ತಿರುಗಿದರು.

"ಹೋಗಲಿ ಬಿಡಮ್ಮ. ಅತ್ತಿಗೆ ಇಲ್ಲಿದ್ದು ನಮಗೆ ಮಾಡೊ ಉದ್ಧಾರ ಅಷ್ಟರಲ್ಲೆ ಇದೆ" ಎಂದು ಸೀನು ಅಂದ.

ಹುಲಿ ಎರಗುವಂತೆ ಶಾಂತ ಅವನ ಮೇಲೆರಗಿದಳು.

"ನಿನ್ನನ್ನು ಕೇಳಿ ಯಾರೂ ಹೋಗೊಲ್ಲ, ಇರೊಲ್ಲ. ನಾನೇನೂ ನಿನ್ನ ಮನೆಗೆ ಬಂದಿಲ್ಲ."

"ನಮ್ಮ ಮನೆಯಲ್ಲದೆ ಮತ್ತೆ ಯಾರದ್ದೊ—ಈ ಮನೆ!"

"ನಿನಗೊಬ್ಬನಿಗೆ ಅಲ್ಲ ಇಲ್ಲಿ ಹಕ್ಕಿರೋದು. ನನ್ನನ್ನು ಮದುವೆ ಮಾಡಿಕೊಂಡು ಬಂದ ಅವರದ್ದೂ ಹಕ್ಕಿದೆ. ಇಷ್ಟಕ್ಕೂ ನೀನೇನು ದುಡಿಯೋ ದಿಲ್ಲ. ನಿನ್ನ ಹಂಗಿನ ಅನ್ನ ನಾನೇನು ತಿನ್ನತಾ ಇಲ್ಲ, ನಿನ್ನ ಕೈಲಿ ಹೋಗು ಅನ್ನಿಸಿಕೊಳ್ಳೋಕೆ."

ಗಂಗಮ್ಮನವರು ಈ ವಾಗ್ವಾದವನ್ನು ಮುರಿಯಲು ಮಧ್ಯೆ ಬಾಯಿ ಹಾಕಿದರು. ಯಜಮಾನರೆದುರಿಗೆ ಮೃದುವಾಗಿ ಕಾಣಬಾರದೆಂದು ಕೊಂಚ ಗಡಸಿನಲ್ಲಿ,

"ಶಾಂತ, ಸ್ವಲ್ಪ ನಿಧಾನಿಸಿ ಮಾತಾಡು. ಅತ್ತೆಮಾವಂದಿರೆದುರಿಗೆ ಹೀಗೆ ಮೈದುನನ ಹತ್ತಿರ ಜಗಳವಾಡಬಾರದು. ಸ್ವಲ್ಪ ತಗ್ಗಿ ಬಗ್ಗಿ ನಡೆಯ ಬೇಕು" ಎಂದರು. ಇದರಿಂದ ಶಾಂತ ಕೆರಳಿದಳು. "ಅದಕ್ಕೆ, ಈ ತರಹ ಜಗಳವಾಗದೆ ಇರಲಿ ಅಂತಲೆ ನಾನು ಊರಿಗೆ ಹೊರಟಿರುವುದು" ಎಂದಳು.

ರಂಗಣ್ಣನವರು ನೀರು ಹುಯ್ದುಕೊಳ್ಳುವಾಗ ಈ ಕಡೆ ಗಮನ ಕೊಟ್ಟರು. ಅವರ ಕೈ ನೀರಿನ ಹಂಡೆಗೆ ಬಡಿಯಿತು. ಆ ಹೊತ್ತಿಗೆ ಸರಿಯಾಗಿ ಶಾಂತಳ ಈ ಮಾತೂ ಕೇಳಿ ರೇಗಿತು.

"ಏನಾದರೂ ಮಾಡಿಕೊಂಡು ಹೋಗಲಿ ಬಿಡು. ಯಾರ ಮಾತನ್ನಾದರೂ

ಕೇಳುವ ಜನಕ್ಕಾದರೆ ಹೇಳಬಹುದು. ಅವಳ ಗಂಡ ಹನ್ನೆರಡು ಗಂಟೆಗೆ ಬರತಾನಲ್ಲ, ಅವನನ್ನು ಕೇಳಿ ಆಮೇಲೆ ಏನು ಬೇಕಾದರೂ ಮಾಡಿಕೊಂಡು ಹಾಳಾಗಿಹೋಗಲಿ" ಎಂದು ಕೋಪಕ್ಕೆ ದನಿಗೊಟ್ಟರು.

"ಅವರು ಬಂದರೇನು—ಗೊತ್ತೇ ಇದೆ. ನಿಮ್ಮ ಕಡೆ ಅವರೂ ಸೇರಿ ಕೊಳ್ಳತಾರೆ. ಅವರು ತಮ್ಮನನ್ನು ಅಂಕೆಯಲ್ಲಿಟ್ಟುಕೊಂಡಿದ್ದು, ತಮ್ಮ ಅವರ ಮಾತನ್ನು ಕೇಳಿದ್ದು ಎಲ್ಲ ನಾನೂ ನೋಡತಾನೆ ಇದೀನಿ ಎರಡು ವರ್ಷದಿಂದ. ಸಾಕು, ಸಾಕು."

"ಶಾಂತ, ನಿನಗೆ ನಾವು ತೋರಿಸಿದ ಪ್ರೀತಿಯೆಲ್ಲ ವ್ಯರ್ಥ. ಮಾವ ನೋರಿಗೆ ಹೀಗೆ ಜವಾಬು ಕೊಡತಾರೇನೆ? ಯಾವತ್ತು ಬುದ್ಧಿ ಕಲಿತುಕೊಳ್ಳ ತೀಯೊ ನೀನು, ಬೇರೆ ಕಾಣೆ" ಎಂದರು ಗಂಗಮ್ಮ.

"ಅವಳಿಗೆ ಬುದ್ಧಿ ಬರುತ್ತೆ—" ಎಂದು ಸೀನು ಅಣಕಿಸಿದ.

"ಈ ಮನೇಲಿ ಬುದ್ಧಿ ಇರೋವನೆ ಇದ್ದುಕೊಳ್ಳಲಿ, ನಾನಿರೊಲ್ಲ" ಎಂದು ಶಾಂತ ಹೊರಡಲು ಸಿದ್ಧವಾದಳು.

"ಹಾಗೆಲ್ಲ ಹೆಣ್ಣುಮಗಳು ಹಟ ಹಿಡಿಬಾರದು, ಶಾಂತ" ಎಂದು ಗಂಗಮ್ಮ ಮತ್ತೆ ಅವಳನ್ನು ಸಂತಯಿಸಲು ಬಂದರು.

"ಹೋಗಲಿ ಬಿಡೆ, ಹಾಳಾಗಿ ಹೋಗಲಿ. ಹಟಮಾರಿ ಅದು" ಎಂದು ಒಳಗಿನಿಂದಲೆ ರಂಗಣ್ಣ ಚೀರಿದರು.

"ಇಷ್ಟಕ್ಕೆಲ್ಲ ಏನಮ್ಮ ಆದ್ದು, ಅವನು ನಿನ್ನನ್ನು ಒಂದೆರಡು ಮಾತಂದ ಅಂತ ತಾನೆ. ಅಷ್ಟಕ್ಕೆಲ್ಲ ನೀನು ಸಿಟ್ಟಾಗಬೇಕೆ? ಹೀಗೆ ಹೊರಟುನಿಂತು ಹಟ ಮಾಡಬೇಕೆ? ಚೆನ್ನಾಯ್ತು" ಎಂದರು ಗಂಗಮ್ಮ.

ಶಾಂತ ತನ್ನ ರೂಮಿನೊಳಕ್ಕೆ ಬಂದು ತನ್ನ ಸೀರೆ, ರವಕೆ, ಬಟ್ಟೆಗಳನ್ನು ಚೀಲಕ್ಕೆ ಹಾಕುತ್ತಿದ್ದಳು. ಗಂಗಮ್ಮ ಅಲ್ಲಿಗೆ ಬಂದು ನಿಂತರು.

"ಒಂದೆರಡು ಮಾತಂದ, ಅಲ್ಲವೆ—ಇನ್ನೂ ಚಿಕ್ಕ ಹುಡುಗ."

"ನಿನ್ನದೂ ತಪ್ಪಲ್ಲವೆ, ಯೋಚಿಸು. ಅವನು ಎಷ್ಟು ಆಸೆಯಿಂದಿದ್ದ. ಇವತ್ತು ಏಳು ಗಂಟೆ ರೈಲಿಗೆ ಹೋಗಬೇಕೂಂತ ಹೇಳಿ ನಿನ್ನೆ ರಾತ್ರಿ ನಿನ್ನ ಕೈಲಿ ಬೀಗದಕ್ಕೆ ಕೊಟ್ಟ. ಬೇಗ ಎಬ್ಬಿಸು ಅತ್ತಿಗೆ ಅಂತ ನಿನಗೆ ಹೇಳಿದ್ದ. ನೀನು ಆ ಬೀಗದಕ್ಕೆ ಕಳೆದುಬಿಡೋದೆ?"

"ಒಂದು ಬೀಗದಕ್ಕೈ ಕಳೆದುಹೋದುದಕ್ಕೆ ರಂಪರಾದ್ಧಾಂತ ಮಾಡಬೇಕೇನು? ಮನೆ ಹೆಂಚೆಲ್ಲ ಹಾರಾಡೊ ಹಾಗೆ ಕಿರಿಚಿಕೊಳ್ಳಬೇಕೆ! ಅಕ್ಕಪಕ್ಕದ ಮನೆಯವರು ಕೇಳಿ ಏನಂದುಕೊಂಡಾರು ಅನ್ನೊ ಜ್ಞಾನ ಅವನಿಗೆ ಬೇಡವೆ, ಅತ್ತೆ. ಇಷ್ಟಕ್ಕೂ ಅವನು ಬೆಂಗಳೂರಿಗೆ ಹೋಗದೆ ಇದ್ದಿದ್ದರೆ ಕೊಳ್ಳೆಹೋಗತಾ ಇದ್ದಿದ್ದೇನು?"

ಬೆಳಗಿನ ನಿರಾಶೆ, ಇಷ್ಟು ಹೊತ್ತಿನ ರಂಪ, ಜತೆಗೆ ಈಗ ತಾತ್ಸಾರ—ಸಹಿಸಲಾಗಲಿಲ್ಲ. ಸೀನು ಹೊರಗಿನಿಂದಲೆ ಗುಡುಗಿದ:

"ನಿನಗೇನು ಹೋಯಿತು ಹೇಳು. ನಾಲ್ಕು ತಿಂಗಳಿಂದ ಸಂಜೆಯೆಲ್ಲ ಪ್ರಾಕ್ಟೀಸ್ ಮಾಡಿದ್ದೆಲ್ಲ ವ್ಯರ್ಥವಾಯಿತು. ಎಷ್ಟು ದಿವಸದಿಂದ ಕಷ್ಟಪಟ್ಟಿದ್ದೆ, ಈ ಟೀಮಿಗೆ ನನ್ನನ್ನು ಸೇರಿಸಿಕೊಳ್ಳಲಿ ಅಂತ. ಈ ಸಾರಿ ಏನೊ ನನಗೆ chance (ಚಾನ್ಸ್) ಸಿಕ್ಕಿತು. ಈವತ್ತು ಹನ್ನೆರಡು ಗಂಟೆಗೆ ಸರಿಯಾಗಿ ಮ್ಯಾಚಿತ್ತು. ಅಷ್ಟು ದಿನದಿಂದ ಆಸೆಪಟ್ಟಿದ್ದು ಹಾಳಾಗಿಹೋಯ್ತು. ನಾಲ್ಕು ತಿಂಗಳಿಂದ ಕಷ್ಟಪಟ್ಟಿದ್ದೆಲ್ಲ ಇವತ್ತು ನಿನ್ನಿಂದ ಕೆಟ್ಟು ಕುಲಗೆಟ್ಟುಹೋಯಿತು."

"ಏನು ಮಹಾ ನಿನ್ನ ಕ್ರಿಕೆಟ್ ಮ್ಯಾಚಿಂದಲೆ ಪ್ರಪಂಚ ಉದ್ಧಾರವಾಗತಿತ್ತು! ಇಲ್ಲದಿದ್ದರೆ ಹೋಯ್ತು" ಎಂದಳು ಶಾಂತ.

ಸೀನು ಅತ್ತಿಗೆಯ ರೂಮಿನ ಬಾಗಿಲಲ್ಲಿ ನಿಂತಿದ್ದ ತಾಯಿಗೆ ಮತ್ತೆ ದೂರಿಡಲಾರಂಭಿಸಿದ. ತನ್ನ ಕ್ರಿಕೆಟ್ಟನ್ನು, ಪ್ರಾಣಕ್ಕೆ ಪ್ರಾಣವಾಗಿದ್ದ ಮ್ಯಾಚನ್ನು ಹಾಳುಮಾಡಿದ್ದಲ್ಲದೆ, ಅದನ್ನು ಅಸಡ್ಡೆಯಿಂದ, ತಾತ್ಸಾರದಿಂದ ಕಡೆಗಣಿಸುವುದನ್ನು ಕಂಡು ಅವನ ಎದೆ ಬೆಂಕಿಯ ಬೆಟ್ಟವಾಯಿತು.

"ನೋಡಿದೆಯಮ್ಮ, ಅವಳ ಅಹಂಕಾರ! ನನ್ನ ಬೀಗದಕ್ಕೈ ಕಳೆದು, ಕ್ರಿಕೆಟ್ಟಿನಲ್ಲಿ ನನಗಿದ್ದ ಚಾನ್ಸ್ ಹಾಳುಮಾಡಿದ್ದೂ ಅಲ್ಲದೆ, ಈಗ ಅಸಡ್ಡೆಯಿಂದ ಮಾತಾಡೋದನ್ನ, ನನ್ನನ್ನೆ ಬೈಯೋದನ್ನ."

"ಅವಳ ಕೈಲಿ ಬೀಗದಕ್ಕೈ ಯಾಕೆ ಕೊಟ್ಟೆ ನೀನು?"

"ಹೌದಮ್ಮ, ನನಗೇನು ಕನಸೆ—ಅವಳು ಅದನ್ನು ಕಳೆದುಬಿಡತಾಳೆ ಅಂತ. ಇಷ್ಟು ದಿನವೂ ನನ್ನ ಪೆಟ್ಟಿಗೆ ಬೀಗದಕ್ಕೈ ಅತ್ತಿಗೇನೆ ಅಲ್ಲವೆ ಇಟ್ಟುಕೊಂಡಿರತಿದ್ದದ್ದು? ಆದರೆ ಈಗ ಗೊತ್ತಾಯಿತು, ಅವಳೆಂತಹ ಬೇಜವಾಬ್ದಾರಿ ಅಂತ" ಎಂದು ಸೀನು ತನ್ನ ರೂಮಿಗೆ ಹೊರಟುಹೋದ.

ಶಾಂತ ಮಾತಿಲ್ಲದೆ ತನ್ನ ಬಟ್ಟೆಬರೆಗಳನ್ನೆಲ್ಲ ಚೀಲಕ್ಕೆ ಹಾಕಿಕೊಂಡಳು. ಮೂಲೆಯಲ್ಲಿ ಹಾಕಿದ್ದ ಸೀರೆಯನ್ನೆತ್ತಿಕೊಂಡಾಗ ಇಷ್ಟೆಲ್ಲ ಜಗಳಕ್ಕೂ ಮೂಲ ವಾದ ಸಣ್ಣ ಬೀಗದಕೈ ಬಿದ್ದ ಸಪ್ಪಳವಾಯಿತು. ಶಾಂತ ಸಿದ್ಧವಾಗುತ್ತಿದ್ದುದನ್ನೆ ಗಂಗಮ್ಮ ಮೌನವಾಗಿ ನೋಡುತ್ತ ನಿಂತಿದ್ದರು. ಅವಳು ಹೊರಡಲು ಸಿದ್ಧವಾಗಿ ಅತ್ತೆಗೆ ನಮಸ್ಕಾರ ಮಾಡಲು ಬಂದಳು. ಆಗಲೂ ಸೊಸೆಯ ಮೇಲಿನ ಪ್ರೀತಿ ತಡೆಯಲಾಗಲಿಲ್ಲ.

" ಶಾಂತ, ನಿನಗೇನು ದುರ್ಬುದ್ಧಿ ಬಂತೆ ? ಈವತ್ತು ಯಾಕೆ ಹೀಗೆ ಆಡತಾ ಇದೀಯೆ ಹುಚ್ಚು ಹಿಡಿದವರ ಹಾಗೆ" ಎಂದರು. ಅವರ ಕಣ್ಣಿನಲ್ಲಿ ಹನಿಯಾಡಿತೊ ಇಲ್ಲವೊ, ಅವರ ಧ್ವನಿಯಲ್ಲಂತೂ ಯಾರೆದೆಯನ್ನಾದರೂ ಮಿಾಟುವಂತಹ ಮಿಡುಕಿತ್ತು. ಅಷ್ಟರಲ್ಲಿಯೆ ರಂಗಣ್ಣ ಊಟಕ್ಕೆ ಕುಳಿತಿದ್ದವರು ಆರ್ಭಟಿಸಿದರು :

" ಏನು ಕೊಚು ಹತ್ತಿತೀಯೆ ಅವಳಿಗೆ. ನಮ್ಮ ಮಾತು ಕೇಳದೆ ಹೋಗೋರಿಗೆ ನಾವೇನು ಮಾಡೋದು. ಹಾಳಾಗಿ ಹೋಗಲಿ."

" ಥೂ, ಬಿಟ್ಟೆತು ಅನ್ನಿ. ಕೋಪದಲ್ಲಿ ಅವಳಿಗೆ ಹುಚ್ಚು ಹಿಡಿದಿದೆ ಅಂದರೆ ನೀವು ಕೂಡ ಹಾಗೆ ಆಡಬೇಕೆ ?" ಎನ್ನುತ್ತ ಗಂಗಮ್ಮ ಅಡಿಗೆಮನೆಗೆ ಬಂದರು.

ಅತ್ತಿಗೆ ಹೊರಡುವುದನ್ನೆ ನೋಡುತ್ತ ನಿಂತಿದ್ದ ಸೀನು ತನ್ನ ರೂಮಿನ ಬಾಗಿಲಿಗೆ ಒರಗಿಕೊಂಡ. ಶಾಂತ ಒಂದು ಸಾರಿ ಆ ಕಡೆ ತನ್ನ ದೃಷ್ಟಿಯನ್ನು ತಿರುಗಿಸಿ ನೋಡಿದಳು. ಅವನು ಆ ಸಮಯದಲ್ಲಿ ' ಅತ್ತಿಗೆ, ಹೋಗಬೇಡ ' ಎಂದು ಅಂದುಬಿಟ್ಟಿದ್ದರೆ ಅವಳಿಗೆ ಸಾಕಾಗಿತ್ತು. ಅವನ ಮನಸ್ಸಿನಲ್ಲೂ ಈಗ ಗಾಬರಿಯೆ ಎದ್ದಿತ್ತು. ತಾನು ರೇಗಾಡಿದುದು ಇಷ್ಟು ರಂಪಕ್ಕಿಟ್ಟುಕೊಂಡೀತು ಎಂದು ಅವನೆಣಿಸಿರಲಿಲ್ಲ. ಅತ್ತಿಗೆ ಹೊರಟುಹೋಗುವುದು ಅವನಿಗೆ ಬೇಕಿರ ಲಿಲ್ಲ. ಅವಳು ಇಲ್ಲಿಯೇ ಇರಲಿ ಎಂದು ಇಷ್ಟ. ಆದರೆ ಬಾಯಲ್ಲಿ ಹೇಳಲು ಅಭಿಮಾನ ಬಿಡಲಿಲ್ಲ. ಹಾಗಾಗಿ ಸುಮ್ಮನೆ ಅಲ್ಲಿಯೆ ಹಾಗೆಯೆ ನಿಂತ. ಒಂದು ಗಳಿಗೆ ಹಿಂದೆಗೆದಳೊ ಏನೊ ಎನ್ನುವಂತೆ ಶಾಂತ ನಿಂತು ಬಾಗಿಲು ದಾಟಿದಳು. ಹೊರಬಾಗಿಲಿಗೆ ಬರುವ ವೇಳೆಗೆ ಬೀದಿಯಿಂದ " ಅತ್ತಿಗೆ, ಅತ್ತಿಗೆ" ಅಂತ ಕೂಗುತ್ತ ಅವಳ ನಾದಿನಿ ಏಳೆಂಟು ವರ್ಷದ ವಸಂತು ಓಡಿಬಂದು

ಅವಳ ಕೈ ಹಿಡಿದುಕೊಂಡಳು. ಬೆಳಿಗ್ಗೆ ಸ್ಕೂಲಿಗೆ ಹೋಗುವಾಗ ಅತ್ತಿಗೆ ಜಡೆ ಹಾಕಿರಲಿಲ್ಲ; ಹಾಗೆಯೆ ಹೋಗಬೇಕಾಗಿತ್ತು. ಆದರೆ ಈಗ ಸ್ಕೂಲು ಬೇಗ ಬಿಟ್ಟಿತ್ತು, ಅತ್ತಿಗೆಯ ಕೈಲಿ ಜಡೆ ಹಾಕಿಸಿಕೊಳ್ಳಬೇಕು, ನಿನ್ನೆ ಸಂಜೆ ಅತ್ತಿಗೆಯ ಜತೆಯಲ್ಲಿ ಹೋಗಿ ತಂದ ಎರಡು ಹೊಸ ರಿಬ್ಬನ್ನನ್ನು ಎರಡು ಜಡೆಗೂ ಹಾಕಿಸಿಕೊಳ್ಳಬೇಕೆಂಬ ಆಸೆಯಿಂದ ತನ್ನ ಸ್ನೇಹಿತೆಯರನ್ನೆಲ್ಲ ಹಿಂದೆ ಬಿಟ್ಟು ಓಡೋಡಿ ಬಂದಿದ್ದಳು ವಸಂತು. 'ಅತ್ತಿಗೆ, ಅತ್ತಿಗೆ' ಎಂದು ಬೀದಿಯಿಂದಲೆ ಕೂಗಿಕೊಂಡು ಬಂದು ಮೊದಲು ಅತ್ತಿಗೆಯನ್ನು ಮಾತಾಡಿಸುವುದು ಅವಳ ರೂಢಿ. ದಿನವೂ ತಾನು ಸ್ಕೂಲಿನಲ್ಲಿ ಕಲಿತ ಮಗ್ಗಿಯ ಪಾಠ, ಕತೆಗಳನ್ನೆಲ್ಲ ಅತ್ತಿಗೆಗೆ ವರದಿ ಒಪ್ಪಿಸಿದ ಹೊರತು ಅವಳ ಮನಸ್ಸಿಗೆ ಸಮಾಧಾನವಿಲ್ಲ. ಈಗಲೂ ಹಾಗೆಯೆ ಓಡಿಬಂದಳು. ದಿನವೂ ಅತ್ತಿಗೆ ತಬ್ಬಿಕೊಂಡು ಮುದ್ದಾಡುತ್ತಿದ್ದಳು. ಆದರೆ ಶಾಂತಳಿಗೆ ಇಂದು ಅದು ಕೂಡ ಬೇಕಾಗಲಿಲ್ಲ. ತನ್ನನ್ನು ನಿಲ್ಲೆಂದು ಒಂದು ಮಾತೂ ಸೀನುವಿನ ಬಾಯಲ್ಲಿ ಬರಲಿಲ್ಲವಲ್ಲ ಎಂದು ಕೋಪ, ದುಃಖಗಳು ಒಮ್ಮೆಗೆ ಹೃದಯವನ್ನೊತ್ತುತ್ತಿದ್ದವು. ವಸಂತು ಕೈ ಹಿಡಿದರೆ ಆ ಕೈಯನ್ನು ಹಿಂದಕ್ಕೆಳೆದುಕೊಳ್ಳಲು ತಾನಾಗಿಯೆ ಪ್ರಯತ್ನಿಸಿದಳು. ವಸಂತು ತನ್ನ ಉತ್ಸಾಹದಲ್ಲಿ ಅದನ್ನು ಕಾಣಲೆ ಇಲ್ಲ. ಅತ್ತಿಗೆಯ ಮುಖವನ್ನು ನೋಡುತ್ತ,

"ಅತ್ತಿಗೆ, ಅತ್ತಿಗೆ. ನಾನೇ ಫಸ್ಟ್ ಓಡಿಬಂದುಬಿಟ್ಟೆ. ಈವತ್ತು ಸ್ಕೂಲು ಬೇಗ ಬಿಟ್ಟುಬಿಟ್ಟರು. ಗಣಿತದ ಸಿಸ್ಟರ್ (Sister) ಇರಲಿಲ್ಲ. ಅತ್ತಿಗೆ, ಈಗ ಜಡೆ ಹಾಕತೀಯಾ, ಅತ್ತಿಗೆ?" ಎಂದಳು.

ಶಾಂತಳಿಗೆ ಅವಳನ್ನು ಎಳೆದುಕೊಂಡು ತಬ್ಬಿಕೊಂಡು ಗಳಗಳನೆ ಅತ್ತು ಬಿಡಬೇಕೆನಿಸುವಷ್ಟು ಮನಸ್ಸೆಳೆಯಿತು. ಆದರೆ ತಂಗಿಯ ಕೂಗು ಕೇಳಿ ಹೊರಕ್ಕೆ ಬಂದ ಸೀನು,

"ವಸಂತು, ಬಾರೆ ಇಲ್ಲಿ. ಅತ್ತಿಗೆ ಹತ್ತಿರ ಹೋಗಬೇಡ" ಎಂದ.

"ಹೋಗೊ, ನಾನು ಬರೊಲ್ಲ. ಅತ್ತಿಗೆ, ಯಾಕೆ ಅತ್ತಿಗೆ, ನನ್ನ ಹತ್ತಿರ ಮಾತಾಡೊಲ್ಲ? ನಾನೇನು ತಪ್ಪು ಮಾಡಿದೆ" ಎಂದಳು ವಸಂತು ಅಂಗಲಾಚಿಕೊಳ್ಳುತ್ತ. ಶಾಂತ ಅವಳನ್ನು ಪಕ್ಕಕ್ಕೆ ಸರಿಸಿ ಮುಂದಕ್ಕೆ ಹೆಜ್ಜೆಯಿಡಲನುವಾದಳು. ಆದರೆ ವಸಂತು ಬಿಡಬೇಕಲ್ಲ, ಅವಳ ಕೈ ಹಿಡಿದುದನ್ನು ಬಿಡಲೆ ಇಲ್ಲ.

" ಅತ್ತಿಗೆ, ಅತ್ತಿಗೆ ಎಲ್ಲಿಗೆ ಹೊರಟಿದ್ದೀಯೆ ? ನಾನೂ ಬರತೀನಿ—ನಾನೂ ಬರಲಾ, ಅತ್ತಿಗೆ ? "

ಶಾಂತ ಉತ್ತರವನ್ನೆ ಕೊಡದೆ ತುಟಿ ಕಚ್ಚಿ ಹೆಜ್ಜೆ ಮುಂದಿಟ್ಟಳು. ವಸಂತುವಿಗೆ ಏನೂ ಅರ್ಥವೆ ಆಗಲಿಲ್ಲ. ಅತ್ತಿಗೆ ತನ್ನ ಮೇಲೇಕೋ ಕೋಪ ಗೊಂಡಿದ್ದಾಳೆ, ಆದಕ್ಕೆ ತನ್ನ ಹತ್ತಿರ ಮಾತನಾಡುವುದಿಲ್ಲವೆನಿಸಿ ಕಣ್ಣಿನಲ್ಲಿ ನೀರು ಹನಿಯಿತು. ಈ ಕಡೆ ಸೀನು ನಿಂತಿದ್ದ. ಅವನ ಹತ್ತಿರಕ್ಕೆ ಓಡಿ ತಬ್ಬಿಕೊಂಡು ಅಳುತ್ತ,

" ಸೀನು, ಸೀನು, ಅತ್ತಿಗೆ ಚೀಲ ಹಿಡಕೊಂಡು ಹೊರಟಿದಾಳೆ. ನನ್ನ ಹತ್ತಿರ ಮಾತಾಡೊಲ್ಲ. ನೀನಾದರೂ ಹೇಳೊ ಸೀನು, ನನ್ನನ್ನೂ ಕರಕೊಂಡು ಹೋಗಲಿ—ಅತ್ತಿಗೆ, ಅತ್ತಿಗೆ " ಎಂದು ಕೂಗಿಕೊಂಡಳು.

ಶಾಂತಳ ಎದೆ ವಸಂತುವನ್ನು ಅನಚಿಗೊಳ್ಳಲು ಕಾತರಿಸುತ್ತಿದ್ದರೂ ಅಭಿಮಾನ ಕಾಲನ್ನು ಮುಂದೆ ನಡೆಸಿತು. ವಸಂತುವಿನ ಅಳುವ ದನಿಯನ್ನು ಕೇಳಿದರೂ ಕೇಳದವಳಂತೆ ಮುಂದೆ ನಡೆದಳು. ವಸಂತು ಬಿಕ್ಕಿಬಿಕ್ಕಿ ಅಳುತ್ತ " ಅತ್ತಿಗೆ, ಅತ್ತಿಗೆ " ಎಂದು ಕೂಗುತ್ತಲೆ ಇದ್ದಳು.

ಸೀನುವಿನ ದನಿಯೂ ಗದ್ಗದಿತವಾಯಿತು. " ಅಳಬೇಡ, ವಸಂತು. ಅಳಬೇಡ, ಬಾ. ಅತ್ತಿಗೆ ಕಟುಕರವಳು, ಬಾ. ನಿನಗೆ ಚಾಕಲೇಟ್ ಕೊಡ ತೀನಿ " ಎಂದು ಅಳುತ್ತಿದ್ದ ವಸಂತುವನ್ನು ತಬ್ಬಿಕೊಂಡ. ವಸಂತು ಅಳುತ್ತ ಬೀದಿಯವರೆಗೂ ಹೋಗಿ " ಅತ್ತಿಗೆ, ಅತ್ತಿಗೆ " ಎಂದು ಕೂಗಿಕೊಂಡಳು. ಬೀದಿಯ ಕೊನೆಯಲ್ಲಿ ತಿರುಗುವ ಮೊದಲೊಮ್ಮೆ ಶಾಂತ ಹಿಂದಿರುಗಿ ನೋಡಿ ದಳು ಅಷ್ಟೆ ! ವಸಂತು ಅಳುತ್ತ ಒಳಕ್ಕೆ ಬಂದು ಸೀನುವನ್ನು ತಬ್ಬಿಕೊಂಡಳು. ಸೀನುವಿಗೂ ಎದೆಯಲ್ಲಿ ನೋವಿನ ತಿರುಗಣಿ ತಿರುಗುತ್ತಿತ್ತು. ಹಾಗೂ ಹೀಗೂ ಕಣ್ಣಿನಂಚಿನಲ್ಲೆ ಕಣ್ಣೀರನ್ನು ನಿಲ್ಲಿಸಿ ವಸಂತುವನ್ನು ಒಳಕ್ಕೆ ಕರೆದೊಯ್ದ. ಆದರೆ ಅವಳನ್ನು ಸಮಾಧಾನಪಡಿಸುವುದು ಅವನಿಂದಾಗಲಿಲ್ಲ.

ಒಳಗೆ ರಂಗಣ್ಣನವರಿಗೂ ಯಾಕೊ ಊಟವೆ ಬೇಕಾಗಲಿಲ್ಲ. ಸೊಸೆ ಹೊರಟುಹೋದುದಕ್ಕೂ ಅದಕ್ಕೂ ಕಾರಣವಿದೆಯೆಂದು ಅವರಿಗೆ ತೋಚಲಿ ಇಲ್ಲ. ಯಾರಾದರೂ ಹೇಳಿದ್ದರೂ ಅದನ್ನವರು ಒಪ್ಪುತ್ತಲೂ ಇರಲಿಲ್ಲ. ಗಂಗಮ್ಮನಂತೂ ಸೀರೆಯ ಸೆರಗನ್ನು ಕಣ್ಣೀರಿನಲ್ಲಿ ತೋಯಿಸಿಬಿಟ್ಟರು. " ಏನು

ಕೆಟ್ಟ ಗಳಿಗೆ ಬಂತೊ! ಏನು ಕರ್ಮವೊ! ಪಾಪ! ಒಂದು ತುತ್ತು ಅನ್ನ ಕೂಡ ತಿನ್ನದೆ ಹೊರಟುಬಿಟ್ಟಳಲ್ಲ" ಎಂದು ಮಮ್ಮಲ ಮರುಗಿದರು.

ಸೀನು ತನ್ನ ರೂಮಿನಲ್ಲಿ ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲೆ ತಲೆಯಿಟ್ಟು ಕೈಗಳಲ್ಲಿ ಮುಖ ಮುಚ್ಚಿಕೊಂಡು ಸಪ್ಪೆಯಾಗಿ ಕುಳಿತಿದ್ದ. ವಸಂತು ತನ್ನ ಪುಸ್ತಕದ ಚೀಲವನ್ನಲ್ಲಿಯೆ ಮೂಲೆಗೆಸೆದು "ಅತ್ತಿಗೆ, ಅತ್ತಿಗೆ" ಎಂದು ಗುಂಯ್ಗುಡುತ್ತ ಸಣ್ಣ ದನಿಯಲ್ಲಿ ಅಳುತ್ತಿದ್ದಳು.

೨

ಪಕ್ಕದಲ್ಲಿ ಚೀಲವನ್ನಿಟ್ಟುಕೊಂಡು, ಕಿಟಕಿಗೆ ಮೊಳಕೈ ಇಟ್ಟು, ಅದರ ಮೇಲೆ ತಲೆಯನ್ನೊರಗಿಸಿಕೊಂಡು ಶಾಂತ ಕುಳಿತಿದ್ದಳು. ತಲೆಯ ಕಾವು ಕೊಂಚ ಕೊಂಚ ಇಳಿದಂತೆ ಹೊಟ್ಟೆಯ ಕಾವು ಚುರುಗುಟ್ಟಲಾರಂಭಿಸಿತು. ಬೆಳಗ್ಗೆ ಒಂದು ಲೋಟ ಕಾಫಿ ಕುಡಿದುದು—ಅದೂ ಈ ದಿನ ಸೀನು ಊರಿಗೆ ಹೊರಡುತ್ತಾನೆಂದುಕೊಂಡು ನಿನ್ನೆ ರಾತ್ರಿಯ ಹಾಲಿಟ್ಟು, ಬೆಳಗಿನ ಜಾವವೆ ಎದ್ದು ತಾನೇ ಮಾಡಿದ್ದಳು. ಅವನಿಗೂ ಕೊಟ್ಟು, ಅದೇ ಎದ್ದ ನಾದಿನಿ ವಸಂತುವಿಗೂ ಕೊಟ್ಟು ತಾನೂ ಕುಡಿದಿದ್ದಳು. ಆಮೇಲೆ ಒಂದೆರಡು ನಿಮಿಷದ ನಂತರ ಹಗರಣ ಆರಂಭವಾಗಿತ್ತು. ಊಟ ಕೂಡ ಮಾಡದೆ ಶಾಂತ ನಿಂತ ಕಾಲಿನಲ್ಲೆ ಹೊರಟು ಬಂದುಬಿಟ್ಟಿದ್ದಳು. ಈಗ ಹೊಟ್ಟೆಯ ಹಸಿವೆ ನಿಧಾನ ವಾಗಿ ಏರುತ್ತಿತ್ತು. ಅಲ್ಲದೆ ಮನಸ್ಸಿನಲ್ಲೂ ಹಸಿವೆ ಆಳವಾದ ಚಿಂತೆಯನ್ನು ಕೊರೆಯುತ್ತಿತ್ತು. ಮುಖ ಪೆಚ್ಚಾಗಿತ್ತು. ಹಾಗೆಯೆ ತಲೆಯೂರಿಕೊಂಡರೆ ನಿದ್ರೆ ಬರಬಹುದೆಂದುಕೊಂಡಿದ್ದಳು. ಕಣ್ಣುಗಳನ್ನು ಮುಚ್ಚಿದರೆ ಕೆಂಪು ಕಪ್ಪಾಗಿ ರೆಪ್ಪೆಯ ರಕ್ತವಾಹಿನಿಗಳೆಲ್ಲ ಕಾಣುತ್ತಿದ್ದವು. ಕಣ್ಣಾಲಿಗೆ ರೆಪ್ಪೆಯೆಲ್ಲ ಒತ್ತುತ್ತಿರು ವಂತೆ ಕಾಣಿಸಿತು. ಕಣ್ಣುನೋವು ಬಂದಾಗ ಕಣ್ಣೊತ್ತುವಂತೆ ಒತ್ತುತ್ತಿತ್ತು. ಕಣ್ಣು ತೆರೆದರೂ ಉರಿ ಹಾಗೆಯೆ ಉಳಿದಿತ್ತು. ಜೊತೆಗೆ, ಓಡುವ ರೈಲಿನ ಕಿಟಕಿಯಿಂದ ಬೀಸುವ ಗಾಳಿ ಕಣ್ಣನ್ನು ಹೊಡೆಯುತ್ತಿತ್ತು. ಅದರಿಂದ ಕಣ್ಣು ಸಣ್ಣಾಗುತ್ತಿತ್ತು. ಒಮ್ಮೊಮ್ಮೆ ಮೊಳಕೈ ಜಾರಿದಾಗ ಜೋಲಿ ಹೊಡೆದಂತಾಗು ತ್ತಿತ್ತು. ಆಗ ಶಾಂತ ತಾನಾಗಿಯೆ ಜೋಮು ಹಿಡಿದ ಕೈಯನ್ನು ಕೆಳಕ್ಕೆಳೆದು, ಒಮ್ಮೆ ಉಟ್ಟ ಸೀರೆಯನ್ನು ಸರಿಮಾಡಿಕೊಂಡು, ಇನ್ನೊಂದು ಮೊಳಕೈ ಊರಿ

ಕುಳಿತುಕೊಳ್ಳುತ್ತಿದ್ದಳು.

ಸೀನುವಿನ ಮಾತಿಗೆ ರೇಗಿ ಮನೆ ಬಿಟ್ಟಾಗಿನ ಉದ್ವೇಗ ಈಗಿರಲಿಲ್ಲ. ಮನೆಯಿಂದ ಹೊರಗೆ ಕಾಲಿಡುತ್ತಿದ್ದಂತೆ ನಾದಿನಿಯ ಕೂಗು—ವಸಂತು ಕಾತರದಿಂದ ಕೂಗಿದ 'ಅತ್ತಿಗೆ, ಅತ್ತಿಗೆ'—ಶಾಂತಳನ್ನು ಸೆಳೆದಿತ್ತು. ತಾನು ಹೀಗೆ ಹೊರಡಬಾರದೆಂದು ಆ ಕ್ಷಣದಲ್ಲಿ ಅವಳಿಗೆ ಅನಿಸಿತು. ಆದರೆ ಕೈಯಲ್ಲಿ ಚೀಲವಿತ್ತು. ಅದರಲ್ಲಿ ತನ್ನ ಎರಡು ಮೂರು ಸೀರೆ ರವಿಕೆಗಳನ್ನು ಅವಸರವಸರದಲ್ಲಿ ಇಟ್ಟುಕೊಂಡಿದ್ದಳು. ಈಗ ಮನೆ ಬಿಡುತ್ತೇನೆಂದು ಹಟ ತೊಟ್ಟು, ಹೊರಗೆ ಕಾಲಿಟ್ಟು ಮತ್ತೆ ಹಿಂದಕ್ಕೆ ಹೋದರೆ ತನ್ನ ದೌರ್ಬಲ್ಯ ಎಲ್ಲರಿಗೂ ಗೊತ್ತಾಗುತ್ತದೆ. ದೌರ್ಬಲ್ಯವನ್ನು ಮುಚ್ಚಿಕೊಳ್ಳುವುದೆ ಧೈರ್ಯದ ಲಕ್ಷಣ. ಅಂತೆಯೆ ಈಗೇನಾದರೂ ತಾನು ವಸಂತುವಿನ ಮೇಲಿನ ಮೋಹದಿಂದ ಮನೆಗೆ ಪುನಃ ಕಾಲಿಟ್ಟರೆ ತನ್ನನ್ನು ಎಲ್ಲರೂ ಹಂಗಿಸಿ ಹಾಸ್ಯ ಮಾಡುವರೆನಿಸಿತು. ಮನಸ್ಸಿನ ಈ ಹಟ, ಹೃದಯದ ಸೆಳೆತವನ್ನು ಅಮುಕಿಹಾಕಿತು. ಕಾಲು ಮುಂದೆ ನಡೆಯಿತು. ಆದರೆ ಮನೆ ಬಿಟ್ಟು ಎರಡು ಮೂರು ಮಾರು ನಡೆಯುವುದರಲ್ಲೆ ಮೂರನೆಯ ಮನೆಯ ಮಂಜುಳಾ ತನ್ನ ಗಂಡನೊಂದಿಗೆ ಬರುತ್ತಿದ್ದುದನ್ನು ಕಂಡಳು. ಮಂಜುಳಾ ತನ್ನ ಕಡೆ ನೋಡಿದಳು. ಅವಳ ಮುಖ ನಾಚಿಕೆಯಿಂದ ಕೆಂಪಾಯಿತು. ಆದರೆ ತನ್ನ ಮುಖ ಕಪ್ಪು ಛಾಯೆ ಹೊದ್ದುದನ್ನು ಮಂಜುಳಾ ಕಂಡಿರಲೆಬೇಕು. ಅಲ್ಲದೆ, ತನ್ನ ಮುಖದಲ್ಲಿ ಧುಮುಗುಟ್ಟುತ್ತ ಧುಮುಕಲು ಯತ್ನಿಸುತ್ತಿದ್ದ ಛಲ ಯಾರ ಕಣ್ಣಿಂದಲೂ ಮುಚ್ಚುವಂತಹುದಲ್ಲ. ಮತ್ತು ತನ್ನ ಕೈಯಲ್ಲಿ ಚೀಲವಿದ್ದುದನ್ನೂ ತಾನು ರೈಲು ನಿಲ್ದಾಣದ ಕಡೆಗೆ ಹೊರಟುದನ್ನೂ ಮಂಜುಳಾ ನೋಡಿಯೆ ಇರುವಳು. ಮತ್ತೆ ಅವಳೇನೆಂದುಕೊಂಡಿರುವಳೊ. ಅಲ್ಲದೆ ಅವಳ ಗಂಡನೊಂದಿಗೆ ಏನೇನು ಮಾತಾಡಿರುವಳೊ—ತನ್ನನ್ನು ಇಬ್ಬರೂ ಹಾಸ್ಯ ಮಾಡುವರೊ ಏನೊ ಎಂದೆನ್ನಿಸಿತು ಶಾಂತಳಿಗೆ. ಅವಳು ರೈಲು ನಿಲ್ದಾಣಕ್ಕೆ ಹೆಜ್ಜೆ ಹಾಕುತ್ತಿದ್ದಂತೆ ಶಾಂತಳ ಮನಸ್ಸನ್ನು ಈ ಯೋಚನೆಗಳು ಕಾಡುತ್ತಿದ್ದವು. ಮಂಜುಳಾ ಎಲ್ಲರಿಗೂ ಏನು ಹೇಳುವಳೊ—ಊರವರೆಲ್ಲ ಏನೆಂದುಕೊಳ್ಳುವರೊ—ಎಂದುಕೊಂಡು ಮನಸ್ಸು ಪೂರ್ತಿ ಮಿಡುಕಿತು. ಯಾಂತ್ರಿಕವಾಗಿ ರೈಲ್ವೆ ಸ್ಟೇಷನ್ ಕಡೆಗೆ ಹೋಗುತ್ತಿದ್ದ ಕಾಲು ನಿಲ್ಲಲಿಲ್ಲ. ಮನಸ್ಸಿಗೇನೊ ತಾನು

ಹೊರಟು ಬಂದುದರಲ್ಲಿ ಬಹಳ ಅಸಮಾಧಾನ. ಅತ್ತೆ, ಮಾವ, ನಾದಿನಿ ಎಲ್ಲರೂ ತನ್ನನ್ನು ಹೋಗಕೂಡದೆಂದು ಅಷ್ಟು ತಡೆದರು. ಆದರೆ ತಾನು ಅವರೆಲ್ಲರ ಪ್ರೀತಿಯನ್ನು ಕಡೆಗಣಿಸಿದ್ದಳು. ಅವರ ಪ್ರೀತಿಯ ಮೇರೆಯನ್ನು ತಾನು ಮೀರಿದುದು ತಪ್ಪೆಂದು ಅವಳಿಗೆ ತೋಚಿತು. ಆದರೆ ಸೀನು ತನ್ನೊಂದಿಗೆ ಹಾಗೆ ಹಗರಣ ಮಾಡಿದನಲ್ಲ. ಮಾತುಮಾತಿಗೆ ಚುಚ್ಚಿ ಗಾಯಗೊಳಿಸಿದ. ತನಗೆ ಸಮಾಧಾನವಾಗುವ ಹೊತ್ತಿಗೆ ಮತ್ತೆ ಕೆಣಕಿ ರೇಗಿಸಿದ್ದ. ಅಂತಹ ಕೆಣಕನ್ನು, ಅವಮಾನವನ್ನು ಸಹಿಸಿಕೊಂಡಿರುವುದು ಹೇಗೆ ಸಾಧ್ಯ? ಅಂದ ಮೇಲೆ ಅಲ್ಲಿಂದ ಹೊರಟುದೆ ಸರಿಯೆಂದು ಒಂದು ಮನಸ್ಸಂದಾಗ ಕಾಲಿನ ಚಪ್ಪಲಿಯ ಚಟಪಟವೇರಿತು. ಆದರೂ ಒಳಗೆ ಕೊರತೆ ಹಾಗೆಯೆ ಇತ್ತು. ತಾನು ಹಾಗೆ ಹೊರಟುಬಂದುದು ತಪ್ಪೆನಿಸಿತು.

ರೈಲಿನಲ್ಲಿ ಹೆಂಗಸರ ಡಬ್ಬಿಯಲ್ಲಿ ಜಾಗವಿರಲಿಲ್ಲ. ಹಾಗೆಯೆ ಯಾವುದೊ ಒಂದು ಡಬ್ಬಿಯಲ್ಲಿ ಒಂದು ಕಡೆಯಲ್ಲಿ ಹೆಂಗಸರು ಇಬ್ಬರೆ ಕುಳಿತಿದ್ದುದನ್ನು ಕಂಡು ಶಾಂತ ಅಲ್ಲಿಗೆ ಹೋದಳು. ಕುಳಿತುಕೊಳ್ಳಲು ಮೂಲೆಯ ಜಾಗವೆ ಸಿಕ್ಕಿತು. ಕಿಟಕಿಯಿಂದ ತಲೆಯಿಟ್ಟು ಹೊರಕ್ಕೆ ನೋಡಲು ಅನುವಿತ್ತು. ಮುಖ ಪೆಚ್ಚುಬಿದ್ದು ಹಾಗೆಯೆ ಕುಳಿತಿದ್ದಳು. ತಾನೆ ತಾನಾಗಿ ಅವಳ ಕಣ್ಣುಗಳಲ್ಲಿ ಹನಿಯಾಡಲಾರಂಭವಾಯಿತು. ಬೇಡ ಬೇಡವೆಂದರೂ ಕರುಳು ಬಾಧಿಸುತ್ತಿತ್ತು. ಏಕೆಂದು ಹೇಳಿಕೊಳ್ಳಲಾಗದಿದ್ದರೂ ಏನೊ ಒಂದು ಬಗೆಯ ವ್ಯಾಕುಲ ಮನಸ್ಸನ್ನು ಹಿಂಡಿ ಕಣ್ಣಿಗೆ ಹನಿಗೂಡಿಸುತ್ತಿತ್ತು. ವಿಚಾರಿಸುವ ಚೈತನ್ಯವನ್ನು ತಲೆ ಕಳೆದುಕೊಂಡಂತಿತ್ತು. ಕೈಯಲ್ಲಿದ್ದ ಕರವಸ್ತ್ರದಿಂದ ಮುಖ ವನ್ನೊರಸಿಕೊಳ್ಳುವುದಿರಲಿ, ಕೈಯಲ್ಲಿ ಆ ವಸ್ತ್ರವಿರುವುದು ಕೂಡ ಅವಳಿಗೆ ಆ ಕ್ಷಣದಲ್ಲಿ ನೆನಪಿರಲಿಲ್ಲ. ಸುಮ್ಮನೆ ಮಿಸುಕಾಡುತ್ತಿದ್ದಳು. ಯಾವ ರೀತಿಯಲ್ಲಿ ಕುಳಿತರೂ ಮೈಗಾಗಲಿ, ಮನಸ್ಸಿಗಾಗಲಿ ಆರಾಮ ಸಿಕ್ಕದು. ಹೀಗೆ ತಿರುಗಿ ತಿರುಗಿ ಕುಳಿತುಕೊಳ್ಳುವಾಗಲೊಮ್ಮೆ ಕೈವಸ್ತ್ರ ಕೆಳಕ್ಕೆ ಬಿದ್ದುದು ಕೂಡ ಅವಳ ಗಮನಕ್ಕೆ ಬರಲಿಲ್ಲ.

"ನಿಮ್ಮದೆ ಇದು ಚೌಕ? ಕೆಳಗೆ ಬಿದ್ದಿದೆಯಲ್ಲ" ಎಂದು ದನಿ ಕೇಳಿ ದಾಗಲೆ ಅವಳಿಗೆ ಈ ಮಂಪರದಿಂದ ಎಚ್ಚರ. ಕೆಳಕ್ಕೆ ಬಿದ್ದಿದ್ದ ಚೌಕವನ್ನು ಕೈಗೆತ್ತಿಕೊಂಡಳು. ರೈಲಿನಲ್ಲಿ ತಾನು ಕುಳಿತಿರುವೆನೆಂಬ ನೆನಪಾದುದೂ

ಆಗಲಿ. ಈಗ ಅವಳನ್ನು ಎಚ್ಚರಿಸಿದ ದನಿ ಅದೆ ಆಗ ರೈಲು ಹತ್ತಿದ ಹೆಂಗಸಿನದು. ಆ ದನಿ ಮೃದುವಾಗಿತ್ತು. ಶಾಂತ ಕಣ್ಣೆತ್ತಿ ನೋಡಿದಳು. ಮಾತನಾಡಿದವಳ ಮುಖ ಕೊಂಚ ಬಿಳಿಚಿಕೊಂಡಿತ್ತು. ಆಯಾಸದಿಂದ ಎರಡು ಕೆನ್ನೆಗಳೂ ಕೆಂಪಾಗಿದ್ದವು. ಮೆಲ್ಲನೆ ಸೆರಗನ್ನು ಸರಿಮಾಡಿಕೊಳ್ಳುತ್ತ, ಹಣೆಯ ಬೆವರನ್ನೊರಸಿಕೊಳ್ಳುತ್ತ, ಕುಳಿತುಕೊಳ್ಳಲು ಜಾಗ ಮಾಡಿಕೊಳ್ಳಲು ಯತ್ನಿಸುತ್ತಿದ್ದ ಆಕೆಯನ್ನು ಕಂಡು ಶಾಂತಳಿಗೆ ಮರುಕ ಕಟ್ಟೆಯೊಡೆಯಿತು. ಮೃದುವಾಗಲು ತಹತಹಿಸಿದ ಮನಸ್ಸು ಆಕೆಯ ಬಗ್ಗೆ ಮೃದುವಾಯಿತು. ತನ್ನ ಪಕ್ಕದಲ್ಲಿ ಸ್ವಲ್ಪ ಜಾಗ ಮಾಡಿಕೊಡುವುದೆಂದು ಜರುಗಿಕೊಂಡಳು. ಬಂದವಳು ಉಸ್ಸೆನುತ್ತ ಟ್ರಂಕನ್ನು ಮೇಲಿಡಲು ಯತ್ನಿಸಿ ಒದ್ದಾಡುವುದನ್ನು ಕಂಡು ಶಾಂತ ಎದ್ದು ನಿಂತು ಆ ಪೆಟ್ಟಿಗೆಯನ್ನು ಮೇಲಿಡಲು ನೋಡಿದಳು. ಆದರೆ ಮೇಲಿಡಲು ಜಾಗವಿಲ್ಲದುದರಿಂದ "ಕೆಳಗೆ ಇಟ್ಟರಾಯಿತು. ಪರವಾಗಿಲ್ಲ" ಎನ್ನುತ್ತ ಬೆಂಚಿನ ಕೆಳಕ್ಕೆ ಪೆಟ್ಟಿಗೆಯನ್ನು ದೂಡಿದಳು. ಶಾಂತಳಿಗೆ ಅಷ್ಟು ಮಾಡಿದುದರಿಂದ ಮನಸ್ಸಿನ ತುಡಿತ ಕೊಂಚ ಕಡಿಮೆಯಾಯಿತು.

ತನ್ನ ಪಕ್ಕಧಲ್ಲಿ ಆಕೆಗೆ ಜಾಗ ಮಾಡಿಕೊಟ್ಟು ಶಾಂತ ಮತ್ತೆ ಮುಖವನ್ನು ಬೇರೆ ಕಡೆ ತಿರುಗಿಸಬೇಕಾಯಿತು. ಹೊಸದಾಗಿ ಬಂದವಳ ಬಗ್ಗೆ ಅವಳಿಗೆ ಕುತೂಹಲ, ಆಸಕ್ತಿ ಎಷ್ಟೆ ಇದ್ದರೂ ರೈಲು ಹೊರಡುವ ತನಕ ಅದನ್ನು ಹಾಗೆಯೆ ಅದುಮಿಟ್ಟುಕೊಳ್ಳಬೇಕಾಗಿತ್ತು. ಕಿಟಕಿಯ ಹತ್ತಿರ ಆ ಹೆಂಗಸಿನ ಗಂಡ ಬಂದು ನಿಂತರು. ಪಕ್ಕದಲ್ಲಿ ಇನ್ನೊಬ್ಬ—ಸುಮಾರು ಹದಿನೇಳು ಹದಿನೆಂಟು ವಯಸ್ಸಿನವನು—ನಿಂತ. ಹೆಂಗಸು ಕಿಟಕಿಯಿಂದ ಹೊರಗೆ ತಲೆ ಇಟ್ಟುಕೊಂಡು ಕೆಂಪಡರಿದ ಮುಖವನ್ನು ಆಗಾಗ ಸೆರಗಿನಿಂದ ಒರಸಿಕೊಳ್ಳುತ್ತಿದ್ದಳು. ನಾಚಿಕೆ, ಗಾಬರಿ ಎರಡೂ ಮುಖದ ಮೇಲೆ ಎದ್ದು ಕಾಣುತ್ತಿದ್ದವು. ಬಹಳ ಮೆಲ್ಲನೆ, ಕೇಳಿಸಿತೊ ಇಲ್ಲವೊ ಎನ್ನುವಂತೆ "ನೀವೇ ಬಂದಿದ್ದರೆ ಚೆನ್ನಾಗಿತ್ತು" ಎಂದಳು ಆಕೆ.

ಶಾಂತಳಿಗೆ ಅವರ ಮಾತನ್ನು ಕೇಳಲು ಇಚ್ಛೆಯಿರಲಿಲ್ಲ. ಆದರೆ ಆಕೆಯ ಪಕ್ಕದಲ್ಲಿಯೆ ಕುಳಿತುದರಿಂದ ಅವಳಿಗೆ ಇಷ್ಟವಿಲ್ಲದಿದ್ದರೂ ಮಾತು ತಾನಾಗಿಯೆ ಕಿವಿಗೆ ಬಿದ್ದಿತು. ಅದರಿಂದ ಎಲ್ಲವನ್ನೂ ಕೇಳಿಸಿಕೊಳ್ಳಬೇಕಾಯಿತು.

ಮಾತನಾಡಿದವರು ಆಕೆಯ ಗಂಡ ಇರಬೇಕು. ದನಿ ಕೊಂಚ ಒರಟು

ಆದರೂ ಅದನ್ನೆ ಸಾಧ್ಯವಾದಷ್ಟು ಮೃದುಗೊಳಿಸಲು ಯತ್ನಿಸಿದಂತಿತ್ತು. "ನಾನೇನು ಮಾಡಲಿ, ಇಂದಿರಾ. ಹೊರಡಬೇಕು ಅಂತಲೆ ಇರಲಿಲ್ಲವೆ? ಆದರೆ ಈಗಲೆ ಇನ್ಸ್‌ಪೆಕ್ಷನ್ ಹಾಕ್ಕೊಂಡಿದಾರೆ. ಅದೂ ನಿನ್ನೆ ಗೊತ್ತಾಯಿತು. ಈಗ ನೀನು ಪ್ರಯಾಣ ಹೋಗುವುದನ್ನು ನಿಲ್ಲಿಸುವ ಹಾಗೂ ಇಲ್ಲ" ಎಂದರು.

"ಏನು ಆಫೀಸೊ!" ಎಂದು ಇಂದಿರಾ ಗೊಣಗಿದಳು.

"ನಾನು ಬರದಿದ್ದರೇನಂತೆ, ಸುಬ್ಬು ಬರ್ತಾನಲ್ಲ. ದಾರೀಲಿ ಏನಾದರೂ ಬೇಕಾದರೆ ಅವನಿಗೆ ಹೇಳು, ತಂದುಕೊಡತಾನೆ. ನೀನು ಊರಿಗೆ ಸೇರಿದ ತಕ್ಷಣ ಕಾಗದ ಬರಿ. ತಕ್ಷಣವೆ ಆಸ್ಪತ್ರೆಗೆ ಹೋಗಿ ತೋರಿಸು. ಔಷಧಿ, ಟಾನಿಕ್ಕು ಗೀನಿಕ್ಕು ತೆಗೆದುಕೊಳ್ಳಬೇಕೆಂದೇನಾದರೂ ಡಾಕ್ಟರು ಹೇಳಿದರೆ ತಕ್ಷಣ ಕಾಗದ ಬರಿ. ನಾನು ದುಡ್ಡು ಕಳಿಸ್ತೀನಿ. ತೆಕ್ಕೊಳ್ಳೋವೆಯಂತೆ."

"ನೀವು ಯಾವಾಗ ಬರ್ತೀರಿ?" ಎಂದಳು ಇಂದಿರಾ ಪೆಚ್ಚುದನಿಯಿಂದ.

"ನೋಡೋಣ—ಸಾಧ್ಯವಾದಷ್ಟು ಬೇಗ."

ಗಾರ್ಡ್ ಸೀಟಿ ಊದಿದ.

"ಸುಬ್ಬು, ಗಾಡಿ ಹತ್ತು. ದಾರಿಯಲ್ಲಿ ಇಂದಿರಾಗೆ ಏನಾದರೂ ಬೇಕಾದರೆ —ಕಾಫಿ, ಒಳ್ಳೆಯ ವಡೆ ಸಿಕ್ಕುತ್ತೆ; ಅವಳಿಗೆ ಬಯಕೆಯಾದರೆ ತೆಕ್ಕೊಡು" ಎಂದು ಆತ ಹಿಂದೆ ನಿಂತರು.

"ಹೋಗಿ ಬರ್ತೇನೆ" ಎಂದಳು ಇಂದಿರಾ ಪೆಚ್ಚುಮೋರೆ ಹಾಕಿಕೊಂಡು.

ಗಾಡಿ ರೈಲುನಿಲ್ದಾಣದಿಂದ ಹೊರಟು ಬಹಳ ದೂರ ಹೋದಮೇಲೆ ಇಂದಿರಾ ತಲೆಯನ್ನು ಒಳಕ್ಕಿಟ್ಟಳು. ಕಣ್ಣಿನಲ್ಲಿ ತಡೆಯಲಾರದೆ ಕೆನ್ನೆಯ ಮೇಲೂ ಹರಿದಿದ್ದ ಕಣ್ಣೀರನ್ನು ಸೆರಗಿನಿಂದ ಒರಸಿಕೊಂಡಳು. ಶಾಂತ ಈಗ ಅವಳನ್ನು ಸರಿಯಾಗಿ ನೋಡಲು ಸಾಧ್ಯವಾಯಿತು. ಆ ಕಡೆ ದೂರದಲ್ಲಿ ಕುಳಿತಿದ್ದ ಸುಬ್ಬುವಿನ ಕಡೆಗೊಮ್ಮೆ ಇಂದಿರಾ ನೋಡಿ ಈ ಕಡೆ ತಿರುಗಿದಳು. ಆ ನೋಟದಲ್ಲಿ ಯಾವ ಬಗೆಯ ವಿಶ್ವಾಸವೂ ಇರಲಿಲ್ಲವೆಂದು ಶಾಂತಳಿಗೆ ಅನ್ನಿಸಿತು. ಬಹಳ ಹೊತ್ತು ಮಾತನಾಡದೆ ಇಬ್ಬರೂ ಹಾಗೆಯೆ ಕುಳಿತಿದ್ದರು. ಶಾಂತಳಿಗೂ ಮಾತಿಲ್ಲದೆ ಕುಳಿತಿರುವುದು ಪಿಚ್ಚೆನಿಸಿತು. ಆದರೂ ಮಾತಾಡದೆ ಕೂತುಕೊಳ್ಳಬೇಕಾಗಿತ್ತು. ತಾನಾಗಿಯೆ ಇಂದಿರೆಯನ್ನು ಮಾತನಾಡಿಸಿದರೆ ಇನ್ನೆಲ್ಲಿ ಆಕೆಯ ದುಃಖವನ್ನು ಮತ್ತೆ ಕೆದಕಿದಂತಾಗುವುದೊ ಎಂದು ಸುಮ್ಮನೆ

ಇದ್ದಳು. ಆದರೆ ಈ ಘಟನೆಯಿಂದ ಅವಳಿಗೆ ತನ್ನದೆ ದುಃಖ ಬೆದಕಿ ಬಂದಂತಾಯಿತು.

ಎರಡು ವರ್ಷದ ಹಿಂದೆ ತನ್ನ ತವರುಮನೆ ಬಿಟ್ಟು ಗಂಡನ ಮನೆಗೆ ಬಂದಿದ್ದಳು ಶಾಂತ. ಅನಂತರ ಆರು ತಿಂಗಳಾಗುವ ಮೊದಲೆ ತವರುಮನೆಗೆ ಹೋಗಿಬಂದಿದ್ದಳು. ಅಂದರೆ ಮೊದಲೆರಡು ದಿನವೇನೊ ಅವಳಿಗೆ ತವರು ಮನೆಯ ಹಂಬಲ ಜೋರಾಗಿತ್ತು. ಆದರೆ ಇಲ್ಲಿ ಅತ್ತೆಮನೆಯವರು ಎಲ್ಲರೂ ತನ್ನನ್ನು ಕಣ್ಣಿನ ಕಣ್ಣಾಗಿ ಕಾಣಲಾರಂಭಿಸಿದ್ದರು. ಮದುವೆಯ ದಿನವೆ ತನ್ನ ನಾದಿನಿ ವಸಂತುವಿಗೆ ಶಾಂತ ಮಾರುಹೋಗಿದ್ದಳು. ವಸಂತುವಂತೂ ಅತ್ತಿಗೆ ಎಂದರೆ ಹಾ ರಾ ಡಿ ಹಿಗ್ಗಿ ಕುಣಿಯುತ್ತಿದ್ದಳು. ಮದುವೆಯಲ್ಲಿಯೆ ಅತ್ತಿಗೆ ಯನ್ನು ಎಡಬಿಡುತ್ತಿರಲಿಲ್ಲ. ಮದುವೆ ಮುಗಿಸಿಕೊಂಡು ಹೋಗುವಾಗಲೆ 'ಅತ್ತಿಗೆ—ಈಗ ನೀನು ಬರೋದಿಲ್ಲವೆ, ಅತ್ತಿಗೆ ?' ಎಂದು ಕಣ್ಣಿನಲ್ಲಿ ಬೇಡಿ ಕೊಳ್ಳುತ್ತ ಕೇಳಿದ್ದಳು. ಆಗ ಶಾಂತಳಿಗೆ ಹದಿನೈದು ತುಂಬಿತ್ತು. ವಸಂತುವಿಗೆ ಆಗ ಐದು ವರ್ಷವಾಗಿತ್ತೊ ಏನೊ. ಮುದ್ದುಮುದ್ದಾಗಿ ಜರತಾರಿಯ ಲಂಗ, ಜಂಪರ್ ತೊಟ್ಟು ಎರಡು ಜಡೆಗೂ ಸೇರಿದಂತೆ ರಿಬ್ಬನ್ನಿನ ಸೇತುವೆ ಕಟ್ಟಿಕೊಂಡು ಅತ್ತಿಗೆಯನ್ನು ಗಿಂಜಿಗೊಳ್ಳುತ್ತಿದ್ದಳು. ಶಾಂತಳಿಗೆ ಆಗ ಏನೆನಿಸ ಬೇಕು ? ಮದುವೆಯ ಹಿಗ್ಗಿನ ಜತೆಗೆ ಏನೊ ಎಂಬ ಹೆದರಿಕೆಯೂ ಇತ್ತು. ಅಲ್ಲದೆ ಹೊಸ ಮನೆಯಲ್ಲಿ ತನ್ನವರಾದ ತನ್ನ ಯಜಮಾನರು, ಅಲ್ಲದೆ ಉಳಿದ ವರೂ ತನ್ನವರೆ ಆಗುವರೊ ಅಥವಾ ಎಲ್ಲರಿಗೂ ತಾನು ಬೇರೆಯ ಮನೆ ಯವಳು, ಹೊರಗಿನವಳೆಂಬ ಭಾವನೆ ಬಂದೀತೊ ಎಂಬ ಒಳ ಕಳವಳ ಇತ್ತು. ಆದರೆ ನಾದಿನಿ ವಸಂತುವಿನ ಈ ಪ್ರೀತಿಯನ್ನು ಕಂಡು ಅವಳಿಗೆ ಬಹಳವಾಗಿ ನಾಚಿಕೆಯಾಯಿತು, ಸಂತೋಷವೂ ಆಯಿತು. ವಸಂತುವನ್ನು ಎದೆಗೆ ಅವಚಿಕೊಂಡು ಮುದ್ದಾಡಿದಳು. ತಾನು ಈಗಲೆ ಅತ್ತೆಯ ಮನೆಗೆ ಹೋದರೂ ಪರವಾಗಿಲ್ಲವೆನಿಸಿತು ಆಗ. ವಸಂತುವನ್ನು ಎಷ್ಟು ಮುದ್ದಾಡಿದರೂ ಆಗ ಅವಳಿಗೆ ತೃಪ್ತಿಯಾಗಲಿಲ್ಲ. ಅತ್ತೆಯ ಮನೆಯವರು ಹೊರಟ ದಿವಸವೆಲ್ಲ ವಸಂತುವನ್ನು ತನ್ನ ಹತ್ತಿರದಿಂದ ಬಿಡಲೆ ಇಲ್ಲ. ನಾಚಿಕೆಯೆ ಇಲ್ಲದೆ ಯಾವಾಗಲೂ ಅವಳನ್ನು ಕಟ್ಟಿಕೊಂಡೆ ಓಡಾಡುತ್ತಿದ್ದಳು. ಕೊನೆಗೆ ವಸಂತು ತಾಯಿಯನ್ನು ಪರಿಪರಿಯಾಗಿ ಬೇಡಿಕೊಂಡಳು : 'ಅತ್ತಿಗೆಯನ್ನು ಕರಕೊಂಡು

ಹೋಗೋಣಮ್ಮ' ಅಂತ. ಎಲ್ಲರೂ ಅವಳ ಮಾತಿಗೆ ನಕ್ಕುಬಿಟ್ಟರು. ಶಾಂತಳಿಗೂ ನಾಚಿಕೆಯಿಂದ ಕೆನ್ನೆಯೆಲ್ಲ ನವಿರಾಯಿತು. ಕೊನೆಗೆ ತಾನಾಗಿಯೆ ಅತ್ತೆಯನ್ನು ಕೇಳಿಕೊಂಡು ವಸಂತುವನ್ನು ಅಲ್ಲಿಯೆ ನಾಲ್ಕು ದಿನ ಇಟ್ಟುಕೊಳ್ಳುವುದಾಗಿ ಹೇಳಿದಳು. ಅತ್ತೆ, ಮಾವ ಎಲ್ಲರೂ ಒಪ್ಪಿದರು. ವಸಂತುವಿಗೆ ಅತ್ತಿಗೆಯ ಮನೆಯಲ್ಲಿರುವುದಕ್ಕಿಂತ ಅತ್ತಿಗೆಯನ್ನು ಕರೆದುಕೊಂಡು ಹೋಗುವುದು ಬೇಕಾಗಿತ್ತು. ಆದರೆ ಈಗ ಕರೆದುಕೊಂಡು ಬರುವುದು ಸಾಧ್ಯವಿಲ್ಲವೆಂದ ಮೇಲೆ ಅಲ್ಲಿಯೆ ಇರಲು ಒಪ್ಪಿದಳು. 'ಇನ್ನು ನಾಲ್ಕೈದು ದಿನಕ್ಕೆ ಬಂದುಬಿಡು, ವಸಂತು' ಎಂದರು ಅತ್ತೆ. 'ಅತ್ತಿಗೆಯನ್ನು ಹುಟ್ಟಿದಾಗಿನಿಂದ ಕಂಡೋಳ ಹಾಗೆ ಆಡತಾಳಲ್ಲಮ್ಮ ಇವಳು' ಎಂದು ಹಿಗ್ಗಿನಿಂದ ಮಾತನಾಡುತ್ತ ಎಲ್ಲರ ಕಡೆಗೂ ನೋಡಿದರು. ವಸಂತುವೂ ಸುಮ್ಮನಿರಲಿಲ್ಲ. 'ಅಮ್ಮ, ನೀನು ಅತ್ತಿಗೆಯನ್ನು ಕರಕೊಂಡು ಬರದಿದ್ದರೆ ಬೇಡ, ನಾನೇ ಕರಕೊಂಡು ಬರತೀನಿ' ಅಂದಳು. ಎಲ್ಲರೂ ಹಿಗ್ಗಿನಿಂದ ನಕ್ಕಾಗ ಕಕ್ಕಾವಿಕ್ಕಿಯಾಗಿ ವಸಂತು ಅತ್ತಿಗೆಯನ್ನು ತಬ್ಬಿಕೊಂಡಿದ್ದಳು. ಆ ಕಾಲದಲ್ಲೆಲ್ಲ ಮಾತನಾಡದೆ ಹೆಣ್ಣುಹುಡುಗಿಯರಿಗಿಂತಲೂ ಹೆಚ್ಚಿನ ನಾಚಿಕೆಯಿಂದ ದೂರದಲ್ಲಿ ನಿಂತವನೆಂದರೆ ಶಾಂತಳ ಮೈದುನ ಸೀನುವೊಬ್ಬನೆ. ಶಾಂತಳಿಗೆ ಅವನನ್ನು ಮಾತನಾಡಿಸುವ ಪ್ರಯತ್ನ, ಧೈರ್ಯ ಆಗ ಬರಲಿಲ್ಲ. ಅಲ್ಲದೆ ಅವನಿಗೂ ಅವಳಿಗೂ ಎರಡು ವರ್ಷದಷ್ಟು ವ್ಯತ್ಯಾಸ. ಅವಳಿಗೂ ನಾಚಿಕೆ. ಅವನ ಮುಖದಲ್ಲೂ ಬಣ್ಣ ಬೇಗನೆ ಏರಿ ಇಳಿಯುತ್ತಿತ್ತು.

ಮದುವೆಯಾದ ಒಂದು ತಿಂಗಳು ವಸಂತು ಅತ್ತಿಗೆಯ ಜತೆಯಲ್ಲೆ ಇದ್ದಳು. ಆದರೆ ಒಂದು ದಿನವಾದರೂ ಊರಿಗೆ ಹೋಗುವ ಹಟ ಹಿಡಿಯಲಿಲ್ಲ. ಊರಿನ ಕಡೆಗೆ ಅವಳ ಮನಸ್ಸೆಳೆಯುತ್ತಿತ್ತು. ಆಗಾಗ 'ಅತ್ತಿಗೆ, ಊರಿಗೆ ಯಾವಾಗ ಹೋಗುವುದು, ಅತ್ತಿಗೆ ?' ಎಂದು ಕೇಳುತ್ತಿದ್ದಳು. ಶಾಂತ ಆಗ ನಾಚಿಕೆಪಟ್ಟುಕೊಳ್ಳುತ್ತಿದ್ದಳು. ಆಮೇಲೆ ಸಮಾಧಾನಪಡಿಸುತ್ತಿದ್ದಳು. ಒಂದು ತಿಂಗಳ ಕಾಲವೂ ಅವಳಿಗೆ ಅತ್ತಿಗೆಯೆ ಎಲ್ಲವೂ. ಊಟ, ತಿಂಡಿ, ಸ್ನಾನಕ್ಕೆ ಅತ್ತಿಗೆಯ ನೆರವಿಲ್ಲದಿದ್ದರೆ ಸಾಧ್ಯವೆ ಆಗುತ್ತಿರಲಿಲ್ಲ. ಮಲಗುವುದು ಕೂಡ ಅತ್ತಿಗೆಯ ಹಾಸಿಗೆಯಲ್ಲಿ, ಅವಳ ಜತೆಯಲ್ಲೆ. ಒಂದು ದಿನ ವಸಂತುವಿಗೆ ಮೈ ಕೊಂಚ ಬೆಚ್ಚಗಾಗಿತ್ತು, ಹೊರಗೆ ಮಳೆಗಾಳಿಯ ಕೊರೆತ

ದಿಂದ ಮೈ ಕೊಂಚ ಬಿಗಡಾಯಿಸಿತ್ತು. ಆಗ ರಾತ್ರಿ ನಿದ್ರೆ ಬರದೆ ಹೋಗಿತ್ತು. ಶಾಂತ ಅವಳ ಪಕ್ಕದಲ್ಲಿ ಕುಳಿತು ನೋಡಿಕೊಂಡಿದ್ದಳು. ತನ್ನ ಮಗುವೆ ಆಗಿದ್ದರೆ ಕರುಳು ಎಷ್ಟು ತುಡಿದುಕೊಳ್ಳುತ್ತಿತ್ತೊ, ನಾದಿನಿ ವಸಂತುವಿಗಾಗಿ ಅಷ್ಟೊಂದು ತುಡಿದುಕೊಳ್ಳುತ್ತಿತ್ತು. ಆಗಲೆ ಶಾಂತಳ ತಾಯಿ ಒಳಗೆ 'ಮದುವೆಯ ದಿನದಿಂದಲೆ ನಾದಿನಿಯ ಸೇವೆಗೆ ಆರಂಭವಾಯಿತು. ಏನು ಕಾಟವೊ' ಎಂದು ಗೊಣಗಿದಾಗ ಶಾಂತ ತಾಯಿಯನ್ನು ತನ್ನ ಬಾಯಿಗೆ ಬಂದಂತೆ ಅಂದಿದ್ದಳು. 'ಅತ್ತಿಗೆಯನ್ನು, ನೀನು ತಾನು ಅಂತಾಳೆ' ಎಂದು ತಾಯಿ ಮತ್ತೊಮ್ಮೆ ಗೊಣಗಿದಾಗ ಶಾಂತ ತಾನಾಗಿಯೆ 'ಅಮ್ಮ, ನೀನು ತಾನು ಅಂದರೆ ಆತ್ಮೀಯತೆ. ನಿನ್ನನ್ನು ನಾವು, ನೀವು ತಾವು ಅಂದರಾಗುತ್ತೆಯೆ? ಇದು ಹಿತವಂತಿಕೆ' ಎಂದು ಉತ್ತರ ಕೊಟ್ಟಿದ್ದಳು. ಆದರೆ ತಾಯಿ ಮಾತ್ರ 'ಏನು ಹಿತವಂತಿಕೆಯೊ' ಎಂದು ಗೊಣಗಿಯೆ ಗೊಣಗಿದರು. ಆ ದಿನ ರಾತ್ರಿ ವಸಂತುವಿಗೆ ಜ್ವರ ಏರಿತು. ಶಾಂತ ಅವಳನ್ನೆತ್ತಿ ಕೊಂಡು ತನ್ನ ತೊಡೆಯ ಮೇಲೆ ತಲೆಯಿಟ್ಟುಕೊಂಡು ಹಣೆಗೆ ಹಾಲಿನ ಪಟ್ಟಿ ಹಾಕುತ್ತಿದ್ದಳು. ಬಹಳ ಹೊತ್ತಿನ ನಂತರ ವಸಂತುವಿಗೆ ನಿದ್ರೆ ಬಂದಿತು. ಶಾಂತಳಂತೂ ದೇವರಲ್ಲಿ ಈ ಜೀವವನ್ನುಳಿಸಲು ಮೊರೆಯಿಟ್ಟದಕ್ಕೆ ಕೊನೆ ಮೊದಲೆ ಇಲ್ಲ. ಆಗ ಜ್ವರ ತಗ್ಗಲು ಮೈಯೆಲ್ಲ ಬೆವತಾಗ ತನ್ನ ಟವಲಿನಲ್ಲಿ ಮೈಯನ್ನೆಲ್ಲ ಒರಸಿ, ವಸಂತುವನ್ನು ತನ್ನ ಹಾಸಿಗೆಯ ಮೇಲೆ ಮಲಗಿಸಿ ಕೊಂಡಳು. ರಾತ್ರಿಯ ಜ್ವರದ ಆವೇಗದಲ್ಲಿಯೊ, ಇಲ್ಲ, ಅದು ಬಿಟ್ಟ ಸುಸ್ತಿ ನಲ್ಲಿಯೊ ಯಾವ ಹೊತ್ತಿನಲ್ಲೊ, ವಸಂತು ಹಾಸಿಗೆಯಲ್ಲೆ ಉಚ್ಚೆ ಹೊಯ್ದು ಕೊಂಡುಬಿಟ್ಟಿದ್ದಳು. ಬೆಳಿಗ್ಗೆ ಏಳುವ ವೇಳೆಗೆ ಶಾಂತಳಿಗೆ ಇದು ಗೊತ್ತಾಯಿತು. ವಸಂತುವಿಗೆ ಎಚ್ಚರವಾಗುವ ತನಕ ಅವಳನ್ನು ಬಿಟ್ಟುಹೋಗಲು ಶಾಂತಳಿಗೆ ಇಷ್ಟವಿರಲಿಲ್ಲ. ತನ್ನ ತಾಯಿ ಇದನ್ನು ಕಂಡರೆ ಇನ್ನೇನು ಗಲಾಟೆ ಎಬ್ಬಿಸಿ ಬಿಡುವರೊ ಎಂದು ಶಾಂತಳಿಗೆ ಆತಂಕ. ಕೊನೆಗೆ ವಸಂತುವಿಗೆ ಎಚ್ಚರ ವಾದಾಗ ಅವಳಿಗೆ ಇದು ಗೊತ್ತಾಯಿತು. ಬಹಳ ದೈನ್ಯವಾಗಿ 'ಅತ್ತಿಗೆ, ಅತ್ತಿಗೆ—ಇನ್ನುಮೇಲೆ ಹೀಗೆ ಮಾಡುವುದಿಲ್ಲ, ಅತ್ತಿಗೆ. ನನ್ನನ್ನು ದೂರ ಮಲಗಿಸಬೇಡ' ಎಂದು ಬೇಡಿಕೊಂಡಳು. ಮಗುವಿನ ಪ್ರೀತಿಯಲ್ಲಿ ಶಾಂತ ಮಗ್ನಳಾದಳು.

ವಸಂತುವನ್ನು ಊರಿಗೆ ಕರೆದುಕೊಂಡು ಹೋಗಲೆಂದು ಸೀನು ಬಂದಿದ್ದ. ಆಗ ಅವನು ಅತ್ತಿಗೆಯ ಹತ್ತಿರ ಬಹಳ ನಾಚಿಕೊಂಡರೂ ಮಾತಾಡದಿದ್ದರೆ ವಿಧಿಯಿರಲಿಲ್ಲ. ಅಂತೂ ಒಂದು ದಿನವಿದ್ದು ಹೋಗಲು ಬಂದವನು ಮೂರು ದಿನವಿದ್ದು ಬಿಟ್ಟ. ನಾಚಿಕೆಯಿಂದ ಸೆಟೆದುಕೊಂಡಿದ್ದವನು ನಗೆಯಿಂದ ಸಲಿಗೆ ಹೊಂದಿದ್ದ. ಇದಕ್ಕೆ ಶಾಂತಳಷ್ಟೆ ಕಾರಣಳಲ್ಲ, ವಸಂತು ಅತ್ತಿಗೆಯನ್ನು ಎಡಬಿಡದೆ ಇರುತ್ತಿದ್ದುದರಿಂದ ಸೀನುವನ್ನು ಯಾವಾಗಲೂ ಅತ್ತಿಗೆಯ ಹತ್ತಿರಕ್ಕೆ ಎಳೆದುಕೊಂಡು ಹೋಗುತ್ತಿದ್ದಳು. ಮೊದಲು ಅವನೊಂದಿಗೆ ಮಾತಾಡಲು ಶಾಂತಳಿಗೂ ಸಂಕೋಚವೆನಿಸಿತು. ಅವನಿಗೂ ಸಂಕೋಚ ವಾಯಿತು ; ಆದರೆ ಹರಟೆಯಮಲ್ಲ. ವಸಂತು ಸುಮ್ಮನೆ ಬಿಡಬೇಕಲ್ಲ. ಅವಳ ಹರಟೆಯ ಮಾತು ಅವರಿಬ್ಬರ ಮಧ್ಯದ ನಾಚಿಕೆಯ ಮಂಜಿನ ತೆರೆಯನ್ನು ಕರಗಿಸಿ ಬಿಟ್ಟಿತು. ಸೀನುವಿಗೆ ಅತ್ತಿಗೆಯ ಬಗ್ಗೆ ಅಭಿಮಾನ ಬಂದುದು ಆಗ. ಅಲ್ಲದೆ ಶಾಂತಳಿಗೂ ತಮ್ಮನಂತೆಯೆ ಇವನೆಂಬ ಭಾವನೆ ಬಂತು. ವಸಂತು ಸೀನುವಿನ ಅನಂತರ ಬಹಳ ವರ್ಷಗಳಾದಮೇಲೆ ಹುಟ್ಟಿದವಳು. ಮುದ್ದುಮುದ್ದಾಗಿ ಅವಳನ್ನು ಬೆಳಸಿದ್ದರು. ಅತ್ತಿಗೆ ಅವಳನ್ನು ಅಷ್ಟು ಪ್ರೀತಿಸುತ್ತಿದ್ದುದು ಸೀನು ವಿಗೆ ಬಹಳ ಸಂತೋಷವಾಯಿತು. ಅವನಿಗಂತೂ ವಸಂತು ಮುದ್ದಿನ ತಂಗಿ. ಯಾವಾಗಲೂ ಅವನೊಂದಿಗೆ ಹರಟುವವಳು ಅವಳು. ಅವನ ಜತೆಯಲ್ಲಿಯೆ ಲಲ್ಲೆಹೊಡೆಯುವವಳು. ಅವಳು ಅತ್ತಿಗೆಯನ್ನು ಇಷ್ಟೆಲ್ಲ ಹೊಗಳುವುದು, ಅತ್ತಿಗೆ ಅವಳನ್ನು ಪ್ರಾಣಕ್ಕೆ ಪ್ರಾಣವಾಗಿ ಪ್ರೀತಿಸುವುದು ಸೀನುವಿನ ಪ್ರೀತಿಯ ಮೇಲೆ ಪ್ರಭಾವಗೊಂಡಿತು. ಅತ್ತಿಗೆಯಲ್ಲಿ ಗೌರವ, ಅಭಿಮಾನಗಳು ಬಂದವು. ಸಲಿಗೆಯೂ ಕೂಡಿಕೊಂಡೆ ಬಂದಿತು. ಅತ್ತಿಗೆಯ ಬಲವಂತಕ್ಕೆ ಎರಡು ದಿನ ಹೆಚ್ಚಿಗೆ ಇದ್ದು ಊರಿಗೆ ಹೋದ.

ಆರು ತಿಂಗಳಿಗೆ ನಿಷೇಕಪ್ರಸ್ತದ ಶಾಸ್ತ್ರ ಮುಗಿಸಿಕೊಂಡು ಸೊಸೆಯನ್ನು ಮನೆಗೆ ಕರೆಸಿಕೊಂಡರು ಗಂಗಮ್ಮ. ಸೊಸೆಯ ಗುಣದ ಬಗ್ಗೆ ಅವರಿಗೆ ಯಾವ ಬಗೆಯ ಸಂದೇಹವೂ ಇರಲಿಲ್ಲ. ವಸಂತು ಸೀನು ಇಬ್ಬರೂ ಆಕಾಶ ಮುಟ್ಟಿಸಿ ಬಿಟ್ಟಿದ್ದರು ಹೊಗಳಿಕೆಯನ್ನು. ಸೊಸೆ ಕೂಡ ಅದಕ್ಕೆ ಸರಿಯಾಗಿಯೆ ನಡೆದು ಕೊಂಡಳು. ಗಂಗಮ್ಮನವರಿಗಂತೂ ಸೊಸೆಯನ್ನು ಕೂರಿಸಿದರೂ ಸಾಲದು, ನಿಲ್ಲಿಸಿದರೂ ಸಾಲದು. 'ರತ್ನದಂತಹವಳು ನಮ್ಮ ಶಾಂತ.' ಎಲ್ಲರೆದುರಿಗೂ

ಅವಳ ಗುಣವನ್ನು ಕೊಂಡಾಡುವವರೆ. ಮುಚ್ಚಟೆಯಾಗಿರುವ ಸೊಸೆಯನ್ನು ಪಡೆದ ತಮ್ಮ ಭಾಗ್ಯವನ್ನು ಎಲ್ಲ ಕಡೆಯಲ್ಲಿಯೂ ಹೊಗಳಿಕೊಳ್ಳುತ್ತಿದ್ದರು. ಈ ಹೊಗಳಿಕೆಯಿಂದ ನಿನ್ನ ಸೊಸೆಯ ತಲೆ ತಿರುಗಿಹೋದೀತು ಎಂದು ಶಾಂತಳ ಗಂಡನೇನೊ ಒಂದೆರಡು ಬಾರಿ ಹಾಸ್ಯಕ್ಕೆ ಅಂದಿದ್ದ. ಆಗ ಗಂಗಮ್ಮ ಸೊಸೆಯನ್ನೆ ವಹಿಸಿಕೊಂಡು ಮಾತಾಡುತ್ತಿದ್ದರು. ತಮಾಷೆಗಾಗಿ ಒಂದು ಸಾರಿ ಶಾಂತಳ ಗಂಡ ಅವಳನ್ನು 'ಹೋಗು, ನಾನು ನಿನ್ನನ್ನು ಬಿಟ್ಟುಬಿಡುತ್ತೇನೆ' ಅಂದಾಗ ಶಾಂತ, 'ನೀವೇನು ಬೇಕಾದರೂ ಮಾಡಿ, ನಮ್ಮ ಅತ್ತೆಯವರು ಒಳ್ಳೆಯವರು, ಅವರು ನನ್ನನ್ನು ಇಟ್ಟುಕೊಳ್ಳುತ್ತಾರೆ' ಎಂದಿದ್ದಳು. ಅವಳ ಸ್ವಭಾವ ಸ್ವಲ್ಪ ಹಟದ್ದೆಂದು ಮೊದಲೇ ತಿಳಿದಿತ್ತು. ಆದರೆ ಒಳ್ಳೆಯ ಮಾತಿನಲ್ಲಿಯೆ ಅವಳನ್ನು ಹದಕ್ಕೆ ತಂದುಕೊಳ್ಳಬಹುದೆಂದೂ ಗಂಗಮ್ಮನವರಿಗೆ ಗೊತ್ತಾಯಿತು. ಸಣ್ಣ ಪುಟ್ಟ ಜಗಳಗಳಾದಾಗ ಶಾಂತಳ ಈ ಮೊಂಡುತನ ಮೇಲೆದ್ದು ಕಾಣಿಸಿತು. ಆಗ ತಾವು ಅತ್ತೆಯೆನ್ನುವ ದರ್ಪವನ್ನು ಪಯೋಗಿಸದೆ ಗಂಗಮ್ಮನವರು ನಯವಾಗಿ, ಒಳ್ಳೆಯ ಮಾತಿನಿಂದಲೆ ಅವಳ ಹಟವನ್ನು ಬಿಡಿಸಿದ್ದರು. ಮನೆಗೆ ಬಂದು ಆರು ತಿಂಗಳಾದರೂ ಶಾಂತಳಿಗೆ ತವರುಮನೆಗೆ ಹೋಗಬೇಕೆನ್ನುವ ಹಂಬಲ ಉಕ್ಕಿಬರಲಿಲ್ಲ. ಮೊದಲುಮೊದಲಲ್ಲಿ ಆ ಆಸೆ ಒಮ್ಮೊಮ್ಮೆ ಬಂದರೂ ಬರಬರುತ್ತ ತವರುಮನೆಯ ಯೋಚನೆಯೆ ಅವಳಿಗೆ ಬರುತ್ತಿರಲಿಲ್ಲ. ಆಗಲೆ ಗಂಗಮ್ಮನವರು ತಾವಾಗಿಯೆ ಅವಳಿಗೆ ಹೇಳಿ ತಂದೆಯ ಮನೆಗೆ ಕಾಗದ ಹಾಕಿಸುತ್ತಿದ್ದರು. ಆರು ತಿಂಗಳಾದಮೇಲೆ ತಾವೇ ಸೊಸೆಯನ್ನು ತವರುಮನೆಗೆ ಕಳಿಸುವ ಯೋಚನೆ ಮಾಡಿದರು: 'ಅವರೂ ಹೆಣ್ಣು ಹೆತ್ತವರು, ಅವರಿಗೂ ಕರುಳು ತುಡಿಯೋದಿಲ್ಲವೆ? ಆರು ತಿಂಗಳಾದರೂ ಒಂದು ಸಾರಿಯೂ ನಮ್ಮ ಹುಡುಗಿಯನ್ನು ಕಳಿಸಲಿಲ್ಲ. ಏನು ಹಿಂಸೆಯೋ ಏನೋ ಅಂದುಕೊಳ್ಳುವುದಿಲ್ಲವೆ? ಊರಿಗೆ ಹೋಗಿ ಹದಿನೈದು ದಿನವೊ ತಿಂಗಳೊ ಇದ್ದು ಬರಲಿ' ಎಂದು ತಾವೇ ಅಂದಿದ್ದರು. ಪದೆ ಪದೆ ಶಾಂತಳ ತಂದೆಯಿಂದ ಕಾಗದ ಬರುತ್ತಿತ್ತು. ಶಾಂತಳೆ ಈಗ ಆಗ ಎಂದು ಮುಂದೆ ಹಾಕುತ್ತಿದ್ದಳು. ಆ ಸಲ ಮಾತ್ರ ಗಂಗಮ್ಮನವರು ಇಂತಹ ದಿನ ಬರುತ್ತಾಳೆ ಎಂದು ಕಾಗದ ಹಾಕಿಸಿಯೆಬಿಟ್ಟರು. ಗಂಡನೇ ಕರೆದುಕೊಂಡು ಹೋಗಿ ಬಿಡುವ ಯೋಚನೆಯಿತ್ತು. ಆದರೆ ಅಕಸ್ಮಾತ್ತಾಗಿ ಆ ದಿನವೆ ಕಚೇರಿಯಲ್ಲಿ

ಮತ್ತೊಬ್ಬನಿಗೆ ಕಾಯಿಲೆಯಾದ್ದರಿಂದ ಶಾಂತಳ ಗಂಡನಿಗೆ ರಜೆ ಸಿಕ್ಕಲಿಲ್ಲ. ಆಗ ಶಾಂತ ತಾನು ಹೋಗುವುದಿಲ್ಲವೆಂದರೂ ಗಂಗಮ್ಮನವರು ಬಲವಂತದಿಂದ ಹೊರಡಿಸಿದರು. ಸೀನು ಶಾಂತಳನ್ನು ರೈಲಿನಲ್ಲಿ ಕರೆದುಕೊಂಡುಹೋಗಿ ಅವಳ ಮನೆಯಲ್ಲಿ ಬಿಟ್ಟು, ಎರಡು ದಿನವಿದ್ದು ಬರುವುದೆಂದು ತೀರ್ಮಾನ ವಾಯಿತು. ಶಾಂತಳಂತೂ ತಾನು ಹದಿನೈದು ದಿನಕ್ಕೆ ಹೆಚ್ಚಿಗೆ ಇರುವುದಿಲ್ಲವೆಂದು ಹೇಳಿಬಿಟ್ಟಿದ್ದಳು.

ಶಾಂತಳಿಗೆ ಈಗ ಇಂದಿರೆಯನ್ನು ಅವಳ ಗಂಡ ರೈಲುನಿಲ್ದಾಣದಲ್ಲಿ ಕಳುಹಿಸಿಕೊಡಲು ಬಂದುದನ್ನು ಕಂಡು ತನ್ನ ಆ ಮೊದಲನೆಯ ಪ್ರಯಾಣ ವೆಲ್ಲ ನೆನಪಾಯಿತು. ತನ್ನ ಯಜಮಾನರು ಬಹಳ ಮೃದುವಾದ ಸ್ವಭಾವ ದವರು. ಬೆಣ್ಣೆಯಂತೆ ನಯ, ಹಾಗೆಯೆ ಕರಗುವ ಹೃದಯ. ನೋಡಲು ಕೂಡ ನೀಟಾದ ಆಕೃತಿ. ಕಪ್ಪಲ್ಲದಿದ್ದರೂ ಬಿಳುಪಿಗೆ ಸೇರಿದುದೂ ಅಲ್ಲ ಮೈಬಣ್ಣ. ಆದರೆ ಮುಖದಲ್ಲಿ ಕಳೆಯಿತ್ತು, ಶಾಂತಿಯೂ ಇತ್ತು. ಸುಲಭವಾಗಿ ಯಾವುದರಿಂದಲೂ ಉದ್ವೇಗವಾಗಲಿ, ಉದ್ರೇಕವಾಗಲಿ ಆಗದಂತಹ ಶಾಂತ ಪ್ರವೃತ್ತಿ. ಎಲ್ಲದರಲ್ಲಿಯೂ ಪ್ರೀತಿಯಿಡುವ ಅವರನ್ನು ಶಾಂತ ಬಹಳ ಮೆಚ್ಚಿ ಕೊಂಡಿದ್ದಳು. ಗಂಡನನ್ನು ಮೆಚ್ಚಿಕೊಳ್ಳುವುದು ಹೆಂಡತಿಗೆ ಸಹಜವೆ ಆದರೂ ಶಾಂತಳಲ್ಲಿ ಈ ಮೆಚ್ಚಿಗೆ ಬರಿಯ ಸಹಜ ಪ್ರೀತಿಯಷ್ಟೆ ಅಲ್ಲ, ಗಂಡನ ನಿಜ ವಾದ ಗುಣ, ಸೌಜನ್ಯಕ್ಕೆ ಅವಳ ಹೃದಯ ಅರ್ಪಿತವಾಗಿತ್ತು. ಅವರಂತಹ ಯಜಮಾನರು ತನಗೆ ಸಿಕ್ಕಿದುದು ತನ್ನ ಪುರಾಕೃತ ಪುಣ್ಯವೆಂದೆ ಶಾಂತಳಿಗೆ ಅನಿಸಿತ್ತು. ಅವರ ಮಾತಿನಲ್ಲೂ ವಿನಯವಿತ್ತು. ಅಲ್ಲದೆ ಪ್ರೀತಿಯಿಂದ ನೇವರಿಸುವಂತೆ ಮೃದುವಾಗಿ ಬರುವ ಮಾತು ಕೇಳಿದರೆ ಶಾಂತಳಿಗೆ ಹಾಯಿ ಎನಿಸುತ್ತಿತ್ತು. ಈಗ ಅವರು ಮನೆಗೆ ಬರುವ ವರೆಗೂ ತಾನು ಕಾಯಬೇಕಾ ಗಿತ್ತು, ನೋಡಬೇಕಾಗಿತ್ತು. ಅವರಿಗೆ ಹೇಳದೆ ತಾನು ಬಂದುದು ತಪ್ಪಾಯಿ ತೆಂದು ಶಾಂತಳಿಗೆನಿಸಿತು. ಕಣ್ಣು ತೆರೆಗೂಡಿತು. ಅಷ್ಟೆ ಅಲ್ಲ, ಒಂದು ಕಾಗದ ವನ್ನಾದರೂ ಬರೆದಿಡಬಹುದಾಗಿತ್ತೆಂದುಕೊಂಡಳು. ಆದರೆ ಮನೆ ಬಿಟ್ಟು ಹೊರಟ ಕ್ಷಣದ ರೋಷದಲ್ಲಿ ಕಾಗದ ಬರೆಯುವಷ್ಟು ಸಮಾಧಾನವೆಲ್ಲಿ ಬರಬೇಕು. ತನ್ನ ಯಜಮಾನರು ಈಗ ಏನೆಂದುಕೊಳ್ಳುವರೊ ಎಂದು ಶಾಂತಳ ಹೃದಯ ಮಿಡುಕಿತು.

ಆ ದಿನ ತನ್ನನ್ನು ರೈಲಿನಲ್ಲಿ ಕಳಿಸಲು ಅವರ ಜತೆಯಲ್ಲಿ ವಸಂತುವೂ ಹಟ ಮಾಡಿಕೊಂಡು ಬಂದಿದ್ದಳು. ವಸಂತುವನ್ನು ಸಮಾಧಾನಪಡಿಸುವುದೆ ದೊಡ್ಡ ತಾಪತ್ರಯವಾಗಿತ್ತು. ಅತ್ತಿಗೆಯ ಜತೆಯಲ್ಲಿ ತಾನೂ ಹೋಗಿಯೆ ತೀರುವೆನೆಂದು ಹಟ ಮಾಡಿಕೊಂಡು ರಂಪಮಾಡಿದ್ದಳು. ಆದರೆ ಗಂಗಮ್ಮ ನವರೂ, ಮಾವ ರಂಗಣ್ಣನವರೂ ಅವಳನ್ನು ಬೇಡವೆಂದುಬಿಟ್ಟರು. ಶಾಲೆಗೆ ಆದೆ ತಾನೆ ಸೇರಿಸಿದ್ದರು. 'ಕಾನ್ವೆಂಟಿನಲ್ಲಿ ಕ್ಲಾಸು ತಪ್ಪಿಸಿಕೊಳ್ಳುವುದು ಸರಿಯಲ್ಲ—ಅದೂ ಸೇರಿದ ಹೊಸದರಲ್ಲೆ' ಎಂದು ಅವರು. ಆದರೆ ವಸಂತು ಆ ಮಾತನ್ನೆಲ್ಲ ಕೇಳಿದರೆ ತಾನೆ! ಹೋಗಿಯೆ ತೀರುತ್ತೇನೆಂದು ರಾದ್ಧಾಂತ ಮಾಡಿಬಿಟ್ಟಳು. ಲೌಕಿಕವಲ್ಲ ಇದು, ಜನ ಏನಾದರೂ ಆಡಿಕೊಳ್ಳುತ್ತಾರೆಂದು ಎಲ್ಲರಿಗೂ ಗೊತ್ತು. ಶಾಂತಳಿಗಂತೂ ವಸಂತುವನ್ನು ಬಿಟ್ಟಿರುವುದು ಕಷ್ಟ ವಾಗಿತ್ತು. ಅವಳ ಗೋಳು ನೋಡಿ 'ಹೋಗಲಿ ಬಿಡಿ, ಅತ್ತೆ. ಅವಳೂ ನನ್ನ ಜತೇಲಿ ನಾಲ್ಕು ದಿನ ಇದ್ದು ಬರಲಿ' ಎಂದು ಒಂದು ಸಾರಿ ಅಂದಿದ್ದಳು. ಆದರೆ ಲೋಕರೂಢಿ ಮಾತುಗಳಿಂದ ಗಂಗಮ್ಮನವರು ಅವಳಿಗೆ ತಿಳಿಯಹೇಳಿ ದ್ದರು. ಅಂತೂ ಹೊರಡುವಾಗ ಕೂಡ ವಸಂತು ಅಳುತ್ತಲೆ ಇದ್ದಳು. ಸ್ಟೇಷನ್ನಿಗೆ ಬಂದು ಶಾಂತಳ ಯಜಮಾನರು ಕಿಟಕಿಯ ಹತ್ತಿರ ನಿಂತರು. ವಸಂತು ಆಗಲೆ ಗಾಡಿಯನ್ನೇರಿ ಅತ್ತಿಗೆಯನ್ನು ತಬ್ಬಿಕೊಂಡು ಕುಳಿತುಬಿಟ್ಟಳು. ಶಾಂತಳ ಯಜಮಾನರ ಮುಖದಲ್ಲಿ ಪ್ರೀತಿಯೊಂದಿಗೆ ಕಾತರವೂ ಧುಮುಗುಟ್ಟುತ್ತಿತ್ತು. ಹದಿನೈದು ದಿನವೆಂಬುದು ಹದಿನೈದು ಯುಗವೊ ಏನೋ ಎನ್ನುವಂತಹ ಭಾವನೆ ಅವರ ಹೃದಯದಲ್ಲಿದ್ದುದು ಮುಖದ ಮೇಲೆ ಮೂಡಿಬಂದಿತ್ತು. ಶಾಂತಳಿಗೂ ಕೊರಳು ತುಂಬಿದಂತಾಯಿತು. ಸುಮ್ಮನೆ 'ಹೋಗಿಬರುತ್ತೇನೆ' ಎಂದಂದಿದ್ದಳು. ಸೀನು ಮೊದಲು ಹತ್ತಿ ಅವಳ ಟ್ರಂಕು ಸಾಮಾನುಗಳನ್ನೆಲ್ಲ ಸರಿಯಾಗಿಟ್ಟು ಅವಳಿಗೆ ಸರಿಯಾಗಿ ಜಾಗ ಮಾಡಿಕೊಟ್ಟಿದ್ದ. ಅಲ್ಲದೆ ತನಗೆ ಅತ್ತಿಗೆಯ ಎದುರಿಗೆ ಕುಳಿತುಕೊಳ್ಳಲು ಜಾಗ ಮಾಡಿಕೊಂಡಿದ್ದ. ಗಾಡಿ ಹೊರಡುವಾಗ ಶಾಂತ ವಸಂತುವನ್ನು ಹೊರಕ್ಕಿಳಿಸಿದಳು. ಅವಳೇನೊ ಅಳು ತ್ತಿದ್ದಳು. ಶಾಂತಳಿಗೂ ಕಣ್ಣೀರು ಬಂತು. ಸೀನುವಿಗೆ ಅವರ ಅಣ್ಣ ಒಂದು ಮಾತನ್ನೂ ಹೇಳಲಿಲ್ಲ. ಅತ್ತಿಗೆಯನ್ನು ಅವನು ಸರಿಯಾಗಿಯೆ ವಿಚಾರಿಸಿ ಕೊಳ್ಳುತ್ತಾನೆಂದು ಅವರಿಗೆ ಗೊತ್ತು.

ಇದನ್ನು ನೆನೆದು ಶಾಂತ ಪಕ್ಕದಲ್ಲಿದ್ದ ಇಂದಿರೆಯ ಕಡೆ ನೋಡಿದಳು. ಇಂದಿರಾ—ತುಂಬಿದ ಬಸುರಿ. ಪಾಪ, ಆಯಾಸಪಟ್ಟ ಮುಖದಲ್ಲಿನ್ನೂ ಬೆವರು ಹರಿಯುತ್ತಿತ್ತು. ಕಣ್ಣಿನ ರೆಪ್ಪೆಗಳು ಹಾಗೆಯೆ ಮುಚ್ಚಿಕೊಳ್ಳುತ್ತಿದ್ದವು. ಗಾಡಿಯ ಇನ್ನೊಂದು ತುದಿಯಲ್ಲಿ ಕುಳಿತ ಆ ಮೈದುನ ಸುಬ್ಬು ತನ್ನಷ್ಟಕ್ಕೆ ಸಿಗರೇಟು ಹಚ್ಚಿ ಹೊಗೆ ಎಳೆದು ಉಗುಳುತ್ತಿದ್ದ. ಶಾಂತಳಿಗೆ ಬಹಳ ಆಶ್ಚರ್ಯವಾಯಿತು. 'ಅತ್ತಿಗೆಯೆಂದರೆ ಇಂತಹ ಅಲಕ್ಷ್ಯವೂ ಉಂಟೆ!' ಎಂದು ಅವಳ ಮನಸ್ಸು ಅಳುಕಿತು. ತನ್ನನ್ನು ಬಿಡಲು ಸೀನು ಬಂದಿದ್ದಾಗ ದಾರಿಯುದ್ದಕ್ಕೂ ಒಂದೆ ಸಮನಾಗಿ ಹರಟುತ್ತ ನಡೆದಿದ್ದ. ತನ್ನ ಕ್ರಿಕೆಟ್ ಪುರಾಣವನ್ನು ಅವನು ಆರಂಭಿಸಿಬಿಟ್ಟರೆ ಅದಕ್ಕೆ ಕೊನೆಮೊದಲೆ ಇರುತ್ತಿರಲಿಲ್ಲ. ಅಲ್ಲದೆ ಪ್ರೀತಿಯ ಅತ್ತಿಗೆ—ಅವನು ಹೇಳಿದುದನ್ನೆಲ್ಲ ಕೇಳುತ್ತಿದ್ದಳು. ಕಿವಿಗೊಟ್ಟು ಕೇಳಿ ಉತ್ತರವನ್ನು ಹೇಳುತ್ತಿದ್ದಳು. ಅವನಷ್ಟೇ ಶಾಂತಳಿಗೂ ಹೆಚ್ಚು ಮಾತು ಬೇಕು. ದಾರಿಯುದ್ದಕ್ಕೂ ಅವನಿಗೆ ತೋರಿದಾಗೆಲ್ಲ ಎಳನೀರು, ಕಾಫಿ ತಿಂಡಿ. ಬೇಡವೆಂದರೂ ಕೇಳಬೇಕಲ್ಲ ಅವನು. ಈಗ ಪಾಪ! ಆ ಇಂದಿರಾ ಇಷ್ಟು ಆಯಾಸಪಡುತ್ತಿದ್ದಾಳೆ. ಎರಡು ಮೂರು ಕಡೆಯಲ್ಲಿ ಎಳನೀರು ಬಂದರೂ ಆ ಮೈದುನ ಈ ಕಡೆ ಕೂಡ ತಿರುಗಿ ನೋಡಲಿಲ್ಲ. ಮೂರು ನಾಲ್ಕು ಸ್ಟೇಷನ್ನಾದಮೇಲೆ ಆ ಮೈದುನ ಗಾಡಿಯಿಂದಿಳಿದು, "ಅತ್ತಿಗೆ, ನನ್ನ ಸ್ನೇಹಿತ ಪಕ್ಕದ ಗಾಡಿಯಲ್ಲಿದಾನೆ. ನಾನಲ್ಲಿಗೆ ಹೋಗ್ತೇನೆ. ಬೆಂಗಳೂರಲ್ಲಿ ಗಾಡಿ ಹತ್ತಿರ ಬರ್ತೇನೆ" ಎಂದು ಹೇಳಿ ಅತ್ತಿಗೆಯ ಉತ್ತರವನ್ನು ಎದುರು ನೋಡದೆ ಹೊರಟೇಹೋದ. ಇಂದಿರಾ ಮಂಕು ಮುಖದಿಂದ ನಿಟ್ಟುಸಿರು ಬಿಟ್ಟಳು. ಅವಳ ಸುಸ್ತನ್ನು ನೋಡಲಾರದೆ ಶಾಂತ ಮುಂದಿನ ಸ್ಟೇಷನ್ನಿನಲ್ಲಿ ಕಾಫಿಯವನನ್ನು ಕರೆದಳು. ಇಂದಿರಾ ದುಡ್ಡು ಕೊಟ್ಟಳು. ಮತ್ತೆ ಮಾತಿಗೆ ಆರಂಭವಾಯಿತು.

"ಅವನು ನಿಮ್ಮ ಮೈದುನನೆ?" ಎಂದಳು ಶಾಂತ.

"ಹುಂ."

"ಏನು ಕೆಲಸ—ಇಲ್ಲ ಓದುತ್ತಾ ಇದಾನೊ?"

"ಏನೂ ಇಲ್ಲ."

ಇಂದಿರೆಗೆ ಅವನ ಬಗ್ಗೆ ಇನ್ನೇನೂ ಹೇಳಲಿಷ್ಟವಿಲ್ಲವೆಂದು ತೋರಿತು.

ಆದರೆ ಅವಳ ಮುಖದಲ್ಲಿ ತೋರಿದ ಭೀತಿಯ ಕುರುಹೇ ಶಾಂತಳಿಗೆ ಸಾಕಾಯಿತು. ಅತ್ತಿಗೆಗೂ ಮೈದುನನಿಗೂ ಅಷ್ಟಕ್ಕಷ್ಟೆ. ಆದರೆ ಅತ್ತಿಗೆಗೆ ಮೈದುನನನ್ನು ಕಂಡರೆ ಹೆದರಿಕೆಯೆಂದೂ ಗೊತ್ತಾಯಿತು. ಅವಳಿಗೆ ಬೇಡದ ಆ ಮಾತನ್ನು ಅಲ್ಲಿಗೆ ಬಿಡುವುದು ಸರಿಯೆಂದುಕೊಂಡು ಬೇರೆ ವಿಷಯದ ಕಡೆ ಮಾತನ್ನು ತಿರುಗಿಸಿದಳು.

"ಬೆಂಗಳೂರಿನಲ್ಲಿ ಮನೆ ಎಲ್ಲಿ?"

"ಆಂ?" ಎಂದು ಇಂದಿರಾ ಬೇರೆ ಯಾವುದೊ ಯೋಚನೆಯಲ್ಲಿ ಮಗ್ನಳಾಗಿದ್ದವಳು ಸರ‍್ರನೆ ಎಚ್ಚತ್ತಳು.

"ಬೆಂಗಳೂರಿನಲ್ಲಿ ಮನೆ ಎಲ್ಲಿ?"

"ಬಸವನಗುಡಿಯಲ್ಲಿ."

ಇಂದಿರೆಗೆ ಈಗೇನು ಮಾತನಾಡುವುದೂ ಬೇಕಾಗಿಲ್ಲವೆಂದು ಶಾಂತ ಸುಮ್ಮನಾಗಿಬಿಟ್ಟಳು. ಸ್ವಲ್ಪಹೊತ್ತು ಹಾಗೆಯೆ ಮೌನವಾಗಿ ಕಳೆಯಿತು. ಪಾಪ! ಎಷ್ಟು ಕಷ್ಟವೊ ಈಕೆಗೆ, ಎಂದು ಶಾಂತ ಒದ್ದಾಡಿದಳು. ಇಂದಿರೆಯ ಗಂಡನಿಗೇನೂ ಅವಳ ಮೈದುನ ಬಗ್ಗುವವನಲ್ಲವೆಂಬುದು ದೃಢವಾಗಿತ್ತು. ಅಲ್ಲದೆ ಇಂದಿರೆ ಮೈದುನನ ಬಗ್ಗೆ ಅಷ್ಟೊಂದು ಹೆದರಬೇಕಾದರೆ ಅವನೆಂತಹ ಕೇಡುಗನಿರಬಹುದೆಂದೂ ಅವಳಿಗೆ ಅನಿಸಿತು. ಮಾವನ ಮನೆ ಹೇಗಿರಬಹುದೆಂದು ಊಹಿಸಿಕೊಳ್ಳಲು ಯತ್ನಿಸಿದಳು. ಪೋಲಿ ಅಲೆಯುವ ಈ ಮೈದುನನ ಜವಾಬ್ದಾರಿಯಲ್ಲಿ ಹೆಂಡತಿಯನ್ನು, ಆರು ತಿಂಗಳ ತುಂಬು ಬಸುರಿಯನ್ನು ಊರಿಗೆ ಕಳಿಸುವಂತಹ ಬೇಜವಾಬ್ದಾರಿಯ ಕೆಲಸ ಮಾಡುವ ಗಂಡ ತನ್ನ ಹೆಂಡತಿಯನ್ನು ಎಷ್ಟು ಪ್ರೀತಿಸಬಹುದೆಂದೂ ಅವಳು ಅಂದುಕೊಂಡಳು. ಅತ್ತೆ ಮಾವನವರು ಇನ್ನು ಹೇಗೊ ಎಂದು ಕೂಡ ಒಂದು ಯೋಚನೆ ಹೊಳೆಯಿತು. ತನ್ನ ಮಾವನವರು ಎಷ್ಟು ಒಳ್ಳೆಯವರು, ಸ್ವಭಾವ ಎಷ್ಟು ಒಳ್ಳೆಯದು, ಬಾಯಿ ಮಾತ್ರ ಕೆಲವು ವೇಳೆ ಬಹಳ ಒರಟೆಂಬುದು ನಿಜ. ಆದರೆ ಮಕ್ಕಳು ಸೊಸೆ ಅಂದರೆ ಬಹಳ ಪ್ರೀತಿಯಿಟ್ಟುಕೊಂಡಿದ್ದರು. ಮೊದಲನೆಯ ಸಾರಿಯೆ ರಂಗಣ್ಣನವರು ಸೊಸೆಯನ್ನು ಕರೆದು ಹೇಳಿಬಿಟ್ಟರು. ಶಾಂತ ಮಾವನೆದುರಿಗೆ ಬಹಳ ಸಂಕೋಚದಿಂದ ನಿಂತು ಅವರ ಮಾತನ್ನು ತಲೆತಗ್ಗಿಸಿಕೊಂಡೆ ಕೇಳಿದ್ದಳು. ರಂಗಣ್ಣನವರು 'ನೋಡಮ್ಮ, ಶಾಂತ. ನೀನು ನಮ್ಮ ಮನೆಗೆ

ಸೊಸೆಯಲ್ಲ; ಮಗಳು ಅಂತಲೆ ತಿಳಿದುಕೊ. ನನ್ನದು ಕೊಂಚ ಬಿರುಸು ಮಾತು ಹೇಳುವ ಸ್ವಭಾವ. ಹಾಗೇನಾದರೂ ಅಪ್ಪಿತಪ್ಪಿ ಅಂದರೆ ಅದು ಪ್ರೀತಿಯ ಬೈಗಳೆ ಹೊರತು ಕೋಪಕ್ಕಲ್ಲ. ನಿನ್ನ ಗಂಡ, ಮೈದುನ, ನಾದಿನಿ ಎಲ್ಲರೂ ನಿನ್ನವರೆ. ಈ ಮನೆಯೂ ನಿನ್ನ ಮನೆ. ನೀನೂ ಹಾಗೆಯೆ ಇರಬೇಕು' ಎಂದಿದ್ದರು. ಹಾಗೆಯೆ ನಡೆದುಕೊಂಡು ಬಂದಿದ್ದರು. ಅದರಿಂದ ಮಾವನವರ ಮತ್ತು ಅತ್ತೆಯ ಹತ್ತಿರ ಕೂಡ ಶಾಂತ ಸಲಿಗೆಯಿಂದಲೆ ಇರುತ್ತಿದ್ದುದು. ಮೊದಲ ಬಾರಿ ತವರುಮನೆಗೆ ಹೊರಟಾಗ ಅವರೇ ಬಲವಂತ ಮಾಡಿದುದು: 'ತಾಯಿಯ ಮನೆಯವರಿಗೂ ಆಸೆಯಿರುವುದಿಲ್ಲವೆ? ಹೋಗಿ ಬರಬೇಕಮ್ಮ' ಎಂದು ಶಾಂತಳಿಗೆ ಹೇಳಿ, ಸೀನುವನ್ನು ಜತೆಮಾಡಿ ಕಳಿಸಿದ್ದರು. 'ನಿನ್ನ ಗಂಡನಿಗೆ ಈಗ ಬರಲಾಗುವುದಿಲ್ಲ. ಆದರೆ ಸೀನುವಿನ ಜತೆಯಲ್ಲಿ ನೀನು ಹೋಗುವುದಾದರೆ ಹೋಗಿ ಬಾ' ಎಂದಿದ್ದರು. ಶಾಂತಳಿಗೆ ಮೈದುನನ ಜತೆಯಲ್ಲಿ ಹೋಗಲು ಯಾವ ರೀತಿಯ ಸಂಕೋಚವೂ ಆಗಲಿಲ್ಲ. ತನ್ನ ಮಾವನವರು ಅಷ್ಟು ಪ್ರೀತಿಯಿಂದ ತನ್ನನ್ನು ಕಂಡುಕೊಳ್ಳುತ್ತಿದ್ದರು. ಅಂತಹ ಮನೆಯನ್ನು ಈಗ ಒಮ್ಮಿಂದೊಮ್ಮೆ ಬಿಟ್ಟುಬಂದೆನಲ್ಲ ಎಂದು ಶಾಂತ ಚಡಪಡಿಸಿದಳು. ಇಂದಿರೆಯ ಮನೆಯ ಯೋಚನೆ ಹಾಗೆಯೆ ಮರೆತುಹೋಯಿತು. ತಾನು ಮಾಡಿದ ಕೆಲಸ ತಪ್ಪೆನ್ನುವ ಭಾವನೆ ಅವಳ ಮನಸ್ಸನ್ನು ಕೊರೆಯುತ್ತಿತ್ತು. ಈಗಂತೂ ಕೊನೆಯ ಕ್ಷಣದಲ್ಲಿ ತಾನು ಮನೆಯಿಂದ ಹೊರಕ್ಕೆ ಕಾಲಿಟ್ಟಾಗ ವಸಂತು 'ಅತ್ತಿಗೆ, ಅತ್ತಿಗೆ' ಎಂದು ಅತ್ತುದು ಕಿವಿಯಲ್ಲಿ ಕಟ್ಟಿದಂತಾಗಿತ್ತು.

"ನಿಮ್ಮ ಮನೆಯೆಲ್ಲಿ?" ಎಂದು ಇಂದಿರಾ ಪ್ರಶ್ನಿಸಿದಳು. ಮಾತಿಲ್ಲದೆ ಕುಳಿತಿರಲು ಅವಳಿಂದಾಗದೆ. ಶಾಂತ ಮತ್ತೆ ಅವಳ ಕಡೆ ತಿರುಗಿ,

"ನನ್ನ ಮನೆ ಚಾಮರಾಜಪೇಟೆಯಲ್ಲಿ" ಎಂದು ಉತ್ತರ ಕೊಟ್ಟಳು. ಇಂದಿರೆಯ ಮನೆಯ ಬಗ್ಗೆ ಕುತೂಹಲ ಬಹಳ ಕೆರಳಿತ್ತು. ಈಗ ತಾನಾಗಿಯೆ ಮಾತನಾಡಿದುದರಿಂದ ಶಾಂತಳಿಗೆ ಮಾತನಾಡಲು ಅನುವಾದಂತಾಯಿತು. ಆದರೂ ಕೇಳಿದರೆ ಏನಾದರೂ ತಿಳಿದುಕೊಳ್ಳುವಳೊ ಎಂದೆನಿಸಿ ಸುಮ್ಮನಾದಳು. ಆದರೆ ಇಂದಿರೆಗೂ ಮಾತಿಲ್ಲದೆ ಬೇಸರವಾಗಿತ್ತಾದ್ದರಿಂದ ಮಾತನ್ನು ಮುಂದುವರಿಸಿದಳು.

"ನಿಮ್ಮ ತಂದೆಗೆ ಎಲ್ಲಿ ಕೆಲಸ?"

" ಲಾಯರು. ಅವರ ಹೆಸರು ನೀವು ಕೇಳಿರಬಹುದು, ರಾಮುಸ್ವಾಮಿ ಅಂತ " ಎಂದಳು ಶಾಂತ.

" ಈಗೇನು ತಂದೆಯ ಮನೆಗೆ ಹೋಗುತ್ತಿದೀರಾ? ನಿಮ್ಮ ಮಾವನ ಮನೆ?" ಅನುಮಾನದಿಂದ ಇಂದಿರಾ ಕೇಳಿದಳು.

ಶಾಂತಳಿಗೆ ಏನು ಉತ್ತರ ಕೊಡಬೇಕೊ ತೋಚದಾಯಿತು. ಒಂದು ಕ್ಷಣಕಾಲ ಮುಖ ಪೆಚ್ಚಾಯಿತು. ಆದರೆ ಉತ್ತರ ಕೊಡದಿದ್ದರೆ ವಿಧಿಯಿಲ್ಲ. ನಿಜವಾಗಿ ನಡೆದುದನ್ನು ಹೇಳಿ ಮಾವನ ಮನೆಯವರ ಮೇಲೆ ಅಪವಾದ ತರಲು ಇಷ್ಟವಿರಲಿಲ್ಲ. ಆದ್ದರಿಂದ ಹೇಗೊ ಕುಂಟು ನೆಪ ಹೇಳಬೇಕಾಗಿ ಬಂತು. ನಿಜ ಹೇಳಿದರೆ ತನಗೂ ಅವಮಾನವೆ!

" ಮೈಸೂರಲ್ಲಿದೆ. ಈಗ ಸುಮ್ಮನೆ ಊರಿಗೆ ಹೊರಟದೇನೆ " ಎಂದಳು ಕೊಂಚ ತಡವರಿಸಿ.

ಶಾಂತ ಉತ್ತರ ಕೊಟ್ಟ ರೀತಿಯಲ್ಲಿಯೆ ಒಡಕಿತ್ತೊ, ಅವಳ ಕಂದಿದ ಮುಖ ಕಂಡು ಊಹಿಸಿದಳೊ, ಅಂತೂ ಇಂದಿರೆಯ ಮನಸ್ಸು ಸುಮ್ಮನಾಗಲಿಲ್ಲ.

" ಯಾಕೆ, ಯಾರೂ ಜತೆ ಬರಲಿಲ್ಲವೆ?" ಎಂದಳು.

" ಉಹುಂ, ಏನೊ ಪುರಸತ್ತಾಗಲಿಲ್ಲ ಅವರಿಗೆ. ನನ್ನ ಮೈದುನನಿಗೆ ಕೆಲಸವಿತ್ತು. ಆದ್ದರಿಂದ ಒಬ್ಬಳೆ ಹೊರಟೆ. ಹಗಲು ಹೊತ್ತು, ಏನೂ ಪರವಾ ಇಲ್ಲ" ಎಂದು ಶಾಂತ ಸುಮ್ಮನೆ ಕುಳಿತುಬಿಟ್ಟಳು. ತಾನು ಹಾಗೆ ಈ ದಿನ ಜಗಳವಾಡದೆ ಹೋಗಿದ್ದರೆ ಸೀನು ತನ್ನನ್ನು ಬಿಡಲು ಖಂಡಿತ ಬರುತ್ತಿದ್ದನೆನಿಸಿತು.

ಇಂದಿರಾ ಮನಸ್ಸಿನಲ್ಲೆ ಅನುಮಾನ ಪಟ್ಟುಕೊಂಡಳು. ಶಾಂತಳ ಕಂದಿದ ಮುಖದ ಕಳೆಯೆ ಅವಳ ಬಾಯ ಮಾತನ್ನು ಸುಳ್ಳಾಗಿಸಿತ್ತು. ಇಂದಿರೆಯ ಮುಖದಲ್ಲಿ ಒಂದು ಬಗೆಯ ತಾತ್ಸಾರ ಕಂಡುಬಂತು. ಮಾತು ನಿಂತಿತು. ಬೆಂಗಳೂರು ಸ್ಟೇಷನ್ನಿನಲ್ಲಿ ಎಲ್ಲರೂ ಇಳಿದಾದಮೇಲೂ ಇಂದಿರೆಯ ಮೈದುನ ಸಾಮಾನಿಳಿಸಿಕೊಳ್ಳಲು ಬರಲೆ ಇಲ್ಲ. ಅಸಹಾಯಳಾಗಿ ಇಂದಿರಾ ಒದ್ದಾಡುತ್ತಿದ್ದುದನ್ನು ಕಂಡು ಶಾಂತ ತಾನೇ ಅವಳ ಸಾಮಾನುಗಳನ್ನು ರೈಲಿನಿಂದ ಇಳಿಸಿದಳು. ಅವನು ಬರುವನೊ ಇಲ್ಲವೊ ಎಂದು ಇಂದಿರಾ ಗಾಬರಿಯಲ್ಲಿರುವಾಗಲೆ ಆ ಮೂಲೆಯಿಂದ ಸಿಗರೇಟೆಳೆಯುತ್ತ ಅವನ ಸವಾರಿ ಬಂದಿತು.

'ಇನ್ನು ಏನಾದರೂ ಮಾಡಿಕೊಳ್ಳಲಿ' ಎಂದು ಶಾಂತ ತನ್ನ ಪಾಡಿಗೆ ತಾನು ಹೊರಟುಬಿಟ್ಟಳು.

೩

ಸೀನು ಮೇಜಿನ ಮೇಲೆ ತಲೆಯೊರಗಿಸಿ ಕೈಗಳಲ್ಲಿ ಮುಖ ಮುಚ್ಚಿಕೊಂಡು ಸಪ್ಪೆಯಾಗಿ ಕುಳಿತಿದ್ದ. ಅತ್ತಿಗೆ ಹೊರಟುಹೋದಳೆಂಬುದು ದೊಡ್ಡ ಪೆಟ್ಟು ತಾಗಿದಂತಾಗಿತ್ತು. ಒಂದು ಸಣ್ಣ ವಿಚಾರಕ್ಕೆ ಇಷ್ಟೊಂದು ರಾದ್ಧಾಂತವಾಗುತ್ತದೆಂದು ಅವನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಅತ್ತಿಗೆ ತನ್ನ ಮಾತಿಗೆ ರೇಗಿ ನಾಲ್ಕು ಮಾತಾಡಬಹುದೆಂದುಕೊಂಡಿದ್ದ. ಅದಂತೂ ಸಹಜ. ಆದರೆ ಮಾತು ಮೇರೆ ಮೀರಿ ಈ ರೀತಿ ಅನಾಹುತವಾದೀತೆಂದು ತನಗೆ ಹೇಗೆ ತಾನೆ ತಿಳಿಯಬೇಕು. ಹೀಗಾಗುತ್ತದೆಂದು ತನಗೆ ಮೊದಲು ತಿಳಿದಿದ್ದರೆ ಖಂಡಿತವಾಗಿಯೂ ಸೀನು ಹಾಗೆ ಆಡುತ್ತಲೆ ಇರಲಿಲ್ಲ. ಏನಾದರೂ ಮಾಡಿ ನಾಲಗೆ ಬಿಗಿಹಿಡಿಯುತ್ತಿದ್ದೆ ಎಂದುಕೊಂಡ. ಆದರೆ ಹಾಗೆ ನಾಲಗೆ ಬಿಗಿಹಿಡಿಯುವುದು ಕೂಡ ಕಷ್ಟವಾಗುತ್ತಿತ್ತು. ಆದರೂ ಅತ್ತಿಗೆಯನ್ನು ಇಲ್ಲಿಯೆ ಉಳಿಸಿಕೊಳ್ಳಲು ಎಂತಹ ಕಷ್ಟವನ್ನಾದರೂ ಸಹಿಸಬಹುದಾಗಿತ್ತು. ಆದರೆ ಈಗ ಅತ್ತಿಗೆ ಹೊರಟುಹೋದಳು. ಅತ್ತಿಗೆ ಕೋಪಗೊಂಡು, ತನ್ನ ಮೇಲಿನ ಕಿಚ್ಚಿನಲ್ಲಿ ಇನ್ನು ಮೇಲೆ ಈ ಮನೆಗೆ ಹಿಂದಿರುಗುವುದಿಲ್ಲವೆಂದು ಶಪಥ ಮಾಡಿ ಹೊರಟೇ ಹೋದಳು. ಎಲ್ಲವೂ ಈಗ ತನ್ನಿಂದ ತಾನೆ ಆದುದು? ತಾನು ಸಹನೆಗೆಟ್ಟು ಕೋಪದಿಂದ ಮಾತಾಡಿದುದರಿಂದ ಇಷ್ಟೆಲ್ಲ ಅನಾಹುತವಾಗಲು ಕಾರಣವಾಯಿತು. ಈ ಯೋಚನೆ ಬಂದಂತೆ ಸೀನುವಿಗೆ ತನ್ನ ಮೇಲೆ ತನಗೆ ಕೋಪ ಉಕ್ಕಿ ಏರಿತು. ತಾನೆಂತಹ ಪಾಪಿ! ಅಂತಹ ಪ್ರೀತಿಯ ಅತ್ತಿಗೆಯನ್ನು ಮನೆಯಿಂದ ಹೊರದೂಡಿದ ತಾನು ಬಹಳ ಕೇಡುಗ. ತನಗೆ ಈ ಪ್ರಪಂಚದಲ್ಲಿ ಎಂತಹ ನರಕಯಾತನೆ ಸಿಕ್ಕಿದರೂ ಪ್ರಾಯಶ್ಚಿತ್ತ ಸಾಲದೆನಿಸಿತು. ತಾನು ಬದುಕುವುದು ಕೂಡ ತಪ್ಪು—ಸಾವೊಂದೆ ಸರಿಯಾದುದು ಎಂದು ಕೂಡ ಆ ಕೋಪದ ಆವೇಶದಲ್ಲಿ ಅವನಿಗನಿಸಿತು. ಕಣ್ಣಿನಲ್ಲಿ ನೀರಿಳಿಯಿತು. 'ಅತ್ತಿಗೆ ಅತ್ತಿಗೆ' ಎಂದು ಮೂಲೆಯಲ್ಲಿ ಕುಳಿತು ಅಳುತ್ತಿದ್ದ ತಂಗಿ ವಸಂತುವಿನ ದನಿಯೂ ಒಳಗೆ ತಂಡೆಗೆ ಬಡಿಸುತ್ತ ತಾಯಿ ಗೊಣಗಿಕೊಳ್ಳುತ್ತಿದ್ದುದೂ ಕೇಳಿಸಿತು.

ತನ್ನ ಕೋಪ ಮಿತಿಮೀರಿತು. ತಾನು ಅತ್ತಿಗೆಯನ್ನು ಹಾಗೆ ಅಂದುದು ಬಹಳ ತಪ್ಪು. ಆದರೆ ತನಗೆ ಆ ಸಮಯದಲ್ಲಿ ಹಾಗೆನ್ನಿಸುವುದು ಸ್ವಾಭಾವಿಕವೆ ಅಲ್ಲವೆ? ಅದನ್ನು ಅತ್ತಿಗೆ ತಿಳಿದುಕೊಂಡು ಕೊಂಚ ತಾಳ್ಮೆ ತಂದು ನಡೆದಿದ್ದರೆ ಏನೂ ಆಗುತ್ತಿರಲಿಲ್ಲ. ತನಗೆ ಆ ಸಮಯದಲ್ಲಿ ಪ್ರಪಂಚ ವನ್ನೆ ನುಂಗಿಹಾಕುವಂತಹ ರೋಷ ಬಂದಿತ್ತು, ದುಃಖವೂ ಆಗಿತ್ತು. ನಾಲ್ಕು ತಿಂಗಳಿಂದ ಬೆಳಿಗ್ಗೆ ಸಂಜೆಯೆನ್ನದೆ ತಾನು ಆ ದಿನಕ್ಕಾಗಿ ಸಿದ್ಧವಾಗಿದ್ದುದು—ಕಾಲೇಜಿನ ಕ್ರಿಕೆಟ್ ಪಂಗಡದಲ್ಲಿ ತನಗೆ ಒಂದು ಜಾಗ ಸಿಕ್ಕಲು ಎಷ್ಟು ಕಷ್ಟ ಪಡಬೇಕಾಯಿತು. ಅದರಲ್ಲಿಯೂ ಈ ವರ್ಷದ ಟೀಮಿನಲ್ಲಿ ಎಂತಹ ಘಟಾನು ಘಟಿಗಳು. ಅವರೆಲ್ಲರ ಜತೆ ತನಗೂ ಒಳ್ಳೆಯ ಆಟಗಾರನೆಂಬ ಹೆಸರು ಸಿಕ್ಕಿ, ತನಗೂ ಈಗ ಅವರ ಜತೆ ಬೆಂಗಳೂರಿನಲ್ಲಿ ಆಟವಾಡಲು ಅವಕಾಶ ಸಿಕ್ಕಿದುದು ತನ್ನ ಅದೃಷ್ಟ. ನಾಲ್ಕು ತಿಂಗಳು ಅಭ್ಯಾಸ ಮಾಡಿದ್ದೂ ಮಾಡಿದ್ದೆ. ಕಾಲೇಜಿನ ಪಾಠಗಳಿಗೆ ಕೂಡ ತಾನು ಅಷ್ಟು ಗಮನ ಕೊಟ್ಟಿರಲಿಲ್ಲ. ಬೆಳಿಗ್ಗೆ ಎದ್ದು ಕಾಫಿ ಕುಡಿದು ಕ್ರಿಕೆಟ್ ಅಭ್ಯಾಸಕ್ಕೆ ಆಟದ ಬಯಲಿಗೆ (ಫೀಲ್ಡಿಗೆ) ಹೋದರೆ ಸ್ನಾನ ಊಟಕ್ಕೆ ಮನೆಗೆ ಬರುತ್ತಿದ್ದುದು. ಸಂಜೆ ಕಾಲೇಜಿನಿಂದ ಹಾಗೆಯೆ ಆಟಕ್ಕೆ ಇಳಿಯುತ್ತಿದ್ದ. ಆಟ ಮುಗಿಸಿ ಎಲ್ಲರೊಂದಿಗೆ ಆ ದಿನದ ಆಟದ ಬಗ್ಗೆ ಚರ್ಚೆ ನಡೆಸಿ, ಕಾಫಿ ಕುಡಿದು, ಮನೆಗೆ ಬರುವ ವೇಳೆಗೆ ರಾತ್ರಿ ಎಂಟು ಗಂಟೆಯಾದರೆ ಜೇಗ. ಒಂದೊಂದು ದಿನವಂತೂ ಪಾಚು, ಅಚ್ಯುತರಾವ್, ಶಂಕರ ಸಿಕ್ಕಿಬಿಟ್ಟರೆ ಆ ಯೂನಿಯನ್ ಪಕ್ಕದ ಕಲ್ಲುಕಟ್ಟೆಯ ಮೇಲೆ ಕೂತು ಚರ್ಚೆ ಪ್ರಾರಂಭವಾದರೆ ರಾತ್ರಿ ಒಂಬತ್ತಾದರೂ ಯಾರೂ ಏಳುತ್ತಿರಲಿಲ್ಲ. ಹಾಗೆ ಕುಳಿತಾಗ ಒಂದೊಂದು ದಿನವಂತೂ ಅವನಿಗೆ ಹೆದರಿಕೆ ಯಾಗುತ್ತಿತ್ತು: ಇಷ್ಟು ಹೊತ್ತು ಇಲ್ಲಿ ಕಳೆಯುತ್ತಿದ್ದರೆ ಪಾಠದ ಗತಿಯೇನು ಎಂದು. ಆದರೆ ಕ್ರಿಕೆಟ್ಟಿನ ಚರ್ಚೆಯಾಗುವಾಗ ಪಾಠದ ಯೋಚನೆ ಮರೆಯಾಗುತ್ತಿತ್ತು. ನಾಲ್ಕು ತಿಂಗಳು! ಆ ನಾಲ್ಕು ತಿಂಗಳು ತನ್ನ ಪರಿಶ್ರಮ ಎಂತಹದು! ತಾನು ಪಟ್ಟ ಕಷ್ಟ ಎಷ್ಟು! ಕೊನೆಗೂ ತನ್ನನ್ನು ಒಳ್ಳೆಯ ಆಟಗಾರನೆಂದು ಎಲ್ಲರೂ ಒಪ್ಪಿಕೊಳ್ಳುವಂತೆ, ತನ್ನನ್ನು ಈ ಬಾರಿಯ ಟೀಮಿಗೆ ಚುನಾಯಿಸುವಂತೆ ಮಾಡಲು ತಾನು ಮಾಡಿದ ಅಗಾಧ ಪ್ರಯತ್ನ ಸಾಮಾನ್ಯವಲ್ಲ. ಸೀನುವಿಗೆ, ಮನಸ್ಸಿನಲ್ಲಿ ಇದೆಲ್ಲ ನೆನಪಾಗಿ ಎಲ್ಲ

ಕಹಿಯಾಯಿತು. ಮೊದಲ ಬಾರಿ ಅವನು ಕ್ರಿಕೆಟ್ ಬಯಲಿನ ಕಡೆಗೆ ಹೋದಾಗ ಎದೆ ಧಡಕ್ಕೆಂದು ಹೊಡೆದುಕೊಳ್ಳುತ್ತಿತ್ತು. ದೂರದಲ್ಲಿಯೆ ನೋಡಿದಾಗ ನಾಲ್ಕೈದು ಜನ ದೊಡ್ಡವರು ಸಲೀಸಾಗಿ ಚೆಂಡನ್ನೆತ್ತಿ ಎಸೆದು ಒಬ್ಬರ ಕೈಯಿಂದೊಬ್ಬರ ಕೈಗೆ ಜೋರಾಗಿ ಒಗೆಯುತ್ತಿದ್ದರು. ಕ್ಯಾಚ್ ಹಿಡಿಯುವುದನ್ನು ಅಭ್ಯಾಸ ಮಾಡುತ್ತಿದ್ದರು. ದೂರದಿಂದಲೆ ಅವರನ್ನು ನೋಡಿದ ಸೀನು ಅವರ ವೈಖರಿ ಕಂಡು ಬೆರಗಾಗಿ ಬಾಯಿಬಿಟ್ಟ. ಇಂತಹ ಪರಿಣತರ ಮಧ್ಯೆ ತಾನು ಹೇಗೆ ಸೇರಲು ಸಾಧ್ಯವೆಂದು ನಿರಾಶೆಯೆ ಆಯಿತು. ಗಂಟಲಲ್ಲಿ ಉಗುಳು ಸಿಕ್ಕಿಕೊಂಡಂತಾಯಿತು. ಹಾಗೆಯೆ ಬಿಚ್ಚುಗಣ್ಣಿನಿಂದ ಆಸೆಯನ್ನು ಹೊರಕ್ಕೆ ಚೆಲ್ಲುತ್ತ ಅವರ ಅಂದಿನ ದಿನದ ಆಟವನ್ನು ನೋಡುತ್ತ ನಿಂತಿದ್ದ. ತಾನು ಬರುವೆನೆಂದು ಹೇಳಲು ಕೂಡ ಧೈರ್ಯವಿಲ್ಲದೆ ದೂರದಲ್ಲಿ ನಿಂತಿದ್ದು ಅರ್ಧಮುಕ್ಕಾಲು ಗಂಟೆಯಾದಮೇಲೆ ಮನೆಗೆ ಹಿಂದಿರುಗಿದ್ದ. ಆ ದಿನ ರಾತ್ರಿಯೆಲ್ಲ ಕಣ್ಣು ತೆರೆದೇ ಕನಸು : ತಾನು ನೂರಾರು ಕೈಗಳಲ್ಲಿ ನೂರಾರು ಚೆಂಡುಗಳನ್ನು ಎಸೆದು ಹಿಡಿದಂತೆ. ಮೂರು ನಾಲ್ಕು ದಿನ ಸುಮ್ಮನೆ ಸಂಜೆ ಆಯಿತೆಂದರೆ ಕ್ರಿಕೆಟ್ ಬಯಲಿಗೆ ಬಂದು ನಿಲ್ಲುವುದು, ಅಲ್ಲಿ ಬಯಕೆ ಗಣ್ಣುಗಳಿಂದ ಆಟ ನೋಡಿ ಮನೆಗೆ ಹಿಂದಿರುಗುವುದು. ಐದನೆಯ ದಿನವೊ ಏನೊ ಅಲ್ಲಿ ಅವನನ್ನು ಪಾಚು ಕಂಡುದು. ಕೈಯಲ್ಲೊಂದು ಛತ್ರಿಯನ್ನು ಹಿಡಿದು, ಪಂಚೆಯೊಂದನ್ನು ಸುತ್ತಿಕೊಂಡು, ಅದರ ಮೇಲೆ ಜೋಲಾಡುವಂತೆ ಬೆಲ್ಟನ್ನು ಕಟ್ಟಿ, ಷರಾಯಿಯೊಳಗೆ ಹಾಕಿಕೊಳ್ಳುವಂತೆ ಶರಟನ್ನು ಆ ಪಂಚೆಯೊಳಗೆ ಹಾಕಿಕೊಂಡು, ಮೇಲೊಂದು ಹಳೆಯ ಅಂಗಿ ತಗುಲಿ ಹಾಕಿಕೊಂಡು, ತಲೆಗೊಂದು ಕಪ್ಪುಟೋಪಿ ಅಂಟಿಸಿಕೊಂಡು, ಕ್ರಿಕೆಟ್ ಮೈದಾನಕ್ಕೆ ಬರುವ ಪಾಚು ಯಾರಿಗೆ ತಾನೆ ತಿಳಿಯದು? ಮಾತನಾಡುವಾಗಲಂತು ಎರಡು ಕೈಗಳನ್ನೂ ಅಲ್ಲಾಡಿಸುವುದು ಹೆಚ್ಚು. ಮುಖ ಉದ್ದುದ್ದ, ಅದರಲ್ಲಿ ಮೂಗಂತೂ ಮುಖ್ಯವಾಗಿ ಎದ್ದುನಿಂತಿತ್ತು. ದೊಡ್ಡ ಹಣೆ. ಮಾತು ಕೊಂಚ ತಡೆದು ತಡೆದು ಬರುತ್ತಿದ್ದರೂ ಕೇಳುವವರ ಮನಸ್ಸಿಗೆ ಆಕರ್ಷಣೆ ಇದ್ದೇ ಇತ್ತು. ಕಾರಣವೆಂದರೆ ಕ್ರಿಕೆಟ್ಟಿನಲ್ಲಿ ಆತನಿಗಿದ್ದ ಆಸಕ್ತಿ. ಪಾಚುವೇನೊ ಈಗ ಆಡುತ್ತಿರಲಿಲ್ಲ. ಹಿಂದೆ ಬಹಳ ಒಳ್ಳೆಯ ಬೌಲರ್, ಬ್ಯಾಟ್ಸ್‌ಮನ್ ಎರಡೂ ಆಗಿದ್ದರು. ಆದರೆ ಯಾವಾಗಲೊ ಅಪಘಾತವಾಗಿ ಬಲ ಮೊಳಕೈ

ಮೂಳೆ ಮುರಿದುಹೋಗಿತ್ತು. ಆಗಿನಿಂದ ಆಟವಾಡುವುದು ಅವರಿಂದಾಗುತ್ತಿರಲಿಲ್ಲ. ಆದರೆ ಹಾಡದಿದ್ದರೂ ಹಾಡಿನ ಮೇಲಿನ ಮೋಹದಂತೆ, ಕ್ರಿಕೆಟ್ಟಿನ ಮೇಲೆ ಆತನ ಪ್ರೇಮ. ಕಾಲೇಜಿನಲ್ಲಿ ಯಾವ ಹೊತ್ತಿನಲ್ಲಿ ಬೇಕಾದರೂ ಯಾರ ಹತ್ತಿರ ಬೇಕಾದರೂ ಛತ್ರಿಯನ್ನು ತಿರುಗಿಸುತ್ತ ಕ್ರಿಕೆಟ್ಟಿನ ಯಾವುದೊಂದು ವಿಷಯದ ಮೇಲಾದರೂ ಪಾಚು ಮಾತನಾಡಲು ಸಿದ್ಧ. ಕ್ರಿಕೆಟ್ ಎಂದರೆ ಅವರಿಗೆ ಪ್ರಾಣ. ಪಾಠ ಹೇಳುವಾಗಲೂ ಮನಸ್ಸಿನ ಹಿನ್ನೆಲೆಯಲ್ಲೆಲ್ಲ ಕ್ರಿಕೆಟ್ ಓಡಾಡುತ್ತಿತ್ತು. ಸೀನುವಿನ ಕ್ಲಾಸಿಗೆ ಪಾಚು ಒಂದೆರಡು ಬಾರಿ ಹೋಗಿದ್ದುದುಂಟು. ಹೇಗೋ ಸೀನುವಿನ ಮುಖ ಅವರಿಗೆ ನೆನಪಾಯಿತು. ಕ್ರಿಕೆಟ್ ಮೈದಾನದಲ್ಲಿ ಅವನನ್ನು ಎರಡು ಮೂರು ಬಾರಿ ನೋಡಿದಮೇಲೆ ಸೀನುವಿನ ಮೇಲೆ ಪಾಚುವಿನ ದೃಷ್ಟಿ ಬಿದ್ದುದು. ಯಾರಲ್ಲೂ ಆತ್ಮೀಯತೆಯನ್ನು ತಂದುಕೊಳ್ಳುವಂತಹ ನಗೆಸ್ವಭಾವ ಪಾಚುವಿನದು. ಆದ್ದರಿಂದ ಎಲ್ಲರನ್ನೂ ಏಕವಚನದಲ್ಲಿಯೆ ಮಾತನಾಡಿಸುವುದು ಅವರ ಸ್ವಭಾವ. ಯಾರೂ ಅದನ್ನು ಅಪಾರ್ಥ ಮಾಡಿಕೊಳ್ಳುತ್ತಿರಲಿಲ್ಲ. ಅಲ್ಲದೆ ಎಲ್ಲರೂ ಅವರನ್ನು ಏಕವಚನದಲ್ಲೆ ಮಾತನಾಡಿಸುತ್ತಿದ್ದರು—ಅಂದರೆ ಎದುರಿಗಲ್ಲದಿದ್ದರೂ ಹಿಂದೆ. ಗೌರವಕ್ಕಿಂತಲೂ ಪ್ರೀತಿವಿಶ್ವಾಸವನ್ನೆ ಹೆಚ್ಚು ಬಯಸಿ, ಪಡೆದಿದ್ದ ಪಾಚು. ಪೂರ್ತಿ ಹೆಸರು ಪಾರ್ಥಸಾರಥಿಯೆಂದು ಗೊತ್ತಿದ್ದುದು ಅವರಿಗೆ, ಕಾಲೇಜಿನಲ್ಲಿ ಸಂಬಳ ಕೊಡುವ ಅಕೌಂಟೆಂಟಿಗೆ. ಉಳಿದವರಿಗೆಲ್ಲ ಅವರು ಪಾಚು. ಅವರ ಬಗ್ಗೆ ಕೊಂಚ ಉಡಾಯಿಸಿ ಮಾತನಾಡುವವರಿಗೂ ಕೂಡ ಅವರಲ್ಲಿ ಪ್ರೀತಿಯಿತ್ತು. ಯಾವ ಕ್ರಿಕೆಟ್ ಪಂದ್ಯ ಕೂಡ ಅವರಿಗೆ ತಿಳಿಯದೆ ಆಗುತ್ತಿರಲಿಲ್ಲ. ಸೀನುವಿನ ಮೇಲೆ ಪಾಚುವಿನ ದೃಷ್ಟಿ ಬಿದ್ದಾಗಲೆ ಸೀನುವಿಗೆ ಕ್ರಿಕೆಟ್ ಮೈದಾನದ ಅನುಭವವಾಯಿತು.

"ಬಾರೊ ಇಲ್ಲಿ. ನೀನು ಇಂಟರ್ಮೀಡಿಯೆಟ್ ?"

"ಅಲ್ಲ ಸಾರ್, ಜ್ಯೂನಿಯರ್ ಬಿ.ಎ."

"ಹೂಂ—ಹೌದು, ಹೌದು—ಈಗ ಜ್ಞಾಪಕವಾಯ್ತು. ಶ್ರೀನಿವಾಸನ್ ಅಂತ ನಿನ್ನ ಹೆಸರು. ನಿನಗೆ ಕ್ರಿಕೆಟ್ಟಿನಲ್ಲಿ ಆಸಕ್ತಿ (Interest) ಬಹಳ ಅಂತ ಕಾಣುತ್ತೆ."

"ಹೌದು ಸಾರ್. ನನಗೂ ಇಲ್ಲಿ ಟೀಮಿ(Team)ಗೆ ಸೇರಿಕೊಳ್ಳುವ

ಆಸೆ" ಎಂದ ಸೀನು.

"ಸರಿ, ಬಾ" ಎಂದು ಪಾಚು ಅವನನ್ನು ಕರೆದುಕೊಂಡುಹೋಗಿದ್ದರು. ಜಯರಾಂ, ನಾರಾಯಣಸ್ವಾಮಿ, ವೈ. ಎಸ್. ರಾಮುಸ್ವಾಮಿ ಅವರೆಲ್ಲ ಈ ಹೊಸಬನನ್ನು ಸ್ವಾಗತಿಸಿದರು. ಆದರೆ ಹಳೆಯ ಹುಲಿಗಳು ಅವರು. ಅವರ ಕೈಯಲ್ಲಿ ಬ್ಯಾಟು, ಬಾಲುಗಳು ಯಾವಾಗಲೂ ಇರುತ್ತಿದ್ದವು. ಬೌಲಿಂಗಾಗಲಿ ಬ್ಯಾಟಿಂಗಾಗಲಿ ಉಳಿದವರಿಗೆ ಸಿಕ್ಕುವುದು ಬಹಳ ಕಷ್ಟವಾಗಿತ್ತು. ಸೀನು ಕೂಡ ಹದಿನೈದು ದಿನ ಕಾದು ನೋಡಿದ. ಬರಿಯ ಫೀಲ್ಡಿಂಗೆ ಅವನ ಪಾಲಿಗೆ. ಎಷ್ಟು ಬೇಗ ಬರಲಿ, ಬೇರೆ ಯಾವುದೂ ಇಲ್ಲ. ಅವನಿಗೂ ಬಹಳ ಬೇಜಾರಾಗಲು ಆರಂಭವಾಯಿತು. ಪಾ ಚು ವೆ ಅವನಿಗೆ ಬುದ್ಧಿವಾದ ಹೇಳಿದ್ದರು: ಇದರಲ್ಲಿ ಬಹಳ ಸಹನೆಯಿರಬೇಕು. ಚೆನ್ನಾಗಿ ತರಬೇತಾಗ ಬೇಕಾದರೆ ಎಲ್ಲ ರೀತಿಯದನ್ನೂ ಚೆನ್ನಾಗಿ ಕಲಿಯಬೇಕು. ಫೀಲ್ಡಿಂಗ್ ಮಾಡುವುದು ಬಹಳ ಕಷ್ಟ. ಅದನ್ನು ಅಲ್ಲಗಳೆಯಬಾರದು. ಬರಿಯ ಇಷ್ಟೇನೆ ಎಂದು ಉಡಾಫೆ ಮಾಡಬಾರದೆಂದು ಮೊವಲೆ ಬುದ್ಧಿ ಹೇಳಿದ್ದರು. ಆದರೂ ಸೀನುವಿಗೆ ಆಡುವ ಹುಮ್ಮಸ್ಸು. ಆ ಹುಮ್ಮಸ್ಸಿನಲ್ಲಿ ಈ ವಿವೇಕದ ಮಾತು ಗಾಳಿಯಲ್ಲಿ ಹಾರುವ ದಾರ ಕಿತ್ತ ಪಟದಂತಾಗಿತ್ತು. ನಾರಾಯಣಸ್ವಾಮಿಯ ಹತ್ತಿರ ಒಂದು ದಿನ ಹೇಳಿಕೊಂಡ: ಬರಿಯ ಫೀಲ್ಡಿಂಗ್ ಮಾಡಿ ಬೇಜಾ ರಾಗಿದೆ. ಒಂದಿಷ್ಟು ಬೌಲಿಂಗ್, ಬ್ಯಾಟಿಂಗ್ ಕೊಡಿ ಅಂತ. ಅವರು ನಿಧಾನ ವಾಗಿ ಅವನ ಕಡೆ ದಿಟ್ಟಿಸಿ 'ನಾವೆಲ್ಲ ವರ್ಷಗಟ್ಟಲೆ ಫೀಲ್ಡ್ ಹೊರಗೆ ನಿಂತು, ಆಮೇಲೆ ಫೀಲ್ಡಿಂಗಿನಲ್ಲಿ ಒಂದೆರಡು ವರ್ಷ ಕಳೆದೆವು. ಬ್ಯಾಟ್ ಮುಟ್ಟುವು ದಿರಲಿ, ನೋಡಲು ಕೂಡ ನಮ್ಮನ್ನು ಬಿಡುತ್ತಿರಲಿಲ್ಲ. ಇನ್ನೂ ಹದಿನೈದು ದಿನಕ್ಕೆ ನಿನಗೆ ಬೇಜಾರಾಯಿತೆ?' ಎಂದಿದ್ದರು. ಹಾಗೆ ಬಾಯಲ್ಲಂದರೂ ಅವನ ಕೈಗೊಂದು ಚೆಂಡನ್ನು ಕೊಟ್ಟರು. ಎರಡು ಹೊಸ ಚೆಂಡು, ಇದು ಮೂರನೆಯದು, ಹಳೆಯದು. ಹೊಸದಾಗಿ ಬೌಲಿಂಗ್ ಕಲಿಯುವವನಿಗೆ ಸರಿಯಾದುದು ಹಳೆಯ ಚೆಂಡೇನೆ ಎಂದು ಹೇಳಿ ಕೊಟ್ಟಿದ್ದರು. ತನಗೆ ಬೌಲಿಂಗ್ ಬರುವುದಿಲ್ಲವೆಂದು ಅವರು ತಪ್ಪು ತಿಳಿದುದು ಸೀನುವಿಗೆ ತಿಳಿಯಿತು. ಆದರೆ ತಾನು ಆಟವಾಡುವುದನ್ನು ಬಿಟ್ಟು ಎರಡು ವರ್ಷವಾಗಿತ್ತು. ಹೈಸ್ಕೂಲಿ ನಲ್ಲಿದ್ದಾಗ ಆಡುತ್ತಿದ್ದುದುಂಟು, ಆದರೆ ಇಂಟರ್ಮೀಡಿಯೆಟ್‌ಗೆ ಬಂದಾಗ

ಕೆಲವು ಕಾರಣಗಳಿಂದ ಆಟವನ್ನು ಬಿಟ್ಟುಕೊಡಬೇಕಾಗಿತ್ತು. ಆದರೆ ಈಗ ಮತ್ತೆ ಅವಕಾಶವಾಗಿತ್ತು. ಹೇಗೊ ಆಟವನ್ನು ಉತ್ತಮಗೊಳಿಸಿಕೊಂಡರೆ ಹೆಸರು ಮಾಡಿಕೊಳ್ಳಬಹುದೆಂದುಕೊಂಡ. ಅವನ ಅದೃಷ್ಟ ಚೆನ್ನಾಗಿತ್ತು. ಮೊದಲೆರಡು ಬಾಲುಗಳು ಬಹಳ ಆಚೆ ಈಚೆ ಬೀಳಲಿಲ್ಲ. ಆದರೆ ಎಲ್ಲರೂ ಹಾಸ್ಯಮಾಡಿದರು. ಮೂರನೆಯ ಬಾಲು ಸರಿಯಾಗಿ ಬಿದ್ದು ಆಟವಾಡು ತ್ತಿದ್ದವನನ್ನು ತಬ್ಬಿಬ್ಬಾಗಿಸಿತು. 'ಪರವಾಗಿಲ್ಲ ಕಣೊ. ಲೆಂಗ್ತ್ (Length—ಸರಿಯಾದ ಎಸೆತದ ಅಳತೆ) ಸಿಕ್ಕಿದೆ ಅವನಿಗೆ' ಎಂದು ಪಾಚು ನಾರಾಯಣ ಸ್ವಾಮಿಗೆ ಹೇಳಿದರು. ನಾಲ್ಕೈದು ಬಾಲಿನ ಅನಂತರ, ಐದು ನಿಮಿಷದಲ್ಲೆ ಸೀನು ವೈ. ಎಸ್. ರಾಮುಸ್ವಾಮಿಯನ್ನು ಸೋಲಿಸಿಯೆ ಬಿಟ್ಟ. ಮಧ್ಯದ ವಿಕೆಟ್ಟೆ ಹಾರಿಬಿತ್ತು. ಎಲ್ಲೋ ಅಕಸ್ಮಾತ್ ಈ ಸಾರಿ ಹೀಗಾಯಿತೆಂದರೆ, ಮತ್ತೆ ಅದೇ ರೀತಿಯ ತಿರುಪು ಹಾಕಿ ಮತ್ತೆ ವಿಕೆಟ್ ಬೀಳಿಸಿದ. ಮಾರನೆಯ ದಿನದಿಂದ ಸೀನುವಿಗೆ ಹೊಸ ಚೆಂಡು ಸಿಕ್ಕುತ್ತಿತ್ತು. ದಿನವೂ ಎರಡೆರಡು ಗಂಟೆಯ ಕಾಲ ಪ್ರಾಕ್ಟೀಸ್ (ಅಭ್ಯಾಸ) ಆಗುತ್ತಿತ್ತು. ಹೆಚ್ಚು ಕಾಲ ಫೀಲ್ಡಿಂಗಿನಲ್ಲಿಯೆ ಕಳೆಯುತ್ತಿತ್ತು. ಬೌಲಿಂಗ್ ಕೂಡ ದಿನಗಳೆದಂತೆ ಚೆನ್ನಾಗುತ್ತಿತ್ತು. ಈ ಬಾರಿ ಯಾವುದಾದರೂ ಪಂದ್ಯವಾದರೆ ಅವನಿಗೆ ಅದರಲ್ಲಿ ಅವರ ಟೀಮಿನಲ್ಲಿ ಒಂದು ಸ್ಥಾನ ಸಿಕ್ಕಬಹುದೆಂದು ಅನ್ನಿಸಿತು. ಬರಿಯ ಬೌಲಿಂಗ್ ಸಾಲದು, ಆಟವಾಡುವುದೂ ಅಭ್ಯಾಸವಾಗಬೇಕೆಂದು ನಾರಾಯಣಸ್ವಾಮಿ ಅವನಿಗೆ ಬ್ಯಾಟಿಂಗ್ ಕೂಡ ಕೊಟ್ಟಿದ್ದರು. ಮೊದಮೊದಲು ಸೀನು ಗಾಬರಿಗೊಂಡರೂ ನಿಧಾನವಾಗಿ ಮೆಲ್ಲನೆ ಕಲಿತ. ಉತ್ತಮ ಆಟಗಾರನೆನಿಸಿಕೊಂಡ. ಆದರೆ ಅವನ ಸ್ವಭಾವ ಬೇಗನೆ ಉದ್ವೇಗಗೊಳ್ಳುವುದು. ಆದ್ದರಿಂದ ಆಟವಾಡುವಾಗ ಯಾರಾದರೂ ಕೊಂಚ ವ್ಯಂಗ್ಯವಾಗಲಿ, ಏಕೋಕ್ತಿಯಾಗಲಿ ಅಂದುಬಿಟ್ಟರೆ ಸೀನುವಿನ ವಿಕೆಟ್ಟು ತಕ್ಷಣವೆ ಬೀಳುತ್ತಿತ್ತು. ಕೆಲವು ವೇಳೆ ಈ ವ್ಯಂಗ್ಯದಿಂದ ಅವನ ಮನಸ್ಸು ಹಟಗೊಳ್ಳುತ್ತಿತ್ತು. ಆಗ ಏನಾದರೂ ಅವನನ್ನು ಅಲುಗಾಡಿಸಲಾಗುತ್ತಿರಲಿಲ್ಲ. ಮೆಡಿಕಲ್ ಕಾಲೇಜಿನ ಮೇಲೆ ಆಡಿದ ಪಂದ್ಯದಲ್ಲಿ ಹಾಗೆಯೆ ಆಯಿತು. ಅದೇ ಅವನು ಆಡಿದ ಮೊದಲನೆಯ ಪಂದ್ಯ. ಆಟವಾಡುವಾಗ ನಾಲ್ಕೈದು ವಿಕೆಟ್ಟುಗಳು ಬಹಳ ಬೇಗನೆ ಬಿದ್ದವು. ಆಗ ಮೆಡಿಕಲ್ ಕಾಲೇಜ್ ಹುಡುಗರು ಇವರನ್ನೆಲ್ಲ 'ಹೆಣ್ಣಿಗರು' (ಹೆಣ್ಣಿಕ್ಸ್) ಎಂದು ಹಾಸ್ಯ

ಮಾಡಿದರು. ಆಗ ವೈ. ಎಸ್. ಜತೆಗೆ ಸೀನು ನಿಂತು ಪಟ್ಟಾಗಿ ಹೊಡೆದಿದ್ದ. ಅವನ ಆ ದಿನದ ಆಟ ಕಂಡು ಎಲ್ಲರೂ ಬೆರಗಾದರು. ಪಾಚುವಿನ ಕೂಡ ಇವನು ಹೀಗೆ ಹೊಡೆಯುತ್ತಾನೆಂದು ನಂಬಿಕೆಯಿರಲಿಲ್ಲ. ಆದರೆ ಮಧ್ಯಾಹ್ನದ ಟೀ ಆದನಂತರ ತಮಾಷೆಗೆ ಯಾರೊ ಕೂಗಿದುದಕ್ಕೆ ಸೀನು ತಬ್ಬಿಬ್ಬಾದ. ಮುಂದಿನ ಬಾಲಿಗೆ ಕ್ಯಾಚ್ ಕೊಟ್ಟುಬಂದ. ಆದರೆ ಆ ದಿನದಿಂದ ಕ್ರಿಕೆಟ್‌ನಲ್ಲಿ —ತನ್ನ ಟೀಮಿನಲ್ಲಿ ತನಗೊಂದು ಸ್ಥಾನ ಮೀಸಲಾಗಿತ್ತೆಂಬುದು ಸೀನುವಿಗೆ ಗೊತ್ತು. ಮಾರನೆಯ ದಿನ ಬೌಲಿಂಗ್ ಸರದಿ ಬಂದಾಗಲಂತೂ ಸೀನುವಿನ ಜಾಗ ಭದ್ರವಾಯಿತು. ವೇಗವಾಗಿ ಗ್ಲೂ ಬೌಲ್ ಮಾಡುತ್ತಿದ್ದ ಮೀಡಿಯಂ ಬೌಲರ್ (Medium Bowler) ವೈ. ಎಸ್.ಗಾಗಲಿ ನಿಧಾನವಾಗಿ ಎಸೆಯುತ್ತಿದ್ದ ಗ್ಲೋ ಬೌಲರ್ ಜಯರಾಮುನಿಗಾಗಲಿ ಜಗ್ಗದವರು ಸೀನುವಿನ ಬಾಲುಗಳಿಗೆ ಆಹುತಿಯಾದರು. ಅಂತೂ ಅವನಿಗೆ ಜಾಗ ಖಂಡಿತವಾಯಿತು. ಆದರೆ ಆ ಸ್ಥಾನವನ್ನು ಅವನು ಉಳಿಸಿಕೊಳ್ಳಲು ಬಹಳ ಕಷ್ಟಪಡಬೇಕಾಯಿತು. ಅದಾದ ಎರಡು ಮೂರು ಪಂದ್ಯಗಳಲ್ಲಿ ಅವನ ಬೌಲಿಂಗ್ ಸಾರ್ಥಕವಾಗಲಿಲ್ಲ. ಆಟ ಕೂಡ ಅಷ್ಟಕ್ಕಷ್ಟೆ ಆಯಿತು. ಆದರೆ ಅವನು ತನ್ನ ಆಟದಲ್ಲಿ ನಂಬಿಕೆ ಇಟ್ಟು ಆಡುತ್ತಿದ್ದ. ಪಾಚುವೂ ಕೂಡ ಅವನಲ್ಲಿ ನಂಬಿಕೆ ಕಳೆದುಕೊಳ್ಳಲಿಲ್ಲ. ಮತ್ತೆ ಅವನು ಚೆನ್ನಾಗಿ ಆಡಲು ಪ್ರಾರಂಭಿಸಿದ. ಈಗ 'ಎಂ. ಜಿ. ಶ್ರೀನಿವಾಸರಾಯರ ಸ್ಮಾರಕ ಪಂದ್ಯ'ಕ್ಕೆ ಅವನ ಟೀಮಿನವರು ಹೊರಟಿದ್ದರು. ಅವನನ್ನೂ ಸೇರಿಸಿಕೊಂಡಿದ್ದರು.

ತನ್ನನ್ನು ಈ ಪಂದ್ಯಕ್ಕೆ ಆಡಿಸುವರೆಂದು ತಿಳಿದಾಗಿನಿಂದ ಸೀನುವಿನ ಆನಂದ ಹೇಳತೀರದು. ಮನೆಗೆ ಬಂದು ಮೊದಲು ಅದನ್ನು ಅತ್ತಿಗೆಗೆ ಹೇಳಿಕೊಂಡಿದ್ದ. ಅತ್ತಿಗೆಯೂ ಬಹಳ ಸಂತೋಷಪಟ್ಟಿದ್ದಳು. ಹಗಲು ರಾತ್ರಿಯೂ ಅವನಿಗೆ ಈ ಪಂದ್ಯದ ಯೋಚನೆಯೆ. ಹೇಗಾದರೂ ಸರಿ, ಚೆನ್ನಾಗಿ ಆಡಿ ಹೆಸರು ಗಳಿಸಬೇಕೆಂದಷ್ಟೆ ಅವನ ಕನಸು. ಬೆಳಿಗ್ಗೆ ಸಂಜೆ ಎರಡು ಹೊತ್ತೂ ಅಭ್ಯಾಸಕ್ಕೆ ಹೋಗುತ್ತಿದ್ದ. ಮನೆಗೆ ಬಂದರೆ ಊಟ ಮಾಡುವಾಗ ಕೂಡ ಅದೆ ಮಾತು. ಪುಸ್ತಕ ಹಿಡಿಯುವುದಂತೂ ಸಾಧ್ಯವೆ ಆಗುತ್ತಿರಲಿಲ್ಲ. ಯಾವಾಗ ನೋಡಿದರೂ ಆ ಕ್ರಿಕೆಟ್ಟಿನ ಮಾತೇ ಆಡುತ್ತಿದ್ದ. ಗಂಗಮ್ಮನವರು ಒಂದು ದಿನ 'ಯಾವಾಗ ನೊಡಿದರೂ ಆ ಕ್ರಿಕೆಟ್ಟು ಕ್ರಿಕೆಟ್ಟೂಂತ ವಟಗುಟ್ಟುತಾ

ಇರತೀಯ. ಬೇರೇನೂ ಕೆಲಸವೆ ಇಲ್ಲವೆ?' ಎಂದು ಗದರಿಕೊಂಡಿದ್ದರು. ಆಗ ಅತ್ತಿಗೆ ಸೀನುವಿನ ಪರವಾಗಿ ಮಾತನಾಡಿದ್ದಳು: 'ಇರಲಿ ಬಿಡಿ, ಅತ್ತೆ. ಆಟವಾಡಬೇಡವೆ. ಅಲ್ಲದೆ ಉಳಿದಿದ್ದರಲ್ಲಿ ಹೇಗೆ ಕೀರ್ತಿ ಸಂಪಾದಿಸ ಬಹುದೊ ಇವರಲ್ಲೂ ಹಾಗೆಯೆ. ನಮ್ಮ ಸೀನು ಒಳ್ಳೆಯ ಆಟಗಾರ, ಅತ್ತೆ. ದೊಡ್ಡ ಆಟಗಾರನಾಗತಾನೆ. ನೀವೇ ನೋಡುತ್ತಾ ಇರಿ' ಎಂದಳು. ಸೀನು ವಿನ ಆಟಗಾರಿಕೆಯ ಬಗ್ಗೆ ಶಾಂತಳಿಗೆ ಬಹಳ ಅಭಿಮಾನವಿತ್ತು. ವಸಂತು ಹೇಗೆ ತನ್ನ ಪಾಠದ ಬಗ್ಗೆ, ಶಾಲೆಯ ಬಗ್ಗೆ, ಚಾಚೂ ತಪ್ಪದೆ ಅತ್ತಿಗೆಗೆ ವರದಿ ಒಪ್ಪಿಸುತ್ತಿದ್ದಳೊ, ಸೀನು ಕೂಡ ತನ್ನ ಕ್ರಿಕೆಟ್ ಆಟದ ಬಗ್ಗೆ ಅತ್ತಿಗೆಗೆ ವರದಿಯೊಪ್ಪಿಸುತ್ತಿದ್ದ. ಅವಳಿಂದ ಉತ್ತೇಜನ ಪಡೆಯುತ್ತಿದ್ದ.

ಸೀನು ಹಿಂದಿನ ದಿನ ಬಟ್ಟೆಗಳನ್ನೆಲ್ಲ ಒಗೆದುಹಾಕಿದ್ದ. ಬಿಳಿ ಷರಾಯಿ, ಬಿಳಿ ಷರಟುಗಳನ್ನು ಒಣಗಿಸಿದ್ದವನು ಇಸ್ತ್ರಿ ಮಾಡಬೇಕೆಂದುಕೊಂಡ— ಮರುದಿನ ಕ್ರಿಕೆಟ್ ಮ್ಯಾಚಿದೆ. ಬೆಂಗಳೂರಿಗೆ ಬೆಳಿಗ್ಗೆ ಹೊರಟು ಮಧ್ಯಾಹ್ನ ಹನ್ನೆರಡಕ್ಕೆ ಆಡಬೇಕು ಎಂಬುದನ್ನು ನೆನೆದಾಗಲೆಲ್ಲ ಅವನ ಮೈ ಜುಮ್ಮೆನ್ನು ತ್ತಿತ್ತು. ಅವನ ಜತೆಯವರೆಲ್ಲ ಆ ದಿನ ಮಧ್ಯಾಹ್ನ ಹೊರಟುಹೋಗಿದ್ದರು. ಆದರೆ ಅವನಿಗೆ ಹೊರಡಲು ಆಗಿರಲಿಲ್ಲ. ಮರುದಿನ ರೈಲು ಹೇಗಿದ್ದರೂ ಹತ್ತೂ ಕಾಲು ಗಂಟೆಗೆ ಸೇರುತ್ತೆ. ಅಂದಮೇಲೆ ಬೇಕಾದಷ್ಟು ವೇಳೆ ಇರುತ್ತದೆಂದು ಜತೆಗಾರರಿಗೆ ಸಮಾಧಾನ ಹೇಳಿದ್ದ. ತನ್ನ ಬಟ್ಟೆಗಳನ್ನು ಇಸ್ತ್ರಿ ಮಾಡಿ ತೆಗೆದಿಟ್ಟುಕೊಳ್ಳಬೇಕಾಗಿತ್ತು. ಆದರೆ ಅತ್ತಿಗೆ ತಾನಾಗಿಯೆ ಬಂದು ಅವುಗಳ ನ್ನೆಲ್ಲ ಇಸ್ತ್ರಿ ಮಾಡಿಟ್ಟಳು. ಅವನು ಬೇಡಬೇಡವೆಂದರೂ ಇಸ್ತ್ರಿಪೆಟ್ಟಿಗೆಯನ್ನು ಕಿತ್ತುಕೊಂಡು ಅವನ ಕ್ರಿಕೆಟ್ ಉಡುಪನ್ನು ಸೊಗಸಾಗಿ ಇಸ್ತ್ರಿಮಾಡಿ ಮಡಿ ಸಿಟ್ಟಳು. ಅವುಗಳೆಲ್ಲವನ್ನೂ, ತನಗೆ ಬೇಕಾದ ಬೇರೆ ಬಟ್ಟೆಗಳನ್ನೂ ಪೆಟ್ಟಿಗೆ ಯೊಳಗೆ ಹಾಕಿ ಸೀನು ಬೀಗ ಹಾಕಿದ. ಸಾಮಾನ್ಯವಾಗಿ ತನ್ನ ಪೆಟ್ಟಿಗೆಯ ಬೀಗದಕೈಯನ್ನು ಅತ್ತಿಗೆಯ ಹತ್ತಿರವೆ ಕೊಡುತ್ತಿದ್ದ. ಬೀಗ ಹಾಕುತ್ತಿದ್ದುದೆ ಅಪರೂಪ. ಆದರೆ ಈಗ ಬೀಗ ಹಾಕಿ ಅತ್ತಿಗೆಯ ಕೈಲಿ ಬೀಗದಕೈ ಕೊಟ್ಟ. ಬೆಳಿಗ್ಗೆ ಬೇಗ ಎಬ್ಬಿಸಬೇಕು, ಕಾಫಿ ಮಾಡಿಕೊಡಬೇಕೆಂದು ಅತ್ತಿಗೆಗೆ ಮತ್ತೆ ಮತ್ತೆ ಹೇಳಿದ. ಅತ್ತಿಗೆ ನಗುತ್ತ 'ಆಗಲಿ ಕಣಪ್ಪ, ಮಹಾರಾಯ, ರಾತ್ರಿ ಸ್ವಲ್ಪ ಜತವಾಗಿ ನಿದ್ರೆ ಮಾಡು, ಜಾಗರಣೆ ಮಾಡಬೇಡ, ಕ್ರಿಕೆಟ್ ಧ್ಯಾನ

ಮಾಡುತ್ತ' ಎಂದು ಹಾಸ್ಯ ಮಾಡಿದ್ದಳು. ರಾತ್ರಿ ಮಲಗುವಾಗಲೆಲ್ಲ ಸೀನುವಿಗೆ ತನ್ನ ಮರುದಿನದ ಆಟದ ಯೋಚನೆ. ಕಣ್ಣು ಮುಚ್ಚಿದರೆ ನಿದ್ರೆಗೆ ಬದಲು ನಾಳಿನ ಆಟದ ಪೂರ್ವಚಿತ್ರ ಕಣ್ಣಮುಂದೆ ಕುಣಿಯುತ್ತಿತ್ತು. ತನಗೆ ಎಂತಹ ಸುಯೋಗ ಸಿಕ್ಕಿದೆ, ತಾನು ಹೇಗೆ ಆಡುತ್ತೇನೆ, ಹಾಗೆ ಬೌಲ್ ಮಾಡುತ್ತೇನೆ ಎಂಬ ಕಲ್ಪನೆಯಲ್ಲಿ ನಿದ್ರೆ ಬರುವುದೆ ಬಹಳ ಕಷ್ಟವಾಯಿತು. ದೀಪ ಆರಿಸಿದ ಕೋಣೆಯ ಕಗ್ಗತ್ತಲಲ್ಲಿ ಕ್ರಿಕೆಟ್ ಆಟದ ದೃಶ್ಯಗಳು ಕೋಟಿ ಕಾಮನಬಿಲ್ಲಿನ ಬಣ್ಣಗಳನ್ನು ತಳೆದು ಪ್ರತ್ಯಕ್ಷವಾದವು. ಅವುಗಳನ್ನು ಕಾಣುತ್ತ ಹಾಸಿಗೆಯ ಮೇಲೆ ಹಾಗಿಂದ ಹೀಗೆ ಹೊರಳಾಡಿದ. ನಗೆ ತುಟಿಯ ಮೇಲೆ ಅನ್ಮೃತವಾಗಿ ಇಳಿಯಿತು. ಸೋಲಿನ ಚಿಂತೆ ಬಂದಾಗ ಮೇಲಿನ ತುಟಿ ಭರಣಿಯ ಮುಚ್ಚಳದಂತೆ ಕೆಳತುಟಿಯನ್ನು ಅದುಮಿತು. ಉದ್ರೇಕ ಮಿತಿಮಿಾರಿದಾಗ ಕಾಲುಗಳನ್ನು ಹೀಗೂ ಹಾಗೂ ಜಾಡಿಸಿದ. ಮೈ ಬೆವರಿತು. ಮೇಲೆ ಹಾಕಿಕೊಂಡಿದ್ದ ಹೊದಿಕೆಯಂತೂ ಒದೆತಕ್ಕೆ ಸಿಕ್ಕಿ ಹಾಸಿಗೆಯಿಂದ ದೂರ ಎಲ್ಲಿಯೊ ಮುದುರಿ ಬಿದ್ದಿತ್ತು. ನಿದ್ರೆ ಬಂದಂತಾದರೂ ತಲೆಯ ಕಾವಿನಲ್ಲಿ ಕರಗಿಹೋಗುತ್ತಿತ್ತು. ಹೀಗಾಗಿ ರಾತ್ರಿಯೆಲ್ಲ ನಿದ್ರೆ ಮಾಡ ಬೇಕೆನ್ನುವ ಆಸೆಯಲ್ಲಿಯೆ, ಕ್ರಿಕೆಟ್ ಆಟದ ಕಲ್ಪನೆಯಲ್ಲಿಯೆ ಕಳೆಯಿತು. ಕಣ್ಣು ಕೆಂಪಾಗಿ ಉರಿಹತ್ತಿದಾಗ ಇನ್ನು ನಿದ್ರೆ ಮಾಡಬೇಕೆಂದುಕೊಂಡು ಹೊದಿಕೆ ಹುಡುಕಿ ಎಳೆದು ಹೊದ್ದುಕೊಂಡ. ಆದರೆ ಮನಸ್ಸು ಚಂಚಲಗೊಂಡು ಮತ್ತೆ ಕಲ್ಪನೆಯ ತೆಕ್ಕೆಗೆ ಬಿದ್ದಿತು. ಅಂತೂ ನಿದ್ರೆಯ ಉಲುವು ಕೂಡ ಆ ಕಡೆ ಸುಳಿದಂತೆ ಕಾಣಲಿಲ್ಲ. ಕಣ್ಣು ತ್ರಾಸ ತಡೆಯದೆ ಮುಚ್ಚಿದರೆ ಕಲ್ಪನೆ ಗರಿಗೆದರಿ ಬಣ್ಣಗೂಡಿಕೊಂಡು ಕುಣಿಯುತ್ತಿತ್ತು. ಮತ್ತೆ ಕಣ್ಣು ತಾನೆತಾನಾಗಿ ತೆರೆದು ಕತ್ತಲೆಯನ್ನು ಹರಿದು ಮರುದಿನದ ಆಟವನ್ನು ಕಾಣುತ್ತಿತ್ತು. ಪಾಚು, ನಾರಾಯಣಸ್ವಾಮಿ, ವೈ. ಎಸ್. ರಾಮಸ್ವಾಮಿ ಅವರೆಲ್ಲರೂ ತನ್ನನ್ನು ಹೊಗಳಿದ್ದರು. ತನ್ನ ಆಟ ಚೆನ್ನಾಗಿ ಇರುವುದೆಂದು ಭರವಸೆಯಿಟ್ಟಿದ್ದರು. ತನ್ನಲ್ಲಿಟ್ಟ ಅವರ ನಂಬಿಕೆಯನ್ನು ಖಂಡಿತವಾಗಿ ಇಲ್ಲವಾಗಿಸಲಾರೆ. ಅವರೆಲ್ಲ ರಿಂದಲೂ ಬೆನ್ನು ತಟ್ಟಿಸಿಕೊಳ್ಳಬೇಕೆಂಬ ಆಸೆ ಸೀನುವಿನದು. ಇದೇ ಚಿಂತೆ ಯಲ್ಲಿದ್ದವನಿಗೆ ದೂರದ ದೊಡ್ಡ ಗಡಿಯಾರ ಮೂರು ಗಂಟೆ ಹೊಡೆದುದು ಕೂಡ ಚೆನ್ನಾಗಿ ಕೇಳಿಸಿತು. ಆದರೆ ಯಾವಾಗ ನಿದ್ರೆ ಬಂದಿತೊ ಏನೊ—ಅಂತೂ

ಅತ್ತಿಗೆ ಕೂಗಿ ಎಬ್ಬಿಸಿದಾಗ ಅವನಿಗೆ ತಾನು ನಿದ್ರೆ ಮಾಡಲೆ ಇಲ್ಲವೆನಿಸಿತ್ತು. ಅರೆನಿದ್ರೆಯಲ್ಲಿ ಆಕಳಿಸುತ್ತ ಎದ್ದಿದ್ದ. ಏಳುತ್ತಿದ್ದಂತೆ ಅತ್ತಿಗೆ 'ಎಡಗಡೆ ಮಗ್ಗುಲಲ್ಲಿ ಏಳಬೇಡ, ಸೀನು. ಬಲಗಡೆ ಮಗ್ಗುಲಿಗೆ ಏಳು' ಎಂದಿದ್ದಳು. ಮತ್ತೆ ಹಿಂದಕ್ಕೆ ಹಾಗೆಯೆ ಬಿದ್ದುಕೊಂಡ. ತಲೆ ಮಂಚದ ಕಟ್ಟಿಗೆ ಬಡಿಯಿತು. 'ಥೂತ್! ಯಾಕೊ ದಿನ ಚೆನ್ನಾಗಿ ಆರಂಭವಾಗಲಿಲ್ಲ' ಎಂದು ಗೊಣಗುತ್ತ ಬಲಗಡೆ ಮಗ್ಗುಲಲ್ಲಿ ಎದ್ದ. ಬಚ್ಚಲುಮನೆಯಲ್ಲಿ ಕೂಡ ತೂಕಡಿಸುತ್ತ ಆಕಳಿಸುತ್ತ ತೂರಾಡುತ್ತ ಮೈಗೆ ನೀರು ಹುಯ್ದುಕೊಂಡ. ಆದರೆ ಒಳಗಿನಿಂದ ಅತ್ತಿಗೆ 'ಕಾಫಿಯಾಯಿತು, ಸೀನು' ಎಂದಾಗ ಅವನಿಗೆ ಇನ್ನೂ ತೂಕಡಿಕೆ ಇಳಿದಿರಲಿಲ್ಲ. ಸ್ನಾನವೂ ಮುಗಿದಿರಲಿಲ್ಲ. ತಲೆ ಭಾರವಾಗಿತ್ತು. ಸ್ನಾನ ಮುಗಿಸಿ ಒಳಕ್ಕೆ ಬಂದು ತಲೆ ಕೊಡವಿಕೊಂಡು ನಿಂತ. ಅತ್ತಿಗೆ ಕೊಟ್ಟ ಕಾಫಿಯನ್ನು ಕೈಯಲ್ಲಿ ತೆಗೆದುಕೊಂಡು ಬಿಸಿ ಇದೆ ಎಂದು ಕೂಡ ನೋಡದೆ ಬಾಯಿಗಿಟ್ಟುಕೊಂಡ. ಮೊದಲ ಏಳಿತಕ್ಕೆ ನಾಲಿಗೆಯ ತುದಿ ಸುಟ್ಟಿತು. 'ಬಹಳ ಬಿಸಿಯೇನೊ, ಆರಿಸಿಕೊ' ಎಂದು ಅತ್ತಿಗೆ ಹೇಳಿದಳು. ಆದರೆ ಕಾಫಿಯ ಬಿಸಿ ಆಗಲೆ ನಾಲಗೆಗೆ ರುಚಿ ತೋರಿಸಿಬಿಟ್ಟಿತ್ತು. ತಲೆ ಭಾರ, ತೂಕಡಿಕೆ, ಈಗ ತಲೆಗೆ ಬಿದ್ದ ಪೆಟ್ಟು, ಜತೆಗೆ ಈ ನಾಲಗೆ ಸುಡುವುದು ಎಲ್ಲವೂ ಮನಸ್ಸಿನಲ್ಲಿ ಬೇಸರಕ್ಕೆಡೆಕೊಟ್ಟವು. ತಲೆಯಲ್ಲಿ ಯಾವ ವಿಚಾರವೂ ಸ್ಪಷ್ಟವಾಗಿರಲು ಸಾಧ್ಯವಿರಲಿಲ್ಲ. ಎಲ್ಲಕ್ಕು ಮಿಗಿಲಾಗಿ, ಆಟಕ್ಕೆ ಹೋಗುವ ಆ ಉತ್ಸುಕತೆ, ಉದ್ರೇಕ. ಹೀಗೂ ಹಾಗೂ ಒದ್ದಾಡಿದ, ಹಾರಾಡಿದ. ಗಡಿಯಾರವನ್ನು ಹತ್ತು ಸಾರಿ ನೋಡಿದ. ರೈಲು ಬರುವ ಹೊತ್ತಾಯಿತು. ಇನ್ನು ತನಗೆ ಹೊತ್ತಾಗುತ್ತೆ ಎಂದುಕೊಂಡು ಅತ್ತಿಗೆಯ ಕೈಯಲ್ಲಿ ತನ್ನ ಪೆಟ್ಟಿಗೆಯ ಬೀಗದಕೈ ಕೊಟ್ಟಿದ್ದುದನ್ನು ಕೇಳಲು ಅತ್ತಿಗೆಯನ್ನು ಕೂಗಿದ. ಅವನ ದುರದೃಷ್ಟಕ್ಕೊ ಏನೊ ಅತ್ತಿಗೆ ಸ್ನಾನಕ್ಕೆಂದು ಬಚ್ಚಲುಮನೆ ಸೇರಿ ಬಿಟ್ಟಿದ್ದಳು. ಹೊರಗೆ ಸೀನು ಆತುರದಲ್ಲಿ ಚಡಪಡಿಸುತ್ತಿದ್ದ. ಶಾಂತಳಿಗೆ ಅವನಿಗೆ ಬೀಗದಕೈ ಕೊಟ್ಟು ಸ್ನಾನಕ್ಕೆ ಬರಬೇಕೆಂದು ಮನಸ್ಸಿದ್ದರೂ ಮರೆತು ಹೋಗಿತ್ತು. ಹೊರಗಿನಿಂದ ಸೀನು ಸುಮ್ಮನೆ ಗಾಬರಿ ಗಾಬರಿಯಾಗಿ ಅವಸರ ಪಡಿಸುತ್ತಿದ್ದ: 'ಅತ್ತಿಗೆ, ಬೀಗದಕೈ–ಬೀಗದಕೈ ಕೊಡು. ಎಲ್ಲಿಟ್ಟಿದ್ದೀಯೆ, ಹೇಳು. ನಾನೇ ತಗೊಳ್ಳುತೀನಿ' ಎಂದು ಕೂಗಾಡಿದ. ಒಳಗಿ

ನಿಂದಲೆ ಶಾಂತ 'ತಾಳೊ, ಬಂದೆ ತಾಳು. ಅಷ್ಟರಲ್ಲಿ ಏನು ಕೊಳ್ಳೆ ಹೋಗೋದು' ಎಂದಂದು, ಸೀರೆ ಸುತ್ತಿಕೊಂಡು ಹೊರಕ್ಕೆ ಬಂದು ತನ್ನ ರೂಮಿನೊಳಕ್ಕೆ ಹೋದಳು. ಸೀರೆಯನ್ನು ಸರಿಯಾಗಿ ಉಟ್ಟುಕೊಳ್ಳುವಷ್ಟರಲ್ಲಿ ಸೀನು ಸುಮ್ಮನೆ ಚಡಪಡಿಸುವುದನ್ನು ನೋಡಿ ಅವಳಿಗೂ ಬೇಸರವಾಯಿತು. ಇಬ್ಬರಿಗೂ ಮೆಲ್ಲನೆ ಸಹನೆ ಸಡಿಲವಾಗಿತ್ತು. ಹೀಗಾಗಿ ಶಾಂತ ಬೀಗದಕ್ಕೆ ಹುಡುಕಲಾರಂಭಿಸಿದಾಗ ಸೀನುವಿಗೆ ಕೋಪ ದುಃಖಗಳೆರಡೂ ಬಂದವು. ಮೂರು ನಾಲ್ಕು ಬಾರಿ ಹುಡುಕಿದರೂ ಬೀಗದಕ್ಕೆ ಸಿಗದಿರಲು ಸೀನುವಿಗೆ ಗಾಬರಿಯೆ ಆಯಿತು. ಪದೆ ಪದೆ ಕೈಯಲ್ಲಿದ್ದ ಗಡಿಯಾರವನ್ನು ನೋಡಿ ಕೊಳ್ಳುತ್ತ ಅತ್ತಿಗೆಯ ಜತೆಗೆ ಎಲ್ಲೆಲ್ಲೂ ಹುಡುಕಿದ. ಆದರೆ ಇಬ್ಬರ ಕೈಗೂ ಬೀಗದಕ್ಕೆ ಸಿಕ್ಕದೆ ಹೋಯಿತು. ಟ್ರಂಕಿನ ಅಕ್ಕಪಕ್ಕದಲ್ಲಿ ಹುಡುಕುತ್ತ ಟ್ರಂಕೆಳೆದಾಗ ಸೀನುವಿನ ಬೆರಳಿನ ಮೇಲೆ ಟ್ರಂಕು ಅಮುಕಿ ನೋವಾಯಿತು. ಇಷ್ಟು ಹೊತ್ತೂ ಹುಡುಕಿದ ನಿರಾಶೆ, ಈಗ ಇದರಿಂದ ತನ್ನ ಆಟದ ಭವಿಷ್ಯಕ್ಕೆ ಕೊಡಲಿಪೆಟ್ಟು ಬಿತ್ತಲ್ಲ ಎನ್ನುವ ದುಃಖ ಒಂದು ಕಡೆ, ಅಲ್ಲದೆ ಉದ್ರೇಕ. ಆಟಕ್ಕಾಗಿ ಉತ್ಸಾಹ, ಉತ್ಸುಕತೆ ಈಗ ಮಣ್ಣುಪಾಲಾಗಿ ನಿರಾಶೆಯ ಪ್ರಪಾತಕ್ಕಿಳಿಸಿದ್ದವು. ಅಂತೂ ಅವನ ಬುದ್ಧಿ ಆಗ ಸ್ತಿಮಿತದಲ್ಲಿರಲಿಲ್ಲ. ಬಾಯಲ್ಲಿ ಬಿರುಸಾಗಿ ಮಾತು ಬಂತು. ಅತ್ತಿಗೆಯನ್ನು ಗದರಿಸಿಕೊಂಡು ಮಾತಾಡಿದ. ಶಾಂತಳೇನೊ ಮೊದಲು ಸಹನೆಯಿಂದಲೆ ಉತ್ತರ ಕೊಟ್ಟಳು. ಹುಡುಕಾಟ ನಿಲ್ಲಲೂ ಇಲ್ಲ. ಆದರೆ ಮತ್ತೆ ಐದು ನಿಮಿಷವಾದರೂ ಸಿಗದಿರಲು ಸೀನುವಿನ ಉದ್ರೇಕ ಮಿತಿಮೀರಿತು. ಬಾಯಿಗೆ ಬಂದಂತೆ ಅತ್ತಿಗೆಯನ್ನು ಅಂದುಬಿಟ್ಟ. ಶಾಂತಳೂ ಕೆರಳಿದಳು. ಹಗರಣವಾಗಿತ್ತು, ನಿಜ! ತನ್ನದು ತಪ್ಪಿರಬಹುದೆಂದು ಈಗ ಸೀನುವಿಗೆ ಯೋಚನೆ ಮಾಡಿದಂತೆ ಅನಿಸಿತು. ಆದರೆ ತನ್ನ ಪ್ರಯತ್ನ, ಶ್ರಮವೆಲ್ಲ ವ್ಯರ್ಥವೆ ಆಯಿತಲ್ಲ, ಕೊನೆಗೂ ತಾನು ಕ್ರಿಕೆಟ್ಟಿಗೆ ಹೋಗದಂತಾಯಿತಲ್ಲ. ಹಾಗೆ ತನ್ನ ಆಸೆಗಳಿಗೆಲ್ಲ ತಣ್ಣೀರೆರಚಿದ ತಪ್ಪು ಯಾರದು? ಅತ್ತಿಗೆ ಬೀಗದಕ್ಕೆಯನ್ನು ಜವಾಬ್ದಾರಿಯಿಂದ, ಹುಷಾರಿನಿಂದ ತೆಗೆದಿರಿಸಿದ್ದಿದ್ದರೆ ತನ್ನ ಇಷ್ಟು ದಿನದ ಕಷ್ಟವೂ ಸಾರ್ಥಕವಾಗುತ್ತಿತ್ತು. ಯಾವ ರೀತಿಯ ಅಸಂಗತವೂ ಆಗುತ್ತಿರಲಿಲ್ಲ. ಅತ್ತಿಗೆಯದೆ ತಪ್ಪು! ಆದರೆ ತಾನು ಮಿತಿಮೀರಿ ಮಾತನಾಡಿದುದೂ ತಪ್ಪು. ಅತ್ತಿಗೆಯನ್ನು ಪದೆ ಪದೆ

ಹಾಗೆ ಕೆಣಕಬಾರದಾಗಿತ್ತು. ತಾಯಿ ಅವಳನ್ನು ಸಮಾಧಾನ ಮಾಡಿದಾಗ ತಾನು ಸುಮ್ಮನಿದ್ದರೆ ಆಗಿತ್ತು. ಆದರೆ ಸಿರಾಶೆಯಲ್ಲಿ ಕುದಿಗೊಂಡ ಮನಸ್ಸು ಬಿಡಲಿಲ್ಲ, ಸುಮ್ಮನಿರಲು ತನ್ನಿಂದಾಗಲಿಲ್ಲ. ತನಗಾದ ನೋವಿಗೆ ಅತ್ತಿಗೆಯ ಮೇಲೆ ಪ್ರತೀಕಾರ ತೆಗೆದುಕೊಳ್ಳಲು ಅವಳನ್ನು ವ್ಯಂಗ್ಯವಾಗಿ, ವಕ್ರೋಕ್ತಿಗಳಿಂದ, ಬಿರುಸು ಮಾತುಗಳಿಂದ ಹೊಡೆಯುವುದರಿಂದ, ನೋವುಂಟುಮಾಡುವುದೆ ಸರಿ ಎನಿಸಿತು. ಮನುಷ್ಯ ತನಗಾದ ನೋವಿಗೆ ಪ್ರತೀಕಾರ ರೂಪವಾಗಿ ಮತ್ತೊಬ್ಬರಿಗೆ, ಅದೂ ತನಗೆ ಪ್ರಿಯವಾದವರಿಗೆ ನೋವುಂಟುಮಾಡುವುದೆ ಸಹಜ. ಸೀನು ಕೂಡ ಹಾಗೆಯೆ ಮಾಡಿದ್ದುದು. ಆದರೆ ತನಗಾದ ನೋವು ಎಂತಹದು! ಆ ಪ್ರತೀಕಾರದ ಪರಿಣಾಮ ಎಂತಹದು? ಅತ್ತಿಗೆ ಹೊರಟು ಹೋದಳು—ಅದೂ ತನ್ನಿಂದ!

ಸೀನುವಿನ ತಲೆ ಕಾದಿತ್ತು. ಎಷ್ಟು ಯೋಚಿಸಿದರೂ ಬಗೆಹರಿಯದು. ಜಗಳವಾಡಿಯಾಗಿತ್ತು, ಅತ್ತಿಗೆ ರೈಲಿಗೆ ಹೊರಟುಹೋಗಿಯೂ ಆಗಿತ್ತು. ಈಗ ಅದರ ಅನಾಹುತದ ಕಲ್ಪನೆಯಲ್ಲಿ ಸೀನುವಿನ ಎದೆ ಬೇಯುತ್ತಿತ್ತು. ಪಶ್ಚಾತ್ತಾಪದಲ್ಲಿ ಮನಸ್ಸು ವಿಕಲಗೊಂಡಿತ್ತು. ತಾನು ಮಾಡಿದುದು ತಪ್ಪೆಂದು ಮನಸ್ಸಿಗೆ ಅರಿವಾಗಿತ್ತು. ಏನೂ ಬೇಕಾಗದಂತೆ ಮನಸ್ಸು ರೋಸಿಹೋಗಿತ್ತು. ತಲೆಯನ್ನು ಮೇಜಿನ ಮೇಲಿಟ್ಟುಕೊಂಡು ಕುಳಿತಿದ್ದ. ಕಣ್ಣಿನಲ್ಲಿ ಮಾತ್ರ ನೀರು ಹನಿಯಿತು. ಅದರ ಪರವೆ ಕೂಡ ಅವನಿಗಿಲ್ಲ. ವಿಪರೀತ ಬೇಸರ, ದುಃಖ, ಆಯಾಸ. ನಿದ್ದೆಗೆಟ್ಟು ಬುದ್ಧಿಗೆಟ್ಟಂತಾಗಿತ್ತು. ಕೊಂಚ ನಿದ್ದೆ ಗಣ್ಣಾಯಿತು.

"ಏಳೊ ಸೀನು, ಊಟಕ್ಕೇಳು. ವಸಂತು, ವಸಂತು, ಎದ್ದು ತಟ್ಟೆ ಹಾಕಿಕೊ" ಎಂದು ಗಂಗಮ್ಮನವರು ಕೂಗಿದರು. ನಿದ್ದೆಗಣ್ಣಿನಲ್ಲಿ ಸೀನುವಿಗೆ ಈ ಕರೆ ಕನಸಿನಲ್ಲಿ ಆಡಿದ ಮಾತಿನಂತೆ ಕೇಳಿಯೂ ಕೇಳಿಸದಂತಿತ್ತು. ವಸಂತು ಮೂಲೆಯಲ್ಲಿ ಮುಸುಗುಟ್ಟುತ್ತ "ಅತ್ತಿಗೆ, ಅತ್ತಿಗೆ" ಎಂದು ಅಳುತ್ತಿದ್ದವಳು ಹಾಗೆಯೆ ಸೊರಗಿ, ನಿದ್ದೆಹೋಗಿದ್ದಳು. ಈಗ ಆರಾಮವಾಗಿ ಮಲಗದೆ ಹೇಗೊ ಬಿದ್ದುಕೊಂಡಿದ್ದುದರಿಂದ ನಿದ್ರೆಯಲ್ಲಿಯೆ ಮುಲುಗುಟ್ಟುತ್ತಿದ್ದಳು. ಅವಳಿಗೂ ತಾಯಿಯ ಕೂಗು ಕೇಳಿಸಲಿಲ್ಲ. ಇಬ್ಬರೂ ಮಾತನಾಡದಿದ್ದುದನ್ನು ಕಂಡು ಗಂಗಮ್ಮನವರು ತಾವೇ ರೂಮಿನ ಬಾಗಿಲಿಗೆ ಬಂದರು. ರಂಗಣ್ಣನವರು

ಭುಸುಗುಟ್ಟುತ್ತಲೆ ಹೊರಟುಹೋಗಿದ್ದರು. ಅವರಿಗೂ ಊಟ ಬೇಕಾಗಿರಲಿಲ್ಲ. ಅದಾದಮೇಲೆ ಸೊಸೆ ಹೊರಟುಹೋದ ಆಘಾತದಲ್ಲಿ ಬಸವಳಿದು ಗಂಗಮ್ಮ ನವರು ಅಡಿಗೆಯ ಮನೆಯಲ್ಲಿ ತಲೆಯ ಮೇಲೆ ಕೈ ಇಟ್ಟುಕೊಂಡು ಕುಳಿತು ಬಿಟ್ಟಿದ್ದರು. ಅವರಿಗೂ ಏನೂ ಬೇಕಾಗಲಿಲ್ಲ. ಮಕ್ಕಳಿಗೆ ಊಟವಾಗಿಲ್ಲ ಎನ್ನುವುದು ಕೂಡ ಅವರಿಗೆ ನೆನಪಾಗಲಿಲ್ಲ. ಬೆಕ್ಕು ಬಂದು ಬಾಗಿಲಿನಲ್ಲಿ ನಿಂತು ಕಣ್ಣು ಪಿಳಿಪಿಳಿ ಬಿಟ್ಟು ಅವರನ್ನು ನೋಡಿತು. ವಿಗ್ರಹದಂತೆ ಕುಳಿತ ಅವರು ಉಸಿರಾಡುವುದೂ ಇಲ್ಲವೆನ್ನುವಂತೆ ಅಲುಗಾಡದೆ ಕುಳಿತಿದ್ದರು. ಬೆಕ್ಕು ನಿಧಾನ ವಾಗಿ ಒಳಕ್ಕೆ ಬಂದು ಮೂಲೆಯಲ್ಲಿಟ್ಟಿದ್ದ ಮೊಸರಿನ ಪಾತ್ರೆಗೆ ಮೂತಿಯಿಟ್ಟಿತು. ಮೇಲೆ ಮುಚ್ಚಿದ್ದ ಹಿತ್ತಾಳೆಯ ತಟ್ಟೆ ಕೆಳಗುರುಳಿ ಸದ್ದಾಯಿತು. ಬೆಕ್ಕು ಓಡಿತು, ಗಂಗಮ್ಮನವರೂ ಎಚ್ಚರಗೊಂಡರು. ಕರೆಯದಿದ್ದರೂ ಬಂದು ಕೋಡಿಗರೆಯು ತ್ತಿದ್ದ ಕಣ್ಣೀರನ್ನು ಸೆರಗಿನಿಂದ ಒರಸಿಕೊಂಡರು. "ಏನೇನಾಗುತ್ತದೊ ಆಗಲಿ" ಎಂದು ನಿಟ್ಟುಸಿರು ಬಿಟ್ಟು ಎದ್ದು ನಿಂತರು. ದೇವರ ದೀಪ ಆರಿ ಕರಕಿನಿಂದ ಹೊಗೆ ಮೇಲೇರುತ್ತಿತ್ತು. ಸುಟ್ಟ ಎಣ್ಣೆಯ ವಾಸನೆ ಅಲ್ಲೆಲ್ಲ ಹರಡಿಕೊಂಡಿತ್ತು.

ಹಜಾರಕ್ಕೆ ಬಂದು ಗಡಿಯಾರ ನೋಡಿದಾಗ ವೇಳೆ ಹನ್ನೆರಡರ ಸಮೀಪ ಬಂದಿತ್ತು. ಶಾಂತ ಹೊರಟುಹೋಗಿ ಆಗಲೆ ಎರಡು ಗಂಟೆಯಾಗುತ್ತ ಬಂದಿತ್ತು. ಹುಂ! ಏನೇನು ಕರ್ಮವೊ—ಬಂದದ್ದೆಲ್ಲಾ ಬರಲಿ, ಎಂದು ಕೊಳ್ಳುತ್ತ ಸೀನುವನ್ನೂ ವಸಂತುವನ್ನೂ ಊಟಕ್ಕೆ ಕರೆದರು. ಆದರೆ ಅವರ ಉತ್ತರ ಬಾರದಿರಲು ರೂಮಿನ ಬಳಿಗೆ ಬಂದರು. ಮಕ್ಕಳಿಬ್ಬರೂ ನಿದ್ದೆಗಣ್ಣಾಗಿ ಒರಗಿಕೊಂಡಿದ್ದರು. ಗಂಗಮ್ಮನವರಿಗೂ ಅವರನ್ನು ಕಂಡು ಕರುಳು ಚುರ್ರೆಂದಿತು. ಪಾಪ! ಬೆಳಿಗ್ಗೆಯಿಂದ ಇಬ್ಬರೂ ಹಸಿದುಕೊಂಡೆ ಇದ್ದಾರೆ. ಊಟ ಮಾಡದೆ ಹೀಗೆ ಬಸವಳಿಯುತ್ತಿದ್ದಾರಲ್ಲ ಎನಿಸಿತು. ಹಾಗೆಯೆ ಊಟ ಮಾಡದೆ ನಿಂತ ನಿಲುವಿನಲ್ಲಿ ಹೊರಟುಹೋದ ಸೊಸೆ, ಶಾಂತ— ಪಾಪ! ಅವಳು ಕೂಡ ಹಸಿದುಕೊಂಡೆ ಇರುವಳೆಂಬುದು ನೆನಪಾಗಿ ಮನಸ್ಸು ಮಿಡುಕಿತು. ಒಂದು ದಿನವಾಗಲಿ ಮಕ್ಕಳು ಹತ್ತು ಹತ್ತೂವರೆಗಿಂತ ಹೆಚ್ಚು ಉಪವಾಸವಿದ್ದವರಲ್ಲ. ಸೊಸೆ ಕೂಡ ಹಾಗೆಯೆ. ಈಗ ಹೇಗೆತಾನೆ ತಡೆದು ಕೊಂಡಿದ್ದಾರೊ ಹಸಿವೆಯನ್ನು! ರೈಲಿನಲ್ಲಿ ಪ್ರಯಾಣ ಬೇರೆ. ಸುಸ್ತಾಗದೆ ಇರುತ್ತದೆಯೆ? ಸಂಜೆ ಮನೆಗೆ ಹೋಗುವ ಹೊತ್ತಿಗೆ ಶಾಂತ ಒಣಗಿಕೊಂಡಿರು

ತ್ತಾಳೆ. ಹಾಗೆ ಹಟ ಮಾಡಿಕೊಂಡು ಹೋಗಬಾರದಾಗಿತ್ತು. ಈಗ ಅವಳ ಮೈ ಇವನ್ನು ತಡೆಯಬೇಕಲ್ಲ. ಎರಡು ಎರಡೂವರೆ ತಿಂಗಳಿರಬಹುದು ಅವಳಿಗೆ. ಅವಕ್ಕೇನೂ ಅನಾಹುತವಾಗದಿದ್ದರೆ ಸಾಕು, ಸದ್ಯ ಎಂದು ಮಮ್ಮಲ ಮರುಗಿದರು ಗಂಗಮ್ಮ. ಜೊತೆಗೆ ಸೊಸೆ ಮನಸ್ಸಿಗೆ ಕೊರಗು ಹತ್ತಿಸಿಕೊಂಡು ಮೈ ಕೆಡಿಸಿಕೊಂಡರೇನು ಗತಿಯೆಂದೂ ಎದೆ ಧಸ್ಸೆಂದಿತು. ಮರುಕಳಿಸುತ್ತಿದ ದುಃಖವನ್ನು ಅದುಮಿಕೊಂಡು ಸೀನುವನ್ನೂ ವಸಂತುವನ್ನೂ ಮತ್ತೆ ಊಟಕ್ಕೆ ಕರೆದರು :

"ಸೀನು, ಸೀನು, ಏಳೊ ಊಟಕ್ಕೆ."

ಸೀನು ಮೈಮುರಿಯುತ್ತ ತಲೆಯೆತ್ತಿದ. ತಾಯಿಯ ಪೆಚ್ಚುಬಿದ್ದ ಮುಖ ಕಂಡು ಮತ್ತೆ ತಲೆ ತಗ್ಗಿಸಿದ.

"ಊಟಕ್ಕೇಳೊ" ಎಂದರು ಗಂಗಮ್ಮ ಮತ್ತೊಮ್ಮೆ.

"ಬೇಡಮ್ಮ, ನಾನು ಊಟ ಮಾಡುವುದಿಲ್ಲ" ಎಂದು ಮೆಲ್ಲನೆ ಸಣ್ಣ ದನಿಯಲ್ಲಿ ಸೀನು ತಲೆಯೆತ್ತದೆ ಹೇಳಿದ.

"ಊಟ ಬೇಡ ಅಂದರೆ ಹೇಗೊ—ಚೆನ್ನಾಗಿದೆ, ಏಳು ಏಳು. ಬೆಳಿಗ್ಗೆ ಒಂದು ತೊಟ್ಟು ಕಾಫಿ ಕುಡಿದದ್ದು. ಈಗಾಗಲೆ ಹನ್ನೆರಡು ಗಂಟೆ ಸಮಯ, ಏಳು ಏಳು. ವಸಂತು—ಊಟಕ್ಕೇಳೆ" ಎಂದು ಮಗಳ ಹತ್ತಿರ ಹೋಗಿ ಕೂಗಿದರು.

ವಸಂತು ಎಚ್ಚರಗೊಂಡಳು. ಕಣ್ಣುಬಿಟ್ಟು ತಾಯಿಯ ಕಡೆ, ಅಣ್ಣ ಸೀನುವಿನ ಕಡೆ ನೋಡಿದಳು. ಇದ್ದಕ್ಕಿದ್ದಂತೆ ಅತ್ತಿಗೆ ಹೊರಟುಹೋದ ನೆನಪಾಗಿ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಗಂಗಮ್ಮನವರಿಗೆ ಏನು ಮಾಡಲೂ ತೋಚಲಿಲ್ಲ. ಅವರಿಗೂ ಎದೆಯಲ್ಲಿ ವೇದನೆ ಉಕ್ಕಿ ಉಕ್ಕಿಬರುತ್ತಿತ್ತು. ಆದರೆ ಈಗ ಅದನ್ನು ತೋರಿಸಲು ಇಷ್ಟವಿಲ್ಲ. ಇವರಿಬ್ಬರಿಗೂ ಊಟವಾಗಿಬಿಡಲಿ ಎಂದಷ್ಟೆ ಈಗನ್ನಿಸಿತು. ಆದರೆ ಇವರಿಬ್ಬರೂ ಅಳುಮೋರೆ ಹಾಕಿಕೊಂಡು ಕುಳಿತಿದಾರೆ. ಇನ್ನು ಒಂದು ಸಾರಿ ನೋಡೋಣವೆಂದುಕೊಂಡರು.

"ಏಳು ಊಟಕ್ಕೆ" ಎಂದರು, ದನಿಯನ್ನು ಕೊಂಚ ಗಡಸಾಗಿಸಲು ಪ್ರಯತ್ನಿಸಿ.

ವಸಂತು ಬಿಕ್ಕಿಬಿಕ್ಕಿ ಅಳುತ್ತ "ಉಹುಂ! ನನಗೆ—ಊಟ—ಬೇಡ.

ಅತ್ತಿಗೆ—ಅತ್ತಿಗೆ" ಎಂದು ಮತ್ತೆ ಆರಂಭಿಸಿದಳು.

ಸೀನು ತಲೆ ಕೆರೆದುಕೊಳ್ಳುತ್ತಿದ್ದ. ಮೇಜಿನ ಮೇಲೆ ತನ್ನ ತಲೆಯನ್ನು ಚಚ್ಚಿಕೊಂಡುಬಿಡಬೇಕೆನ್ನಿಸುವಷ್ಟು ರೋಷ, ದುಃಖವಾಗಿತ್ತು ಅವನಿಗೆ. ಎರಡು ಕಡೆಯೂ ಹಣೆಗೆನ್ನೆಯಲ್ಲಿ ಕಣ್ಣಿನ ಪಕ್ಕದಲ್ಲಿ ಸಿಡಿಗುಂಡನ್ನು ಸಿಡಿಸಿದಂತಾಗುತ್ತಿತ್ತು. ಅಷ್ಟರಲ್ಲಿ ತಾಯಿ ಮತ್ತೆ ಕೂಗಿದರು. ಈ ತನಕ ಬಿಗಿಹಿಡಿದಿದ್ದ ತನ್ನ ಮೇಲಿನ ರೋಷ ಈಗ ಸಿಡಿಯಿತು.

" ಬೇಡ ಹೋಗಮ್ಮ, ನನಗೆ " ಎಂದ.

ಗಂಗಮ್ಮನವರ ದುಃಖಕ್ಕೆ ಒಂದು ಅವಕಾಶ ಬೇಕಿತ್ತು. ಈಗ ಸಿಕ್ಕಂತಾಗಿ ನೊಂದ ದನಿಯಲ್ಲಿ ಮೆಲ್ಲಗೆ ಗೋಳುಸೂಸಿದರು :

" ಯಾಕಪ್ಪಾ, ನನ್ನ ಮೇಲೆ ರೇಗುತೀಯ. ಬೇಡ ಅಂದರೆ ಬೇಡ. ಊಟಕ್ಕೇಳು ಅಂದರೆ ಸಿಡುಕಿಕೊಳ್ಳಬೇಕೆ? ಆ ಮಹಾರಾಯಿತಿ ಊಟ ಇಲ್ಲದೆ ಕಂಗಾಲಾಗಿ ಹೊರಟುನಿಂತಳು. ಸೊರಗಿ ಹೋಗುತ್ತೆ ಅವಳ ಜೀವ, ಸಂಜೆಯ ಹೊತ್ತಿಗೆ. ಊಟಕ್ಕೆ ಹಾಕುತ್ತಿರಲಿಲ್ಲ ಇವರ ಅತ್ತೆ ಅಂತ ಅಲ್ಲಿ ಅವಳ ತವರುಮನೆಯವರು ನನ್ನನ್ನು ದೂರಬೇಕು. ಎಲ್ಲಾದಕ್ಕೂ ನನಗೆ ತಾನೆ ಕೆಟ್ಟ ಹೆಸರು ಬರಬೇಕಾದರೆ. ಇಲ್ಲಿ ನೀವು ಊಟ ಮಾಡದೆ ಸೊರಗಿ—ನನಗೂ ಕರುಳು ತಡೆಯುವುದಿಲ್ಲ, ಅದಕ್ಕೋಸ್ಕರ ಹೇಳಿದೆ. ಅದೇ ತಪ್ಪಾಯಿತು" ಎಂದು ಬಿಕ್ಕಿಬಿಕ್ಕಿ ಅಳಲಾರಂಭಿಸಿದರು.

ಸೀನುವಿಗೆ ತನ್ನ ಸಿಡುಕಿನ ಮಾತಿನ ಕೆಟ್ಟತನ ತಿಳಿಯಿತು. ತಾಯಿ ಅಳುತ್ತ ಕುಳಿತುದನ್ನು ಕಂಡು ಅವನು ಕಕ್ಕಾವಿಕ್ಕಿಯಾದ. ಏನು ಹೇಳಲೂ ತಿಳಿಯದು. ಏನು ಮಾಡಲೂ ಗೊತ್ತಾಗಲೊಲ್ಲದು. ವಸಂತು ಮೆಲ್ಲನೆ ಅಳುತ್ತ ಎದ್ದು ನಿಂತಳು. ಜಡೆಯೆಲ್ಲ ಕೆದರಿಹೋಗಿತ್ತು. ರಿಬ್ಬನ್ ಬಿಚ್ಚಿಕೊಂಡು ಜೋಲಾಡುತ್ತಿತ್ತು. ಅಳುತ್ತ ಸೀನುವಿನ ಹತ್ತಿರ ಬಂದು ನಿಂತಳು. ಆಗಾಗ ಮೂಗಿನಲ್ಲಿ ಸೊರಗುಟ್ಟುತ್ತಿದ್ದ ಅವಳ ಕಡೆ ಸೀನು ತಿರುಗಿದ. ಹತ್ತಿರ ಬಂದು ವಸಂತು ಅವನನ್ನು ತಬ್ಬಿಕೊಂಡುಬಿಟ್ಟಳು. ಅಳು ಜೋರಾಯಿತು.

" ಸೀನು! ಸೀನು! ಅತ್ತಿಗೆ—ಅತ್ತಿಗೆ! "

ಗಂಗಮ್ಮನವರಿಗೂ ಸಹನೆ ಮೀರಿತು. ಕಣ್ಣಲ್ಲಿ ನೀರು ಹಾಕಿಕೊಳ್ಳುತ್ತ " ಅತ್ತಿಗೆ! ಅತ್ತಿಗೆ! ಅಂತ ಇಷ್ಟೊಂದು ಹೊಡಕೊಳ್ಳುತ್ತೆ. ಕೂಗತಾ ಇದ್ದರೂ

ಹಾಗೆ ಹೋದಳಲ್ಲ ಅವಳು. ಎಷ್ಟು ಅವಳ ಅಹಂಕಾರ!" ಎಂದರು.

"ಅತ್ತಿಗೆ—ಅತ್ತಿಗೆ" ಎಂದು ಮತ್ತೆ ವಸಂತು ಬಿಕ್ಕಿದಳು.

"ಯಾಕೆ ಸುಮ್ಮನೆ ಅತ್ತಿಗೆ, ಅತ್ತಿಗೆ ಅಂತ ಹೊಡಕೋತೀಯ. ನಿನ್ನ ಅತ್ತಿಗೆ ಹೋಗಿಬಿಟ್ಟಳು" ಎಂದು ಗಂಗಮ್ಮನವರು ರೋಸಿನಿಂದ ಅಂದರು. ಬೇಸರ ಅನ್ನಿಸಿತು. ತಕ್ಷಣ ಎಂತಹ ಅವಾಚ್ಯವನ್ನಾಡಿದೆನೆಂದು ಬಾಯಿ ಕಚ್ಚಿದರು. ಕಟ್ಟೆಯೊಡೆದು ದುಃಖ ನುಗ್ಗಿತು.

ಆಡಬಾರದ ಮಾತನ್ನು ಕೋಪದಲ್ಲಿ ಅಂದುದು ಸೀನುವಿನ ಎದೆ ಚುಚ್ಚಿತು. ಕಿವಿ ನೆಟ್ಟಗಾಗಿ ತಕ್ಷಣ ತಲೆಯೆತ್ತಿದ. ಅವರು ಬಿಕ್ಕಿಬಿಕ್ಕಿ ಅಳುವುದನ್ನು ಕಂಡೊಡನೆ ತಾಯಿಯ ಮೇಲಿನ ಕೋಪ ಕರಗಿಹೋಯಿತು. ಅಳುತ್ತಿದ್ದ ವಸಂತುವನ್ನು ಎದೆಗವಚಿಕೊಂಡು ತಲೆಗೂದಲನ್ನು ನೇವರಿಸ ಲಾರಂಭಿಸಿದ. ಗಂಗಮ್ಮನವರು ದುಃಖವನ್ನು ಹೇಗೋ ಸಹಿಸಿಕೊಳ್ಳುತ್ತ "ನಾನೇನು ಮಾಡಲಿ, ಎಲ್ಲ ನನ್ನ ಕರ್ಮ, ಅನುಭವಿಸಬೇಕು. ಇಷ್ಟು ಪ್ರೀತಿ ಇದ್ದ ಅತ್ತಿಗೆ ಮೈದುನ ಹೀಗೆ ಜಗಳವಾಡಿ ಮನೆ ಹಾಳಾಗಬೇಕೇ! ಎಂತಹ ಕೆಟ್ಟ ಗಳಿಗೆ ಬಂತೊ! ಇದನ್ನೆಲ್ಲ ನೋಡಿ ನನ್ನ ಕರುಳು ಚುರುಕೆಂದರೆ ನಾನೇ ಕೆಟ್ಟವಳು. ಯಾವತ್ತು ಇದೆಲ್ಲ ಪರಿಹಾರವಾಗುತ್ತೊ, ದೇವರಿಗೆ ಗೊತ್ತು" ಎಂದು ದುಃಖ ತೋಡಿಕೊಂಡರು.

ತನ್ನಿಂದ ತಾಯಿಗೆ, ತಂಗಿಗೆ ಎಷ್ಟು ದುಃಖ ಎಂದು ಸೀನುವಿಗೆ ಈಗ ಮನಸ್ಸಿಗೆ ತಾಕಿತು. ಆದರೇನು ಮಾಡುವುದು? ಆಗುವುದು ಆಗಿಹೋಯಿತು, ಈಗ ಬರಿಯ ಪಶ್ಚಾತ್ತಾಪ—ಅಷ್ಟೆ!

ಹಾಗೆಯೆ ಹೊಸಲಿನ ಹತ್ತಿರ ತಲೆಯ ಮೇಲೆ ಕೈ ಇಟ್ಟುಕೊಂಡು ಗಂಗಮ್ಮನವರು ತಮ್ಮಲ್ಲೆ ತಾವು ಅಳುತ್ತಿದ್ದರು. ತಲೆಯಲ್ಲಿ ಯಾವ ಯೋಚನೆಗೂ ಅವಕಾಶವೆ ಇಲ್ಲದಂತೆ ಸೊಸೆಯ ಚಿಂತೆ ತುಂಬಿಕೊಂಡಿತ್ತು. ಸೀನು ಮೇಜಿಗೆ ಆತುಕೊಂಡು ಕುಳಿತಿದ್ದ. ಅವನ ಎದೆಗಾತುಕೊಂಡು ವಸಂತು ಬಿಕ್ಕಿಬಿಕ್ಕಿ ಅಳುತ್ತ "ಅತ್ತಿಗೆ, ಅತ್ತಿಗೆ" ಎಂದು ಮುಸುಗುಟ್ಟುತ್ತಿದ್ದಳು. ಸೀನುವಿನ ಕೈ ಅವಳ ತಲೆಗೂದಲಲ್ಲಿ ಆಡುತ್ತಿತ್ತು. ಅವನು ಬೇಡ ಬೇಡವೆಂದರೂ ಅವನ ಅರಿವಿಲ್ಲದೆ ಕಣ್ಣಿಂದ ಹನಿಹನಿಯಾಗಿ ಕಣ್ಣೀರು ವಸಂತುವಿನ ತಲೆಗೂದಲಿನ ಮೇಲೆ ಉದುರಿ ಮಾಯವಾಗುತ್ತಿತ್ತು.

೪

ಶಾಂತಳಿಗೆ ಒಂದು ಸಂಜೆ ಕಳೆಯುವುದೆ ಬೇಸರವಾಗಿಹೋಯಿತು. ರೈಲಿನಿಂದಿಳಿದು ಸ್ಟೇಷನ್ನಿನ ಮೆಟ್ಟಲುಗಳನ್ನು ಹತ್ತಿ ಇಳಿದು ಹೊರಕ್ಕೆ ಬರುವ ಹೊತ್ತಿಗೆ ಬಹಳ ಸುಸ್ತಾಗಿ ಹೋಗಿತ್ತು. ಚಾಮರಾಜಪೇಟೆಯಲ್ಲಿ—ಮೂರ ನೆಯ ರಸ್ತೆಯಲ್ಲಿ ಮನೆ. ಅಷ್ಟು ದೂರ ನಡೆಯುವುದು ಹೇಗೆಂದುಕೊಂಡು ಬಸ್ಸಿಗಾಗಿ ಕಾದಳು. ಕೊನೆಗೆ ಮಾರ್ಕೆಟ್ಟಿಗೆ ಹೋಗುವ ಬಸ್ಸಿನಲ್ಲಿ ಹತ್ತಿ ಮಾರ್ಕೆಟ್ಟಿಗೆ ಚರ್ಚಿನ ಕಡೆ ತಿರುಗುವಲ್ಲಿ ಇಳಿದಳು. ಅಲ್ಲಿಂದ ಮನೆಗೆ ಎರಡು ಫರ್ಲಾಂಗಿಗೂ ಸ್ವಲ್ಪ ಹೆಚ್ಚಿಗೆ ನಡೆಯಬೇಕಾಗಿತ್ತು. ದಾರಿಯಲ್ಲಿ ಬರುತ್ತಿದ್ದಂತೆ ಅವಳಿಗೆ ಮನಸ್ಸು ಮಿಡುಕುತ್ತಿತ್ತು. ಮನೆಯಲ್ಲಿ ತಾಯಿತಂದೆ ಏನೆನ್ನುವರೊ ಎನ್ನುವುದೊಂದೆ ಆತಂಕ. ಅವರು ಕೇಳಿದರೆ ತಾನು ಏನು ಹೇಳುವುದು? ಮೈದುನನೊಂದಿಗೆ ಜಗಳವಾಡಿಕೊಂಡು ಗಂಡನ ಮನೆ ಬಿಟ್ಟು ಬಂದೆನೆಂದು ಹೇಳುವುದೆ? ಹಾಗೆ ಹೇಳಿದರೆ ಸುಮ್ಮನೆ ಎಲ್ಲರೂ ಸೀನುವಿನ ಮೇಲೆ ಆರೋಪ ಹೊರಸುವರು. ತಂದೆಯಂತೂ ಮೊದಲೆ ಸಿಡುಕು ಸ್ವಭಾವದವರು. ಎಷ್ಟಿದ್ದರೂ ಲಾಯರು. ಕೋರ್ಟಿನಲ್ಲಿ ಜಗಳವಾಡಿ ಆಡಿ ಅಭ್ಯಾಸ. ಮನೆಯಲ್ಲಿ ಕೂಡ ಮೃದುವಾಗಿ ಮಾತನಾಡುವುದಿಲ್ಲ. ವಾದಿಪ್ರತಿವಾದಿಗಳನ್ನು ನಿಲ್ಲಿಸಿ ಕೊಂಡು ಪ್ರಶ್ನೆಗಳನ್ನು ಹಾಕಿ ಪದ್ಮವ್ಯೂಹ ರಚಿಸಿ, ಮಾತಿನ ಚಕ್ರತೀರ್ಥದಲ್ಲಿ ಅವರನ್ನು ಸಿಕ್ಕುಹಾಕಿಸಿ ಪಾಟೀಸವಾಲು ಮಾಡುವ ಪದ್ಧತಿಯನ್ನು ಅವರು ಮನೆಯಲ್ಲೂ ಪ್ರಯೋಗಿಸುತ್ತಿದ್ದರು. ಇದರಿಂದ ಮನೆಯಲ್ಲಿ ಕೂಡ ಅವರು ಸಿಡಿಸಿಡಿದು ಮಾತನಾಡುತ್ತಿದ್ದರು. ಎಲ್ಲರೂ ಅವರ ದೃಷ್ಟಿಯಲ್ಲಿ ಅಪರಾಧಿಗಳು —ಇಲ್ಲ, ಅಪರಾಧಿಯಾಗುವಂತಹವರೆ! ಇಂತಹ ತಂದೆಯ ಅಂಕೆಯಲ್ಲಿ ಬೆಳೆದುದೆ ಕಾರಣ, ಶಾಂತಳಿಗೂ ಮೊಂಡುತನ ಬಂದುದು. ತಂದೆ ರಾಮಸ್ವಾಮಿ ಹೀಗಾದರೆ ತಾಯಿ ಸಾವಿತ್ರಮ್ಮನವರದೆ ಬೇರೆ ತರಹ. ಅವರು ಎಲ್ಲ ವಿಷಯ ದಲ್ಲೂ ಏನಾದರೂ ಗೊಣಗಲೆ ಬೇಕು. ಚೆನ್ನಾಗಿರಲಿ, ಚೆನಾಗಿಲ್ಲದಿರಲಿ, ಗೊಣಗದಿದ್ದರೆ ಅವರಿಗೆ ತೃಪ್ತಿಯಿಲ್ಲ. ಊಟಕ್ಕೆ ಕುಳಿತಾಗ ಕೂಡ ಯಾರಾ ದರೂ ಅಡಿಗೆಯ ಮೇಲೆ ಸ್ವಲ್ಪ ಟೀಕೆ ಮಾಡುವುದಷ್ಟೆ ಕಾಯುತ್ತಿದ್ದರು. ಯಾವುದಕ್ಕಾದರೂ ಉಪ್ಪು ಸಾಲದು, ಹುಳಿ ಹೆಚ್ಚು, ಕಾರಕ್ಕೆ ಕೊಂಚ ಕೊತ್ತುಂಬರಿ ವಾಸನೆ ಹೆಚ್ಚಾಯಿತೆಂದು ಅಂದರೆ ಸಾಕು, ಪುರಾಣವನ್ನಾರಂಭಿಸಿ

ಬಿಡುತ್ತಿದ್ದರು. 'ನನಗೆ ಮಾಡಲು ಬರುವುದಿಲ್ಲ. ಆದರೆ ಹೀಗೆಯೆ ಇಷ್ಟು ವಯಸ್ಸು ಕಳೆದುಹೋಯಿತು. ಇನ್ನು ಮೇಲಾದರೂ ನಿಮ್ಮಿಂದ ಕಲಿತುಕೊಳ್ಳು ತ್ತೇನೆ' ಎನ್ನುತ್ತಿದ್ದರು. ಯಾರಾದರೂ ಅಡಿಗೆಯನ್ನು ಹೊಗಳಿದರೂ ಅವರಿಗೆ ತೃಪ್ತಿಯಿಲ್ಲ. 'ಏನೊ ಮಾಡಿದೀನಿ, ನನ್ನ ಕಾಲವೂ ಹೀಗೆಯೆ ಕಳೆದು ಹೋಯಿತು. ಅಡಿಗೆಯೊಂದು ಮಾಡಲು ಬರುತ್ತದೆ ಅಂತ ಈವತ್ತಾದರೂ ಒಪ್ಪಿಕೊಂಡಿರಲ್ಲ. ಹೋಗಲಿ ಬಿಡಿ, ಸಾಮಾನ್ಯವಾಗಿ ನಾನು ಚೆನ್ನಾಗಿ ಮಾಡಿ ದರೂ ನೀವೆಲ್ಲ ಒಪ್ಪುವುದಿಲ್ಲ' ಎಂದು ಗೊಣಗುತ್ತಿದ್ದರು. ತಮ್ಮನ್ನು ಕಂಡರೆ ಯಾರಿಗೂ ಆಗುವುದಿಲ್ಲ, ತಾವು ಬರಿಯ ದುಡಿತದ ಗಾಣದ ಎತ್ತಿನಂತೆ ಎನ್ನುವ ಭಾವನೆ ಅವರಲ್ಲಿ ಆಳವಾಗಿ ಮೂಡಿತ್ತು. ಹೀಗಾಗಿ ಅವರು ಏನಾದರೂ ಎಲ್ಲರ ವಿಷಯಕ್ಕೂ ಗೊಣಗಲೆಬೇಕು. ಅಂತಹ ತನ್ನ ತಾಯಿಗೆ ಈಗ ಹೇಗೆ ತಾನೆ ಹೇಳುವುದೆಂದು ಚಿಂತಿಸಿದಳು, ಶಾಂತ. ತಾನೇನು ಹೇಳುವುದಕ್ಕೂ ಮೊದಲು ತಾಯಿ ತನ್ನ ಅತ್ತೆಯ ಮನೆಯ ಬಗ್ಗೆ ಗೊಣಗುತ್ತಿದ್ದರು. ಮಗ ಳನ್ನು ಕಂಡರೆ ಅವರಿಗೆ ಪ್ರೀತಿಯಿಲ್ಲದಿರಲಿಲ್ಲ. ಆದರೆ ಎಲ್ಲರ ಬಗ್ಗೆ ವಿರೋಧಾಭಿ ಪ್ರಾಯ ತಾಳಿದಂತೆ ಅವಳ ವಿಷಯಕ್ಕೂ ಗೊಣಗುತ್ತಿದ್ದರು. ಶಾಂತ ಮೊದಲ ಬಾರಿ ಗಂಡನ ಮನೆಯಿಂದ ಬಂದಾಗಲೆ ಅವಳನ್ನು ಅವಳ ಗಂಡ ಕರೆದು ಕೊಂಡು ಬರಲಿಲ್ಲವೆಂದು ಬಾಯಿಗೆ ಬಂದಂತೆಲ್ಲ ಅಂದಿದ್ದರು. 'ಆರು ತಿಂಗಳ ಕಾಲ ಮನೆಗೆ ಕಳಿಸದೆ ನನ್ನ ಹೊಟ್ಟೆ ಉರಿಸಿದರು, ನಿಮ್ಮತ್ತೆ. ಅವರಿ ಗೇನು ನಮ್ಮ ಸಂಬಂಧ ಬೇಕಾಗಿದೆಯೊ ಇಲ್ಲವೊ? ಪಾಪ, ಎಷ್ಟು ಕಂದಿ ಹೋಗಿದ್ದೀಯೆ. ಅಲ್ಲಿ ಏನು ಕಷ್ಟವೊ?' ಅಂದಿದ್ದರು. ಆಗ ಶಾಂತ ತಾನೇ ಅತ್ತೆಯ ಪರವಾಗಿ ಮಾತನಾಡಿದ್ದಳು: 'ಅಲ್ಲಿ ನನಗೆ ಸುಖವಾಗಿಯೆ ಇದೆ, ಅಮ್ಮ. ಇಲ್ಲಿಯ ಹಾಗೆಯೆ ಅಲ್ಲಿಯೂ' ಎಂದಿದ್ದಳು. ಅವಳ ಈ ಮಾತಿಗೆ ಉತ್ತರವಾಗಿ ಸಾವಿತ್ರಮ್ಮ ಅವಳ ಮೇಲೆಯೆ ತಿರುಗಿದ್ದರು: 'ನಿಜಾನ್ನು. ಈಗಿನ ಕಾಲದ ಹುಡುಗಿಯರು ನೀವು. ನಮ್ಮ ಕಾಲದ ಹಾಗೆಯೆ! ಎಲ್ಲ ಜಾಣೆಯರು. ಅವರ ಪರವಾಗಿಯೆ ವಾದ ಮಾಡುತ್ತೀಯೆ. ಹೆತ್ತು ಹೊತ್ತು ಸಾಕಿ ಸಲಹಿದ ತಾಯಿಗಿಂತ, ಆರು ತಿಂಗಳ ಅತ್ತೆಯೆ ನಿನಗೆ ಹೆಚ್ಚು ಹಿತ ಅಲ್ಲವೆ! ಎಲ್ಲಾ ನನ್ನ ಕರ್ಮ. ನನಗೆ ಮಕ್ಕಳೆ ನನ್ನ ಶತ್ರುಗಳಾದರು' ಎಂದು ಗೊಣಗಿದ್ದರು, ಸಾವಿತ್ರಮ್ಮ. ಮತ್ತೆ ಕೊಂಚ ಹೊತ್ತು ಹೀಗೆಯೆ

ಗೊಣಗಾಟ ನಡೆದಿತ್ತು. ಆಗಲೆ ಹೀಗೆ ನಡೆದಾಗ, ಇನ್ನು ಈಗ ಒಂದೂವರೆ ವರುಷದ ಅನಂತರ ತಾನು ಹೀಗೆ ಬಂದುದು ಕಂಡು ತಾಯಿ ಇನ್ನೇನೆನ್ನುವರೊ ಎಂದು ಶಾಂತಳಿಗೆ ಯೋಚನೆಯಾಯಿತು. ಅಂದರೆ ತಾನು ಹೀಗೆ ಜಗಳ ಆಡಿ ಕೊಂಡು, ಹಟ ಮಾಡಿಕೊಂಡು ಮನೆ ಬಿಟ್ಟುಬಂದುದು ತಾಯಿಗೆ ತಿಳಿಯ ಬಾರದು, ತಂದೆಗೂ ತಿಳಿಯಕೂಡದು. ತಿಳಿದರೆ ಖಂಡಿತವಾಗಿಯೂ ಹಗರಣ ವಾಗುತ್ತದೆ. ತನ್ನ ಅತ್ತೆ, ಮಾವ, ಗಂಡ, ಮೈದುನ ಎಲ್ಲರನ್ನೂ ತಾಯಿ ಹಳಿಯುತ್ತಾರೆ, ತಂದೆ ಹೀನಾಮಾನವಾಗಿ ಬೈಯುತ್ತಾರೆ. ರೇಗಾಟದಲ್ಲಿ ತಂದೆ ಏನು ಮಾಡಲೂ ಹೇಸುವುದಿಲ್ಲ. ಆದ್ದರಿಂದ ನಿಜವಾದ ಸಂಗತಿಯನ್ನು ಮರೆ ಮಾಚಲೆಬೇಕು ಎಂದು ಶಾಂತ ತೀರ್ಮಾನಿಸಿಕೊಂಡಳು. ಆದರೆ ಒಮ್ಮೆಲೆ ಹೀಗೆ ಬಂದುದಕ್ಕೆ ತಾನೆ ಏನು ಕಾರಣ ಹೇಳುವುದು? ಸುಳ್ಳು ಹೇಳಿದರೂ ಸಿಕ್ಕಿಹಾಕಿಕೊಳ್ಳುವಂತಿರಬಾರದು. ಆಮೇಲೂ ಅಷ್ಟೆ. ಕೊಂಚವೂ ಐಬು ಕೊಡದಂತಿರಬೇಕು. ಇಲ್ಲದಿದ್ದರೆ ಎಲ್ಲರ ಮೇಲೂ ಸಿಡಿಲೆರಗಿದಂತೆ ತಂದೆಯ ಕೋಪ ಸಿಡಿದುಬೀಳುವುದು. ತಾನು ಮಾತಿನಲ್ಲಿ, ನಡೆಯಲ್ಲಿ ಹುಷಾರಾಗಿರ ಬೇಕು ಎಂದುಕೊಂಡಳು. ಮತ್ತೆ ಮನಸ್ಸು ಕುದಿಯಿತು. ಹೂಂ! ನಾನು ಹೀಗೆ ಹೊರಟುಬಂದುದು ಎಷ್ಟು ಅನರ್ಥಕ್ಕೆ ಕಾರಣ ಎಂದು ತನ್ನನ್ನು ತಾನೆ ಬೈದುಕೊಂಡಳು. ಅಲ್ಲದೆ ತನ್ನ ಯಜಮಾನರು ಊರಿನಲ್ಲಿ ಕೂಡ ಇರಲಿಲ್ಲ. ಅವರು ಬಂದಮೇಲೆ ತಾನು ಹೊರಟುಹೋದುದನ್ನು ಕೇಳಿ ಏನೆಂದುಕೊಳ್ಳು ವರೊ? ತನ್ನನ್ನು ಬಿಟ್ಟಿರಲಾರದ ಅವರು, ಜತೆಗೆ ತನ್ನನ್ನೆ ನೆರಳಿನಂತೆ ತಬ್ಬಿ ಕೊಂಡಿರುತ್ತಿದ್ದ ನಾದಿನಿ ವಸಂತು—ಪ್ರೀತಿಯ ಮೈದುನ—ವಾತ್ಸಲ್ಯ, ಅಕ್ಕರೆ ಗಳಿಂದ ನೋಡಿಕೊಳ್ಳುತ್ತಿದ್ದ ಅತ್ತೆಮಾವ—ಎಲ್ಲರನ್ನೂ ಬಿಟ್ಟುಬಂದು ಈಗ ಉಭಯಸಂಕಟಕ್ಕೆ ಸಿಕ್ಕಿಕೊಂಡೆನಲ್ಲ ಎಂದು ತನ್ನ ಅಸಹನೆಗೆ ಛೀಮಾರಿ ಹಾಕಿದಳು. ಹೀಗೆ ಮಾಡಬಾರದಾಗಿತ್ತು ಎಂದು ಅವಳ ಮನಸ್ಸಿಗೆ ಖಚಿತ ವಾಗಿತ್ತು. ಆದರೂ ಹಟ, ಅಭಿಮಾನ ಬಿಡಬೇಕಲ್ಲ. ಅಂತೂ ಕಣ್ಣಿನಲ್ಲಿ ಕಾಂತಿಗೆಟ್ಟು, ಮುಖ ಕಂದಿ, ಮನಸ್ಸು ನೊಂದು ಶಾಂತ ತವರುಮನೆಗೆ ಬಂದಳು.

ಹೊರಗಿನ ಸಣ್ಣ ಗೇಟನ್ನು ತೆಗೆದುಕೊಂಡು ಒಳಕ್ಕೆ ಕಾಲಿಟ್ಟಂತೆ ಮನೆಯ ಅಂಗಳದಲ್ಲಿ ತಾಯಿ ಯಾರೋ ನಾಲ್ಕೈದು ಜನರ ಜತೆಯಲ್ಲಿ ಕುಳಿತಿರುವುದು ಶಾಂತಳಿಗೆ ಕಾಣಿಸಿತು. ಗೇಟು ಕಿರ್ರೆಂದುದರಿಂದ ಅವರೆಲ್ಲ

ಈ ಕಡೆ ತಿರುಗಿ ನೋಡಿದರು. ಎಲ್ಲರೂ ತನ್ನ ಕಡೆ ನೋಡಿದಂತೆ ಶಾಂತಳಿಗೆ ಮನಸ್ಸು ಏನೇನೊ ಆಯಿತು. ಎಲ್ಲರೂ ಒಟ್ಟಿಗೆ ಕುಳಿತು ಏನೊ ಹರಟು ತ್ತಿದ್ದರು. ಆದರೆ ತಾನು ಬಂದುದನ್ನು ಅವರೆಲ್ಲ ಕಂಡಿದಾರೆ, ಮತ್ತೆ ಎಲ್ಲರೂ. ತಾನೊಬ್ಬಳೆ ಬಂದುದನ್ನೂ, ತನ್ನ ಸ್ಥಿತಿಯನ್ನೂ ನೋಡಿ ಏನೇನು ಊಹಿಸಿ ಕೊಳ್ಳುವರೊ. ಅಲ್ಲದೆ ಅವರೆಲ್ಲರಿಗೂ ಊಹೆ ಸಹಜವಾಗಿಯೆ ಬಂದ ಗುಣ. ಎರಡು ಗಳಿಗೆಯಲ್ಲಿಯೆ ಈ ಸಣ್ಣ ಊಹೆ ಗರಿಗೂಡಿ ರೆಕ್ಕೆ ಬಿಚ್ಚಿ ಹಾರಾಡು ವುದೆಂದೂ ಶಾಂತಳಿಗೆ ಗೊತ್ತು. ತನ್ನ ಬರವಿನ ವಿಷಯವಾಗಿ ಅವರೆಲ್ಲರೂ ನಾಲಗೆಯಾಡಿಸುವರೆಂಬುದು ಅವಳಿಗೆ ಖಚಿತವಾಗಿತ್ತು. ಅದನ್ನು ಅವರೆಲ್ಲರ ಹಸಿದ ಕಣ್ಣುಗಳಲ್ಲಿಯೆ ಅವಳು ಓದಿದಳು. ಅವರೆಡೆಯಲ್ಲಿ ಯಾರ ಗುಣ ಕ್ಕಾಗಲಿ, ಜೀವಕ್ಕಾಗಲಿ ಉಳಿಗಾಲವೆ ಇಲ್ಲ. ಎಲ್ಲರನ್ನೂ ಬಯಲಿಗೆಳೆದೆ ಎಳೆಯುವರು. ಇಲ್ಲದುದನ್ನು ಆಡುವರು. ಅವರು ಈ ಸಮಯದಲ್ಲಿ ಅಲ್ಲಿ ಇರುವುದು ತನಗೆ ಒಳ್ಳೆಯದಲ್ಲ. ಶಾಂತಳ ಮನಸ್ಸಿಗೆ ಕೆಡುಕೆನಿಸಿತು. ಎದೆ ಯೇನೊ ಗಾಬರಿಯಲ್ಲಿ ಡವಡವನೆ ಹೊಡೆದುಕೊಂಡಿತು. ಆದರೆ ಶಾಂತ ಸುಲಭವಾಗಿ ಧೈರ್ಯಗೆಡುವವಳಲ್ಲ. ಆಗಲಿ, ಆದುದೆಲ್ಲ ಆಗಲಿ, ಎದುರಿಸಲೆ ಬೇಕೆಂದು ತೀರ್ಮಾನಿಸಿ ಮುಂದೆ ಬಂದಳು. ಶಾಂತಳನ್ನು ಕಂಡು ಅವರ ತಾಯಿಗೆ ಬಹಳ ಸಂತೋಷವಾಯಿತು. ಆದರೆ ಅವಳು ಒಬ್ಬಳೆ ಬರಿಯ ಒಂದು ಕೈಚೀಲ ಹಿಡಿದುಕೊಂಡು ಬಂದುದು ಅವರಿಗೆ ಏನೊ ಚುಚ್ಚಿತು. ಕಾಗದ ಹಾಕದೆ ಇದ್ದಕ್ಕಿದ್ದಂತೆ ಇಳಿದ ಮಗಳನ್ನು ಹೇಗೆ ಮಾತನಾಡಿಸ ಬೇಕೊ—ಎಲ್ಲರೆದುರಿಗೂ, ಎಂದೊಮ್ಮೆ ತಡಕಾಡಿದರು. ಆದರೆ ಬಾಯಿ ತಾನಾಗಿಯೆ ನುಡಿಸಿತು: "ಈಗ ರೈಲಿನಲ್ಲಿಯೆ ಬಂದೆಯಾ, ಶಾಂತ?" ಎಂದು ಕೇಳಿದರು.

"ಹುಂ" ಎಂದು ಶಾಂತ ಒಳಕ್ಕೆ ಹೋಗಲನುವಾದಳು. ಆದರೆ ಎಲ್ಲರ ಕಣ್ಣುಗಳೂ ಕಿವಿಗಳೂ ತನ್ನ ಮೇಲೆ ಕೇಂದ್ರೀಕೃತವಾಗಿರುವುದರ ಅನುಭವ ದಲ್ಲಿ ಕಾಲು ತೊಡರಿತು.

"ಅಲ್ಲ, ಶಾಂತ, ಇದೇನು ಹೀಗೆ—ಬರ್ತೀನೆ ಅಂತ ಒಂದು ಕಾಗದ ಹಾಕಬೇಡವೆ?" ಎಂದರು ನೊಂದ ದನಿಯಲ್ಲಿ, ಸಾವಿತ್ರಮ್ಮ. ನಿಧಾನವಾಗಿ ಅವರ ದನಿ ಗೊಣಗಿಗೆ ಇಳಿಯುತ್ತಿತ್ತು.

" ಏನೊ ಹಾಕಲಿಲ್ಲ."

" ಚೆನ್ನಾಯ್ತು, ಹಾಕಿದ್ದರೆ ಆಗತಾ ಇರಲಿಲ್ಲವೆ? ಸದ್ಯ, ತಾಯಿತಂದೆ ಇದಾರೆ ಅಂತ ಈಗಲಾದರೂ ಜ್ಞಾಪಕಕ್ಕೆ ಬಂತಲ್ಲ. ಈಗಿನ ಕಾಲದಲ್ಲಿ ತವರು ಮನೆಯೆ ಬೇಕಿಲ್ಲ, ನೋಡಿ" ಎಂದು ಆರೋಪಣೆಯ ದನಿಯಲ್ಲಿ ಸಾವಿತ್ರಮ್ಮ ಅಂದರು.

ಅವರೆದುರಿಗೆ ಅಡ್ಡಡ್ಡವಾಗಿ ಕುಳಿತಿದ್ದ ದಪ್ಪ ದೇಹದ ದಪ್ಪ ದನಿಯ ಮುತ್ತೈದೆಯೊಬ್ಬರು " ಹೌದು ನೋಡಿ, ನಮ್ಮ ಕಾಲದಲ್ಲಿ ಹೀಗಿತ್ತೆ! ಹುಟ್ಟಿ ಬೆಳೆದ ಮನೆ ಅಂದರೆ ನಾವು ಹಗಲೂ ರಾತ್ರಿ ಹಂಬಲಿಸುತ್ತ ಇದ್ದೆವು. ಆದರೆ ಈಗ—ಗಂಡನ ಮನೆಗೆ ಹೋದ ಹೆಣ್ಣುಮಕ್ಕಳು ತಂದೆ, ತಾಯಿ, ತವರು ಎಲ್ಲ ಮರೆತುಬಿಡುತ್ತಾರೆ. ನಮ್ಮ ಹುಡುಗಿ—ಎರಡನೆಯವಳು—ಕ್ಲೋಸ್ ಪೇಟೆಗೆ ಕೊಟ್ಟಿರೋದು ಅವಳನ್ನ. ಆದರೆ ಮೂರು ವರ್ಷದಿಂದ ಈ ಕಡೆ ಸುಳಿದಿಲ್ಲ ನೋಡಿ" ಎಂದರು.

" ಯಾಕೆ—ನಿನ್ನ ಜತೇಲಿ ಯಾರೂ ಬರಲಿಲ್ಲವೆ?" ಎಂದು ಪಕ್ಕದಲ್ಲಿ ಕುಳಿತಿದ್ದ ಶಾರದಮ್ಮ ಕೇಳಿದರು. ಶಾಂತಳಿಗೆ ಅವರ ದನಿ ಚುಚ್ಚುಮಾತಿನಂತೆ ತೋರಿತು. ಇವರಿಗೇಕೆ ಇದೆಲ್ಲ, ಎಂದು ಮನಸ್ಸು ಸಿಡುಕಿತು. ಆದರೆ ಎಲ್ಲರ ಎದುರಿಗೆ ಏನೂ ಅನ್ನುವಂತಿಲ್ಲ. ಆಮೇಲೆ ಸಾಸಿವೆಕಾಳೆ ಶೇಷಪರ್ವತವಾಗುವುದೆಂದು ಅವಳಿಗೆ ಗೊತ್ತಿತ್ತು. ಶಾರದಮ್ಮನ ದನಿ ಕೂಡ ಕೊಂಚ ಗಂಡು ದನಿಯೆ. ಅವರಿಗೇನು ಉತ್ತರ ಕೊಡುವುದು ಎಂದು ಸುಮ್ಮನಿದ್ದಳು, ಶಾಂತ. ಆದರೆ ಸಾವಿತ್ರಮ್ಮ ಸುಮ್ಮನಿರಬೇಕಲ್ಲ. ಶಾಂತಳ ಜತೆಯಲ್ಲಿ ಗಂಡನ ಮನೆಯವರು ಯಾರೂ ಬರಲಿಲ್ಲವಲ್ಲ ಎಂದು ಮನಸ್ಸಿನಲ್ಲಿ ಆಕ್ರೋಶವಾಯಿತು.

" ಯಾಕೆ ಶಾಂತ, ನಿನ್ನ ಮೈದುನನಾದರೂ ಬರಬಹುದಾಗಿತ್ತಲ್ಲ" ಎಂದರು.

ಅವರ ಮಾತಿನಲ್ಲಿ ಯಾವ ವ್ಯಂಗ್ಯವೂ ಇರಲಿಲ್ಲ. ಆದರೆ ಸಿಡಿಮಿಡಿಗೊಂಡಿದ್ದ ಶಾಂತಳಿಗೆ ಮಾತ್ರ ಅಲ್ಲಿ ಕುಹಕ ಕಾಣಿಸಿತು. ಮೊದಲ ಬಾರಿ ಬಂದಾಗ ತನ್ನ ಮೈದುನನೆ ತನ್ನನ್ನು ಬಿಡಲು ಬಂದಿದ್ದುದನ್ನು ಎತ್ತಿ ಆಡುತ್ತಿದಾರೆ ತಾಯಿ ಅಂದುಕೊಂಡಳು. ಕಸವಿಸಿಗೊಂಡ ಮನಸ್ಸು ಕುದಿಯುತ್ತಿತ್ತು. ಹೃದಯ ಜ್ವಾಲಾಮುಖಿಯ ಮೇಲೆ ಕುಳಿತಂತೆ ಆಗಿತ್ತು. ಹೇಗೊ

ಸುಮ್ಮನಾದಳು. ತಾಯಿಯ ಮಾತಿಗೇನೂ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ. ಅವಳ ಮೌನವನ್ನು ಭೇದಿಸಲು ಅವರಾರಿಗೂ ಸಾಧ್ಯವಿಲ್ಲವೆಂದು ಶಾಂತ ತಿಳಿದುಕೊಂಡಿದ್ದಳು. ಆದರೆ ಅದು ತಪ್ಪು ತಿಳಿವಳಿಕೆಯೆಂದು ಗೊತ್ತಾಗಿಹೋಯಿತು. ಅಲ್ಲಿ ಕುಳಿತಿದ್ದವರೆಲ್ಲ ಅವಳ ಈ ವರ್ತನಕ್ಕೆ ವಿಪರೀತ ವಾಗಿಯೆ ವ್ಯಾಖ್ಯಾನ ಬೆಳೆಸಿದರು. ಹಸಿದು ದಣಿದ ಮೈ, ಕಾದ ತಲೆ, ಕುದಿಯುತ್ತಿದ್ದ ಪರಿತಾಪ ದುಃಖಗಳಲ್ಲಿ ಶಾಂತಳಿಗೆ ಇದೆಲ್ಲ ಬೇಕಾಗಿರಲಿಲ್ಲ. ಮನೆಗೆ ಬಂದ ಮಗಳನ್ನು ಇಷ್ಟು ಮಾತಿನಲ್ಲೆ ತನ್ನ ತಾಯಿ ಮುಗಿಸಿಬಿಡು ವರೊ, ಇಲ್ಲ ಎಲ್ಲರನ್ನು ಬಿಟ್ಟು ತನ್ನನ್ನು ವಿಚಾರಿಸಿಕೊಳ್ಳುವರೊ ಎಂದು ಕೊಂಡಳು. ಆದರೆ ಅಲ್ಲಿ ಬಂದು ಕುಳಿತಿದ್ದವರಾರೂ ಏಳುವ ಹಾಗೆಯೆ ತೋರಲಿಲ್ಲ. ಎಲ್ಲರೂ ತಮತಮಗೆ ತೋರಿದಂತೆ ಮಾತು ಬೆಳೆಸಿದರು.

"ಹೋಗಲಿ ಬಿಡಿ, ಪಾಪ, ಯಾರೂ ಬರಲಿಲ್ಲವೊ ಏನೊ" ಎಂದರು ಶಾರದಮ್ಮ.

"ಹಾಗಂದರೇನು, ಶಾರದಮ್ಮನೋರೆ. ಹೆಂಡತಿಯನ್ನು ತವರುಮನೆಗೆ ಕರೆದುಕೊಂಡು ಬಂದು ಬಿಟ್ಟುಹೋಗಬೇಡವೆ ಅಳಿಯ ಅಂತ ಅನ್ನಿಸಿಕೊಂಡ ವರು. ಬಹಳ ಚೆನ್ನಾಗಿದೆ. ನಮ್ಮ ಮನೆಯಲ್ಲಿ ನೋಡಿ, ಪ್ರತಿಯೊಂದು ಸಾರಿ ನನ್ನ ಮೊದಲ ಮಗಳು ರಾಧಾ ಬರುವಾಗಲೂ ಅವಳ ಯಜಮಾನರು ಕರೆದು ಕೊಂಡು ಬರುತ್ತಾರೆ. ಎರಡು ದಿನ ಇಲ್ಲೇ ಇದ್ದು ಹೋಗುತ್ತಾರೆ. ಮೂರನೆ ಯವಳು ಸುಮಿತ್ರಾ ಬರಬೇಕೆಂದರೆ ಗಂಡನನ್ನ ಬಿಟ್ಟು ಈ ಕಡೆ ಕಾಲಿಡೋದೆ ಇಲ್ಲ. ಅವಳಿರೋದು ಮಲ್ಲೇಶ್ವರದಲ್ಲಿ. ಹೆಣ್ಣುಮಗಳನ್ನು ಊರಿಂದ ಊರಿಗೆ ಒಬ್ಬಳನ್ನೆ ಕಳಿಸೋದು ಅಂದರೇನು!" ಎಂದರು ಆ ಮುತ್ತೈದೆ.

"ಏನೊ—ಅವರವರ ಅನುಕೂಲ ಹೇಗಿದೆಯೊ ಹಾಗೆ" ಎಂದರು ಮತ್ತೊಬ್ಬರು ಕೀಚುದನಿಯಲ್ಲಿ.

ಶಾಂತ ಆ ಕಡೆ ತಿರುಗಿ ನೋಡಿದಳು. ಆಕೆಯನ್ನು ಅವಳು ನೋಡಿ ದುದು ಇದೆ ಮೊದಲು. ಉಳಿದವರೆಲ್ಲರೂ ಹಿಂದಿನಿಂದ ಅಲ್ಲಿಯೆ ಇದ್ದವರು. ಆದರೆ ಇವರೊಬ್ಬರು ಮಾತ್ರ ಹೊಸಬರು.

"ಹೋಗಲಿ ಬಿಡಿ, ಶಂಕರಮ್ಮನೋರೆ. ನಮಗೆ ಯಾಕೆ" ಎಂದರು ಶಾರದಮ್ಮ.

ಶಾಂತಳಿಗೆ ಇನ್ನು ಅಲ್ಲಿ ನಿಲ್ಲಲಾಗಲಿಲ್ಲ. ಒಳಕ್ಕೆ ಹೊರಟುಬಿಟ್ಟಳು. ಸಾವಿತ್ರಮ್ಮನವರೂ ಎದ್ದು ನಿಂತು "ತಾಳಿ, ಕುಂಕುಮ ತರತೀನಿ" ಎಂದರು. ಎಲ್ಲರಿಗೂ ಇನ್ನು ತಾವು ಹೊರಡಬೇಕೆಂಬ ಸೂಚನೆ ಹಿತವಾಗಲಿಲ್ಲ. ಏನು ಅಸಂಗತವಾಗಿದೆಯೊ, ಏನು ಹಗರಣವಾಗುತ್ತದೊ ನೋಡಬೇಕು, ಎಂದು ಕುಳಿತಿದ್ದ ಶಂಕರಮ್ಮನವರಿಗಂತೂ ಇದರಿಂದ ವಿಪರೀತ ನಿರಾಶೆಯಾಯಿತು. ಆದರೆ ಈಗ ಹೊರಡದೆ ವಿಧಿಯಿಲ್ಲ. ಆದರೇನು ಈಗಲ್ಲದಿದ್ದರೆ ಆಮೇಲಾದರೂ ತನುಗೆ ಎಲ್ಲವೂ ತಿಳಿಯದೆ ಹೋದೀತೆ—ಎಂದು ತಮ್ಮ ಕುತೂಹಲವನ್ನು ಅದುಮಿಕೊಂಡು ಹೊರಟರು.

ಅವರೆಲ್ಲ ಹೊರಗೆ ಏನು ಬೇಕಾದರೂ ಅಂದುಕೊಳ್ಳಲಿ, ಆದರೆ ತಾಯಿ ಮಾತ್ರ ಅವರೆಲ್ಲರೆದುರಿಗೂ ತನ್ನ ಅತ್ತೆಯ ಮನೆಯವರ ಮೇಲೆ ಗೊಣಗಾಟವನ್ನು ಆರಂಭಿಸಲಿಲ್ಲವಲ್ಲ ಎಂದು ಶಾಂತಳಿಗೆ ಕೊಂಚ ಸಮಾಧಾನ. ಅವರೆಲ್ಲ ಹೋದಮೇಲೆ ಬೀದಿಯ ಬಾಗಿಲು ಹಾಕಿಕೊಂಡು ಸಾವಿತ್ರಮ್ಮನವರು ಒಳಕ್ಕೆ ಬಂದರು.

ಶಾಂತ ತನ್ನ ತಂದೆಯ ರೂಮಿನ ಪಕ್ಕದ ರೂಮಿನೊಳಕ್ಕೆ ಕಾಲಿಟ್ಟಾಗ ತೊಟ್ಟಿಲು ಕಣ್ಣಿಗೆ ಬಿತ್ತು. ಅಲ್ಲಿಯೆ ಚಾಪೆಯ ಮೇಲೆ ಸೀರೆ ಗುಡ್ಡೆಯೊಂದು ಬಿದ್ದಿತ್ತು. ಮೂಲೆಮೂಲೆಗೊಂದರಂತೆ ಮಗುವಿನ ಆಟದ ಸಾಮಾನುಗಳು ಬಿದ್ದಿದ್ದವು. ಹಗ್ಗದ ಮೇಲೂ ಸೀರೆ, ರವಕೆ, ಬಟ್ಟೆಗಳು ಇದ್ದವು. ತನ್ನ ಚೀಲವನ್ನು ಅಲ್ಲಿಯೆ ಇಟ್ಟು ಹೊರಕ್ಕೆ ಕಾಲಿಡುತ್ತಿದ್ದಂತೆ ತಾಯಿ ಒಳಕ್ಕೆ ಬಂದರು.

"ಅಣ್ಣ ಬಂದಿದ್ದಾನೆಯೆ ?" ಎಂದಳು ಶಾಂತ.

"ಇಲ್ಲ. ಲೀಲಾ, ಮಗು ಇಬ್ಬರೆ ಬಂದಿದ್ದಾರೆ. ಅವನಿಗೆ ಹಾಸನಕ್ಕೆ ವರ್ಗವಾಗಿದೆಯಂತೆ. ಅಲ್ಲಿ ಹೋಗಿ ಮನೆಗಿನೆ ನೋಡಬೇಕು. ಆದರೆ ಈಗ ಈ ವರ್ಷದ ಕೊನೆಯಲ್ಲಿ ಯಾಕೆ, ಅಂದುಕೊಂಡ. ಅಂತೂ ರಜಾ ಮುಗಿದ ಮೇಲೆ ಮನೆ ಮಾಡುವುದು. ಆದರೆ ಇವರನ್ನೆಲ್ಲ ಹಾಗೆಯೆ ಒಬ್ಬೊಂಟಿಯಾಗಿ ಬಿಡೋದಕಾಗುತ್ತೆಯೆ ? ಅದಕ್ಕೋಸ್ಕರ ಮೊನ್ನೆ ಬಂದು ಲೀಲಾನ ಬಿಟ್ಟುಹೋದ. ಅವನೂ ಈವತ್ತು ಬೆಳಿಗ್ಗೆ ಹೋದ. ಏನು ಸರ್ಕಾರದವರೊ. ವರ್ಷದ ಕೊನೆಯಲ್ಲಿ ಈಗ ವರ್ಗಮಾಡುತ್ತಾರೆ. ಎಲ್ಲಂದರೆ ಅಲ್ಲಿಗೆ ಎಸೆದು

ಬಿಡ್ತಾರೆ. ಹೇಳೋವರಿಲ್ಲ, ಕೇಳೋವರಿಲ್ಲ. ಪಾಡು ಪಡೋವರಿಗೆ ಗೊತ್ತು ಅದರ ಕಷ್ಟ" ಎಂದರು ಸಾವಿತ್ರಮ್ಮ.

"ಅತ್ತಿಗೆ ಎಲ್ಲಿ? ಮನೆಯಲ್ಲಿದ್ದ ಹಾಗಿಲ್ಲ" ಎಂದಳು ಶಾಂತ.

"ಮಗು ಯಾಕೊ ಬಹಳ ಅಳತಾ ಇತ್ತು. ಸುತ್ತಾಡಿಸಿಕೊಂಡು ಬರತೀನಿ ಅಂತ ಈಗಿನ್ನೂ ಹೋದಳು. ಇನ್ನೇನು ಬರತಾಳೆ" ಎಂದರು ಸಾವಿತ್ರಮ್ಮ.

ಶಾಂತ ಬಚ್ಚಲುಮನೆಯ ಕಡೆಗೆ ಹೊರಟಳು. ಸಾವಿತ್ರಮ್ಮನವರು ಅದನ್ನು ನೋಡಿ, "ಕಾಫಿ ಗೀಫಿ ಆಯಿತೇನೆ—ಬಹಳ ತೆಗೆದುಹೋಗಿದೀಯಲ್ಲೆ. ಅಲ್ಲಿ ಏನು ತೊಂದರೆಯೊ ಏನೊ" ಎಂದರು. ಮಗಳ ಮುಖ ಕಂದಿತ್ತು. ಶಾಲೆ ಬಿಟ್ಟ ಹುಡುಗರಂತೆ ತಲೆಗೂದಲೆಲ್ಲ ಮೂರೂ ಕಡೆ ಕುಣಿಯುತ್ತಿತ್ತು. ಸಪ್ಪೆಯಾಗಿದ್ದ ಮಗಳ ಮಾತು ಕೂಡ ಸಣ್ಣಾಗಿತ್ತು. ಪ್ರಯಾಣದ ಆಯಾಸವೆಂದುಕೊಂಡರು.

"ಕೊಂಚ ಕಾಫಿ ಮಾಡಮ್ಮ? ಬಹಳ ಬೇಜಾರಾಗಿದೆ—ಈ ರೈಲು ಪ್ರಯಾಣ" ಎಂದಳು ಶಾಂತ.

"ಏನು ರೈಲುಗಳೊ" ಎಂದು ಗೊಣಗುತ್ತ ಸಾವಿತ್ರಮ್ಮ ಅಡಿಗೆ ಮನೆಗೆ ಹೊರಟರು. ಒಲೆ ಹೊತ್ತಿಸಬೇಕಾಗಿರಲಿಲ್ಲ, ಅಗ್ಗಿಷ್ಟಿಕೆಯಲ್ಲಿ ಕೆಂಡ ಇತ್ತು. ಸ್ವಲ್ಪ ಹೊತ್ತಿಗೆ ಮುಂಚೆ ಅವರ ಯಜಮಾನರು ಕೋರ್ಟಿನಿಂದ ಬಂದು, ಕಾಫಿ ಕುಡಿದು, ಸ್ನೇಹಿತರ ಜತೆಗೆ ಹೋಗಿದ್ದರು. ಆ ಒಲೆಯ ಮೇಲೆ ಅನ್ನಕ್ಕೆಂದು ನೀರಿಟ್ಟಿದ್ದರು. ಈಗ ಅದರಲ್ಲೆ ಕಾಫಿಗೆ ಹಾಕಿದರಾಯಿತೆಂದುಕೊಂಡು ಪುಡಿ ಸಕ್ಕರೆಯನ್ನು ಲೋಟಕ್ಕೆ ಹಾಕುವ ವೇಳೆಗೆ ಶಾಂತ ಬಚ್ಚಲುಮನೆಯಿಂದ ಬಂದಳು.

"ನಿಮ್ಮ ಮನೆಯಲ್ಲಿ ಎಲ್ಲ ಸೌಖ್ಯವೇನೆ—ನಿನ್ನ ಯಜಮಾನರು?" ಎಂದರು ಸಾವಿತ್ರಮ್ಮನವರು.

"ಹೊಂ" ಎನ್ನುತ್ತ ನಿಟ್ಟುಸಿರು ಬಿಟ್ಟು ಶಾಂತ ಗೋಡೆಗೊರಗಿಕೊಂಡು ಕುಳಿತಳು. ಈ ತನಕ ಹುದುಗಿದ್ದ ಹಸಿವು, ಈಗ ಮತ್ತೆ ಚುರುಗುಟ್ಟಲಾರಂಭಿಸಿತು. ಆದರೆ ತಾಯಿಗೆ ಏನೆಂದು ಹೇಗೆ ಹೇಳುವುದು? ತಾನು ಊಟ ಮಾಡಿಲ್ಲ. ಆಗಲಿ, ಈಗ ಕಾಫಿಯಷ್ಟು ಕುಡಿಯುವುದು. ಆಮೇಲೆ ರಾತ್ರಿಗೆ

ಊಟವೆಂದು ಸಮಾಧಾನಪಟ್ಟುಕೊಳ್ಳಲು ಪ್ರಯತ್ನಿಸಿದಳು. ಆದರೆ ಹಸಿವೆ ಕೇಳಲೊಲ್ಲದು. ವಿಲವಿಲನೆ ಒದ್ದಾಡುತ್ತ ಹಾಗೆಯೆ ಕುಳಿತಿದ್ದಳು. ಅಡಿಗೆ ಮನೆಯ ಮೂಲೆಯಲ್ಲಿಟ್ಟ ಮುಸುರೆಯ ಪಾತ್ರೆಯನ್ನು ನೋಡುತ್ತಿದ್ದಂತೆ ಹಸಿವೆ ಇನ್ನೂ ಹೆಚ್ಚಿತು. ಏನು ಮಾಡಿದರೂ ತಡೆಯಲಾಗಲಿಲ್ಲ. ಸಾವಿತ್ರಮ್ಮ ನವರು ಇದೊಂದನ್ನೂ ಕಾಣರು.

"ಅಲ್ಲವೆ, ನಿನ್ನನ್ನು ಒಬ್ಬಳನ್ನೆ ಕಳಿಸಿಬಿಟ್ಟರಲ್ಲ! ನಿನ್ನ ಯಜಮಾನ ರಾಗಲಿ, ನಿನ್ನ ಮೈದುನನಾಗಲಿ ಬರಬಾರದಾಗಿತ್ತೆ ?" ಎಂದರು.

ಶಾಂತಳ ಹೊಟ್ಟೆಯ ಕುದಿತ ಹೆಚ್ಚಿತು. ಮಾತಿಲ್ಲದೆ ಸುಮ್ಮನೆ ಕುಳಿ ತಿದ್ದಳು. ಸಾವಿತ್ರಮ್ಮನವರು ಮತ್ತೆ,

"ಏನೋಮ್ಮ, ಅಷ್ಟು ಕೂಡ ತಿಳಿಯಬೇಡವೆ ನಿಮ್ಮ ಅತ್ತೆಗೆ. ಹೀಗೆ ನಡುಹಗಲಿನಲ್ಲಿ ಕಳಿಸಿದಾರಲ್ಲ" ಎಂದರು.

"ಅವರೇನು ಮಾಡತಾರಮ್ಮ. ನಾನೇ ಹೊರಟುಬಂದೆ" ಎಂದು ದುಡುಕಿ ಅಂದುಬಿಟ್ಟಳು ಶಾಂತ.

"ಅಂದರೆ—ಅವರು ಯಾರೂ ಇರಲಿಲ್ಲವೇನು ? ಸೊಸೆ ಅಂದರೆ ಅಷ್ಟು ಅಲಕ್ಷ್ಯ !"

"ಅಮ್ಮ, ಹಾಗೆಲ್ಲ ಅನ್ನಬೇಡ, ಅಮ್ಮ. ನನ್ನನ್ನು ಎಷ್ಟೊ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು, ಮಗಳಿಗಿಂತಲೂ ಹೆಚ್ಚಿನ ಪ್ರೀತಿಯಿಂದ. ಈಗಲೂ ಅವರು ಹೋಗಬೇಡ ಅಂದರು" ಎಂದಳು.

"ಅನ್ನದೆ ಮತ್ತಿನ್ನೇನು ಮಾಡತಾರೆ ಹೇಳು" ಎನ್ನುತ್ತ ಕಾಫಿಯ ಲೋಟವನ್ನು ಶಾಂತಳ ಮುಂದಿಟ್ಟರು. ಬಿಸಿ ಕಾಫಿಯ ವಾಸನೆ ಮೂಗಿಗೆ ತಾಕಿದಂತೆ ಶಾಂತ ಹಸಿವಿನಿಂದ ಚಡಪಡಿಸಿದಳು. ಕೈಗೆತ್ತಿಕೊಂಡು ಬಿಸಿ ಕಾಫಿಯನ್ನು ಬೊಟ್ಟುಬೊಟ್ಟಾಗಿ ಚಪ್ಪರಿಸಿದಂತೆ ಮನಸ್ಸಿಗೆ ಸಮಾಧಾನ ವಾಯಿತು. ಮೆಲ್ಲನೆ ಕಾಫಿಯನ್ನು ಗುಟುಕರಿಸುತ್ತ ಕುಳಿತಳು. ಕಣ್ಣಿನಲ್ಲಿ ತಾನೆತಾನಾಗಿ ನೀರು ಬಂದಿತು.

ಸಾವಿತ್ರಮ್ಮನವರು ಮಾತಿನಲ್ಲಿ ಮಗಳ ಮುಖದ ಕಡೆ ನೋಡಲಿಲ್ಲ. ನೋಡಿದ್ದರೆ ಗಾಬರಿಯಾಗುತ್ತಿದ್ದರೊ ಏನೊ. ಆದರೆ ಆಗ ಅವರು ತಮ್ಮ ಯೋಚನೆಯಲ್ಲಿಯೆ ಮಗ್ನರಾಗಿದ್ದರು.

"ಹೂಂ! ಹೋಗಬೇಡ ಅನ್ನದೆ ಇನ್ನೇನು ಮಾಡತಾರೆ. ಹೆಣ್ಣು ಹೆತ್ತು ಬೇರೆಯುವರ ಮನೆಗೆ ಕೊಟ್ಟದ್ದರೆ ತಾನೆ ಕರುಳು ಚುರುಕೆನ್ನುವುದು. ಒಂದೂವರೆ ವರ್ಷವಾಯಿತು, ನೀನು ಈ ಕಡೆ ತಲೆಹಾಕಿ. ಯಾಕೆ ಕಳಿಸು ತ್ತಾರೆ ಹೇಳು? ಅಲ್ಲಿ ಸೇವೆಗೆ ಬೇಡವೆ? ನಿನ್ನ ಗಂಡನೂ ಅದು ಹೇಗೆ ತಾನೆ ಸುಮ್ಮನಿದ್ದಾರೊ. ಆ ನಾದಿನಿಗೆ ಮದುವೆಯಾದ ದಿನದಿಂದಲೆ ನಿನ್ನ ಸೇವೆ ಆರಂಭ. ಇನ್ನು ಅವನೊಬ್ಬ ಮೈದುನ! ಅತ್ತೆ ಮಾವ ಎಲ್ಲರಿಗೂ ಸೇವೆ ಮಾಡಬೇಡವೆ—ದುಡಿಯಬೇಡವೆ. ಅದಕ್ಕೆ ತಾನೆ ನಾವು ಹೆಣ್ಣು ಹೆತ್ತು ಕೊಟ್ಟುದು" ಎಂದರು.

"ಅಮ್ಮ, ನೀನು ಅವರನ್ನು ಹಾಗೆಲ್ಲ ಅನ್ನಬೇಡ, ಅಮ್ಮ. ನನಗೆ ಅಲ್ಲಿ ಯಾವ ರೀತಿಯ ಕಷ್ಟವೂ ಇಲ್ಲ. ಇಲ್ಲಿಗಿಂತಲೂ ಸುಖವೆ ಇದೆ" ಎಂದಳು ಶಾಂತ.

"ಹೌದಮ್ಮ, ನಿನಗೆ ಇಲ್ಲಿ ತಾನೆ ಕಷ್ಟ. ನಾವು ನಿನಗೆ ಎಷ್ಟು ತೊಂದರೆ ಕೊಟ್ಟಿವೊ?"

"ಹಾಗಲ್ಲಮ್ಮ, ನಾನು ಹೇಳಿದ್ದು. ಅಲ್ಲಿ ಯಾವ ರೀತಿಯಲ್ಲೂ ಕಷ್ಟವಿಲ್ಲ ಅಂತ ಹೇಳಿದೆ ಅಷ್ಟೆ" ಎಂದಳು ಶಾಂತ ತಪ್ಪು ಮಾಡಿದವಳಂತೆ.

ದೇವರಿಗೆ ದೀಪ ಹಚ್ಚಲು ಸಾವಿತ್ರಮ್ಮ ಕಣ್ಣೊರಸಿಕೊಳ್ಳುತ್ತ ಎದ್ದರು. ಶಾಂತಳೂ ಕಾಫಿಯ ಲೋಟ ಕೆಳಗಿಟ್ಟು ಎದ್ದಳು. ಮೌನ—ಎದೆಯ ಮೇಲೆ ಭಾರ ಹೇರಿಸಿದಂತಾಯಿತು, ಇಬ್ಬರಿಗೂ.

ದೇವರಿಗೆ ದೀಪ ಹಚ್ಚಿಟ್ಟು, ಹಜಾರದ ದೀಪ ಹಾಕಿ "ಮುಚ್ಚಂಜೆ ಆಯಿತು" ಎನ್ನುತ್ತ ಬೀದಿಯ ಬಾಗಿಲನ್ನು ತೆಗೆದರು ಸಾವಿತ್ರಮ್ಮ. ಶಾಂತಳ ಮನಸ್ಸಿಗೆ ಬಹಳ ಬೇಸರವಾಗಿತ್ತು. ಎಲ್ಲಿಯಾದರೂ ಒಂದು ಕಡೆ ಕುಳಿತು ಗಳಗಳನೆ ಅತ್ತುಬಿಡೋಣವೆನಿಸಿತು. ಅಷ್ಟರಲ್ಲಿಯೆ ಮಗುವನ್ನೆತ್ತಿ ಕೊಂಡು ಅತ್ತಿಗೆ ಲೀಲಾ ಒಳಕ್ಕೆ ಬಂದಳು.

ಲೀಲಾ ಶಾಂತಳ ಸಮವಯಸ್ಕಳು. ಶಾಂತಳ ಮದುವೆಗೆ ನಾಲ್ಕಾರು ತಿಂಗಳ ಮೊದಲು ಮನೆಗೆ ಬಂದಿದ್ದಳು. ಶಾಂತ, ಲೀಲಾ ಇಬ್ಬರೂ ಬಹಳ ಹೊಂದಿಕೊಂಡಿದ್ದರು. ಲೀಲಾ ಶಾಂತಳನ್ನು ತನ್ನ ಜತೆಗಾತಿ, ಸ್ನೇಹಿತೆಯೆಂದೆ ತಿಳಿದುಕೊಂಡಿದ್ದಳು. ಲೀಲಾ ಶಾಂತಳನ್ನು ನೋಡಿ ಬಹಳ ದಿನವಾಗಿತ್ತು.

ಶಾಂತ ಮದುವೆಯಾಗಿ ತನ್ನ ಗಂಡನ ಮನೆಗೆ ಹೋದಮೇಲೆ ಲೀಲಾ ಅವಳನ್ನು ನೋಡಿಯೆ ಇರಲಿಲ್ಲ. ಶಾಂತಳ ಮದುವೆಯಾಗುವ ಹೊತ್ತಿಗೆ ರಾಜಣ್ಣನಿಗೆ ಚಿತ್ರದುರ್ಗದಲ್ಲಿ ಕೆಲಸವಾಗುವ ಸೂಚನೆಯಿತ್ತು. ಕೆಲಸವೂ ಒಂದೆರಡು ತಿಂಗಳಲ್ಲೆ ಆಯಿತು. ಶಾಂತಳನ್ನು ಗಂಡನ ಮನೆಗೆ ಕಳಿಸುವ ಶಾಸ್ತ್ರಕ್ಕೆ ಲೀಲಾ, ರಾಜಣ್ಣ ಚಿತ್ರದುರ್ಗದಿಂದ ಬಂದಿದ್ದರು. ಆಮೇಲೆ ಶಾಂತ ಅಲ್ಲಿಗೆ ಬಂದಿದ್ದಾಗ ಲೀಲಾ ಚಿತ್ರದುರ್ಗದಲ್ಲೆ ಇದ್ದಳು. ಆಮೇಲೆ ಈ ಮಗುವಾದಾಗ ತಾಯಿಯ ಮನೆ. ಮತ್ತೆ ಎರಡು ದಿನಕ್ಕಾಗಿ ಅತ್ತೆಯ ಮನೆಗೆ ಬಂದು, ತಿರುಗಿ ಗಂಡನ ಜತೆಗೆ ಚಿತ್ರದುರ್ಗಕ್ಕೆ ಹೊರಟುಹೋಗಿದ್ದಳು. ಈಗಲೆ ಬಂದುದು. ಶಾಂತಳನ್ನು ಕಂಡು ಅವಳಿಗೆ ಬಹಳ ಸಂತೋಷವಾಯಿತು.

" ಶಾಂತ, ಯಾವಾಗ ಬಂದೆ ? " ಎಂದಳು ನಗುತ್ತ.

" ಈಗ ಬಂದೆ ಅತ್ತಿಗೆ. ನೀನೂ ಮೊನ್ನೆ ಬಂದೆಯಂತೆ, ಅಮ್ಮ ಹೇಳಿದಳು " ಎಂದಳು ಶಾಂತ.

ಲೀಲಾ ಮಗುವನ್ನು ಮುದ್ದಿಡುತ್ತ " ಹೂಂ, ಅವರು ಈವತ್ತು ಬೆಳಿಗ್ಗೆ ಊರಿಗೆ ಹೋದರು. ಏಳೆಂಟು ದಿನಕ್ಕೆ ರಜಾ ಬರುತ್ತೆ. ಆಮೇಲೆ ಇಲ್ಲೆ ರಜಾ ಕಳೆದುಕೊಂಡು ಮುಂದಿನ ಏರ್ಪಾಡು ಮಾಡುವುದು. ಏನೋಮ್ಮ, ಈ ಸಮಯದಲ್ಲಿ ವರ್ಗ ಮಾಡಿಬಿಡುತ್ತಾರೆ. ನಮ್ಮ ತಾಪತ್ರಯ ಕೇಳುವವರು ಯಾರು ? " ಎಂದಳು.

ಶಾಂತ ಮಗುವನ್ನು ನೋಡುತ್ತ " ಎಷ್ಟು ತಿಂಗಳು, ಅತ್ತಿಗೆ—ಹತ್ತು ತಿಂಗಳಾಯಿತು, ಅಲ್ಲವೆ ? " ಎಂದು ಮಗುವನ್ನೆತ್ತಿಕೊಳ್ಳಲು ಕೈ ಮುಂದೆ ಚಾಚಿದಳು.

" ಹತ್ತು ತಿಂಗಳೇನು, ಒಂದು ವರ್ಷದ ಮೇಲೆ ಒಂದು ತಿಂಗಳು. ಈಚೆಗೆ ಬಹಳ ತೆಗೆದುಹೋಗಿದೆ. ಹತ್ತು ಹದಿನೈದು ದಿನದಿಂದ ಯಾಕೊ ಮೈಗೆ ಚೆನ್ನಾಗಿಲ್ಲ. ಯಾವಾಗ ನೋಡಿದರೂ ಆಡತಾ ಇರತಿದ್ದ ಮಗು ಈಗ ಅಳತಾ ಇರುತ್ತೆ " ಎಂದು ಮಗುವನ್ನು ಮುಂದೆ ನೀಡಿದಳು. ಮಗು ಹೊಸ ಮುಖ ಕಂಡು, ಶಾಂತಳಿಂದ ಆ ಕಡೆ ಮುಖ ತಿರುಗಿಸಿಕೊಂಡು ತಾಯಿಯನ್ನು ಗಟ್ಟಿಯಾಗಿ ತಬ್ಬಿಕೊಂಡು ಅಳಲಾರಂಭಿಸಿತು.

" ಬೇಡಮ್ಮ, ಬೇಡ. ಅಳಬೇಡಮ್ಮ. ಹೊಸ ಜಾಗ, ಇನ್ನೂ ಹೊಂದಿ

ಕೊಂಡಿಲ್ಲ. ಅಲ್ಲದೆ, ಹೊಸ ಮುಖ, ನೋಡು" ಎಂದಳು ಲೀಲಾ.

"ಇನ್ನೆರಡು ದಿನಕ್ಕೆ ಸರಿಹೋಗುತ್ತೆ" ಎಂದಳು ಶಾಂತ.

"ಇದೇನು—ನೀನು ಬರುತ್ತೀಯ ಅಂತ ಅತ್ತೆ ಏನೂ ಹೇಳಲಿಲ್ಲ. ಕಾಗದ ಕೂಡ ಹಾಕಬೇಡವೆ?"

ಮತ್ತೆ ಎಲ್ಲ ಆರಂಭ ಮಾಡಬೇಕಲ್ಲ ಎಂದು ಶಾಂತಳ ಮನಸ್ಸು ಬೇಸರ ಪಟ್ಟುಕೊಂಡಿತು. ಆದರೂ ಬೆಂಕಿಯಲ್ಲಿ ಹಾಯಲೆಬೇಕು!

"ಏನೊ ಬರಿಯಲಿಲ್ಲ, ಹಾಗೆ ಬಂದುಬಿಟ್ಟೆ."

"ಒಬ್ಬಳೆ ಬಂದೆಯೊ—ಇಲ್ಲ, ನಿಮ್ಮ ಯಜಮಾನರೂ ಬಂದಿದಾರೊ ಜತೆಗೆ?"

"ಜತೆಗೂ ಇಲ್ಲ, ಏನೂ ಇಲ್ಲ. ಯಾಕೆ ಬರತಾರೆ ಹೇಳು? ಅಷ್ಟೊಂದು ಲಕ್ಷ್ಯವಿರಬೇಕಲ್ಲ" ಎಂದರು ಸಾವಿತ್ರಮ್ಮ ಒಳಗಿನಿಂದಲೆ.

ಶಾಂತಳ ದುಃಖ ಹೆಚ್ಚಾಗಿ, ಕಣ್ಣಲ್ಲಿ ನೀರು ಮೂಡಿತು.

"ಯಾಕೆ ಶಾಂತ—ಯಾರೂ ಬರಲಿಲ್ಲ. ಅಲ್ಲಿ ಎಲ್ಲ ಸರಿಯಾಗಿದೆ ತಾನೆ" ಎಂದಳು ನೇವರಿಸುವ ದನಿಯಲ್ಲಿ.

ಶಾಂತಳ ದುಃಖ ತಡೆಯನ್ನು ಒಡೆದು ಬರುತ್ತಿತ್ತು. ಗುಟ್ಟನ್ನು ಬಿಟ್ಟು ಕೊಡದ ಹಟವಿನ್ನೂ ಇತ್ತು. ಆದರೆ ಅದೂ ಕೂಡ ಕರಗುವ ಸ್ಥಿತಿಯಲ್ಲಿತ್ತು. ಲೀಲಳ ಮೃದುವಾದ ಮಾತು, ಅಲ್ಲದೆ ಅತ್ತಿಗೆ ತನ್ನ ಜತೆಯವಳು ಎನಿಸಿತು ಶಾಂತಳಿಗೆ. ಯಾರ ಕೈಯಲ್ಲಾದರೂ ತನ್ನ ಮನಸ್ಸನ್ನು ತೋಡಿಕೊಳ್ಳಬೇಕೆಂಬ ಹಂಬಲವಿತ್ತು. ಲೀಲಳ ಮುಂದೆ ಅದನ್ನು ಹೇಳಿಕೊಳ್ಳಬೇಕೆನಿಸಿತು. ಅವಳಿಂದಲೆ ಸಹಾನುಭೂತಿ ಸಿಕ್ಕೀತೆನಿಸಿತು. ಆದರೂ ನೇರ ಹೇಳಲು ಸಹ ಸಂಕೋಚ, ಅವಮಾನ ಕೂಡ. ಹೀಗಾಗಿ ಕಣ್ಣಿನಲ್ಲಿ ಕಾಣಿಸಿಕೊಂಡ ದುಃಖವನ್ನು ಬಾಯಿಮಾತಿನಲ್ಲಿ, ತುಟಿನಗೆಯಲ್ಲಿ ಸುಳ್ಳಾಗಿಸುವ ಪ್ರಯತ್ನ ಮಾಡಿದಳು.

"ಸರಿಯಾಗಿಲ್ಲದೆ ಏನು, ಅತ್ತಿಗೆ. ಏನೋ ಬರಬೇಕು ಅನ್ನಿಸಿತು, ಬಂದುಬಿಟ್ಟೆ ಅಷ್ಟೆ."

"ಯಾಕೆ, ನಿನ್ನ ಮೈದುನನಾದರೂ ಬರಬಹುದಾಗಿತ್ತಲ್ಲ!"

ಶಾಂತ ಉತ್ತರ ಕೊಡುವುದರಲ್ಲೆ ಮಗು ಅಳಲಾರಂಭಿಸಿದುದರಿಂದ ಲೀಲಳ ಗಮನ ಆ ಕಡೆ ತಿರುಗಿತು. ಮಗುವನ್ನು ಸಮಾಧಾನ ಮಾಡುವುದೆ

ಸಾಕುಸಾಕಾಯಿತು. ಶಾಂತಳಿಗೂ ಈಗ ಮಾತು ತಿರುಗಿಸಲು ಅನುವಾಯಿತು.

"ಯಾಕೆ, ಹೀಗೆ ಅಳತಾನಲ್ಲಾ" ಎಂದಳು. ಅವಳ ಮನಸ್ಸು ವಸಂತು ವಿನ ಕಡೆ ಸೆಳೆಯಿತು. ಅಲ್ಲದೆ ಮುಂದೆ—ಇನ್ನೇನು ಆರೇಳು ತಿಂಗಳಲ್ಲಿ, ಎಂದುಕೊಂಡು ಮನಸ್ಸು ನಾಳೆಯ ಕಡೆಗೆ ತುಯ್ಯಿತು. "ಅತ್ತಿಗೆ, ದೃಷ್ಟಿಗಿಷ್ಟಿ ಏನಾದರೂ ಆಗಿದೆಯೊ ಏನೊ—ಕಡ್ಡಿ ನಿವಾಳಿಸಿ ನೋಡು."

"ಅತ್ತೆ ಆಗಲೆ ಮಾಡಿದರು. ಅಲ್ಲದೆ, ಮಂತ್ರಿಸಿದರು. ಆದರೆ ಯಾಕೊ ರಂಪ ಮಾಡತಾನೆ. ಕೊಂಚವೂ ಸುಮ್ಮನೆ ಇರುವುದಿಲ್ಲ. ಏನೊ ಮೈ ಕೆಟ್ಟಿರ ಬೇಕು" ಎಂದು ಲೀಲಾ ಅಕ್ಕರೆಯಿಂದ ಅಂದಳು. ಮಗುವಿಗೇನೂ ಆಗಿಲ್ಲ ವೆಂದುಕೊಂಡರೂ ಅವಳ ಮನಸ್ಸಿನಲ್ಲಿನ್ನೂ ಹೆದರಿಕೆಯಿತ್ತು.

"ಮಗುವಿಗೆ ಹಸಿವಾಗಿರಬೇಕು, ಅನ್ನವಾಯಿತು. ಲೀಲಾ, ಬಾ ಮತ್ತೆ, ಕೊಂಚ ಅನ್ನ ತಿನ್ನಿಸು" ಎಂದರು ಸಾವಿತ್ರಮ್ಮ.

ಶಾಂತಳ ಹಸಿವೆ ಭುಗಿಲನೆದ್ದಿತು. ಲೀಲಾ ಮಗುವನ್ನೆತ್ತಿಕೊಂಡು ಅಡಿಗೆ ಮನೆಗೆ ಹೊರಡಲು ತಾನೂ ಹೊರಟಳು. ಕುದಿದು ಕೆಳಗಿಳಿಸಿಟ್ಟ ಅನ್ನವನ್ನು ನೋಡಿದೊಡನೆ ಶಾಂತ ಒದ್ದಾಡಿದಳು. ಲೀಲಾ ಮಗುವನ್ನು ಕೂಡಿಸಿ ಕೊಂಡು "ಅಳಬೇಡಮ್ಮ, ಅಳಬೇಡ. ನೋಡು, ಮಮ್ಮು ತಿನ್ನೋವೆ ಯಂತೆ" ಎಂದು ತಟ್ಟೆಯನ್ನು ಮುಂದಿಟ್ಟುಕೊಂಡಳು. ಸಾವಿತ್ರಮ್ಮನವರು ತಾವಾಗಿ ಶಾಂತಳನ್ನು "ನೀನೂ ಏಳು, ಶಾಂತ. ದಣಿದು ಬಂದಿದೀಯ" ಎಂದರು. ಶಾಂತಳಿಗೆ ಅದೆ ಅಮೃತವಾಯಿತು. ಹೊಟ್ಟೆಗೆ ಅನ್ನ ಬಿದ್ದೊಡನೆ ಬೆಳಿಗ್ಗೆಯಿಂದ ಏನೂ ತಿನ್ನದಿದ್ದ ನೆನಪು ಬೆದಕಿತು, ವ್ಯಾಕುಲ ಹಿಂಡಿ ಬಂತು. ಕಣ್ಣಿನಲ್ಲಿ ದಳದಳನೆ ನೀರು ಸುರಿಯಿತು. ಗಂಟಲು ಸಿಕ್ಕಿಕೊಂಡಂತಾಗಿ ಕೆಮ್ಮಲು ಬಂತು.

"ಪಾಪ! ಹೊಟ್ಟೆತುಂಬಾ ಅನ್ನ ಕೂಡ ಹಾಕುತ್ತಿದ್ದರೊ ಇಲ್ಲವೊ. ಎಷ್ಟೊ ದಿವಸ ಊಟ ಕಾಣದವಳ ಹಾಗೆ ತಿನ್ನುತ್ತೀಯಲ್ಲೆ, ನಿಧಾನವಾಗಿ ಊಟ ಮಾಡು" ಎಂದರು ಸಾವಿತ್ರಮ್ಮ.

ಈ ಮಾತಿನಿಂದ ಶಾಂತಳ ಮನಸ್ಸು ಮತ್ತೆ ಬಿಗಿಯಾಯಿತು. ಊಟ ಕೂಡ ಮಾಡದೆ ತಾನು ಹೊರಟುಬಂದುದೆ ಈ ಅಪವಾದಕ್ಕೆ ಕಾರಣವೆಂದು ಅನಿಸಿ ಮನಸ್ಸಿಗೆ ಬಹಳ ಕೆಡುಕೆನಿಸಿತು. ಆದರೂ ನುಂಗಲಾರದ ತುತ್ತು

ಈ ನೋವು—ಆಡುವಂತಿಲ್ಲ, ಬಿಡುವಂತಿಲ್ಲ.

ರಾತ್ರಿ ರಾಮಸ್ವಾಮಿಯವರು ಮನೆಗೆ ಬಂದಾಗ ಬಹಳ ಹೊತ್ತಾಗಿತ್ತು. ಸುಸ್ತಾಗಿದ್ದ ಶಾಂತ ಮಲಗಿಬಿಟ್ಟಿದ್ದಳು. ಪಾಪ, ದಣಿದು ಬಂದಿದಾಳೆ, ನಿದ್ರೆ ಹೋಗಿದ್ದಾಳೆ. ಯಾಕೆ ಎಬ್ಬಿಸಬೇಕೆಂದುಕೊಂಡರು ಸಾವಿತ್ರಮ್ಮ. ಮಗಳು ಬಂದುದನ್ನು ಕೇಳಿ ರಾಮಸ್ವಾಮಿ ಆಶ್ಚರ್ಯಪಟ್ಟರು. ಹೆಂಡತಿಯ ಮಾತಿನಂತೆ ಮಗಳನ್ನು ಕಳಿಸಿಕೊಡಿರೆಂದು ಮೂರು ನಾಲ್ಕು ಕಾಗದ ಬರೆದರೂ ಮಗಳನ್ನು ಕಳಿಸಿಕೊಟ್ಟಿರಲಿಲ್ಲ. ಅವರ ಮನೆಯವರೆಲ್ಲರೂ ಕಟುಕರು, ಅವರಿಗೆ ಕರುಳಿನ ಕರೆಯಿಲ್ಲ, ಮಗಳನ್ನು ಕೊಟ್ಟುದು ತಪ್ಪಾಯಿತೆಂದು ಹಾರಾಡಿದ್ದರು. ಅಳಿಯನ ಮೇಲೆ ಅವರಿಗೆ ವಿಪರೀತ ಕೋಪ ಬಂದು ಬಾಯಿಗೆ ಬಂದಂತೆ ಅವನನ್ನು ಅಂದು ತಮ್ಮ ಮನಸ್ಸನ್ನು ಸಮಾಧಾನಪಡಿಸಿಕೊಂಡರು. ಆದರೂ ಅವರಿಗೆ ತಮ್ಮ ಬೀಗರ ಬಗ್ಗೆ ಬಹಳ ಅಸಮಾಧಾನವಿತ್ತು. ಸುಮ್ಮನೆ ಮಾತಿನ ಬಿರುಗಾಳಿ ಎಬ್ಬಿಸಿ ಸಮಾಧಾನಪಟ್ಟುಕೊಳ್ಳುತ್ತಿದ್ದರು. ಮಗಳನ್ನು ಅಳಿಯನ ಮನೆಗೆ ಕಳುಹಿಸಿದ ಆರು ತಿಂಗಳಿಗೆ ಮಗಳು ಬಂದಿದ್ದಳು. ಆದರೆ ಅಳಿಯ ಆಗ ಬಂದಿರಲಿಲ್ಲ. ಶಾಂತಳನ್ನು ಕರೆತಂದಿದ್ದವನು ಅವಳ ಮೈದುನ—ಆ ಸೀನು, ಎರಡು ದಿನವಿದ್ದು ಹೋದ. ಅವನನ್ನು ಕಂಡರೆ ರಾಮಸ್ವಾಮಿಯವರಿಗೆ ಆಗದು. ಅದೇಕೆಂದು ಕೇಳಲಾಗದು. ಕೂಡಿಸಿಕೊಂಡು, ನೀನು ಏನು ಓದುತ್ತೀಯೆ, ಏನೆಂದೆಲ್ಲ ವಿಚಾರಿಸಿದರು. ಅವನು ಕಕ್ಕಾವಿಕ್ಕಿಯಾಗದೆ ಉತ್ತರ ಕೊಟ್ಟಿದ್ದ. ಅದು ಅವರಿಗೆ ಹಿಡಿಸಲಿಲ್ಲವೊ ಏನೊ. ಅಲ್ಲದೆ ಶಾಂತಳ ಜತೆಯಲ್ಲಿ ಅವನು ಕುಳಿತು ಹರಟೆ ಕೊಚ್ಚುತ್ತಿದ್ದುದೂ ಅವರಿಗೆ ಸರಿತೋರಿರಲಿಲ್ಲ. ಮೈದುನನಿಗೆ ಇಷ್ಟು ಸಲಿಗೆ ಕೊಡಬಾರದೆಂದು ಅವರ ವಕೀಲ ಮನಸ್ಸು ಹೇಳಿತ್ತು. ಶಾಂತಳಿಗೆ ಹೇಳಿದುದು ಏನೂ ಪ್ರಯೋಜನವಾಗಲಿಲ್ಲ. ಅವಳು ನಕ್ಕು ಮಾತು ಹಾರಿಸಿಬಿಟ್ಟಿದ್ದಳು. ಹೀಗಾಗಿ ಸೀನುವನ್ನು ಕಂಡರೆ ಅವರಿಗೆ ಕೊಂಚವೂ ಆಗುತ್ತಿರಲಿಲ್ಲ. ಅಲ್ಲಿ ಅವರ ಮನೆಯಲ್ಲಿ ಅವರೆಲ್ಲರ ಸೇವೆಯಲ್ಲಿ ಮಗಳು ಸೊರಗಿ ಹೋಗುತ್ತಿದಾಳೆಂದು ಅವರ ಕರುಳು ಮಿಡುಕುತ್ತಿತ್ತು. ಈಗ ಶಾಂತ ಬಂದಿದಾಳೆಂದು ಕೇಳಿ ಮೊದಲು ಅವರಿಗೆ ನಂಬಿಕೆಯೆ ಆಗಲಿಲ್ಲ. ಆಮೇಲೆ ಸತ್ಯ ಎಂದು ಮನಸ್ಸು ಸಂತೋಷಗೊಂಡಿತು. ಆದರೆ ಈ ಸಂತೋಷ, ಮಗಳು ಬಂದಳಲ್ಲ ಎನ್ನುವ ಆನಂದ—ಅವರ ಹೃದಯದಲ್ಲಿ ತುಂಬಿಕೊಂಡಿದ್ದ ಗಾರನ್ನು

ಬೆದಕಿತು. ಮನಸ್ಸಿನ ಸಂತೋಷವನ್ನು ಮಾತಿನಲ್ಲಿ ತೋರಗೊಡಲಿಲ್ಲ.

ಶಾಂತಳಿಗೆ ವಿಪರೀತ ಆಯಾಸವಾಗಿತ್ತು. ಊಟ ಬಿದ್ದೊಡನೆ ತೂಕಡಿಕೆ ಬಂದಿತು. ರೂಮಿನಲ್ಲಿ ಮಲಗಿಬಿಟ್ಟಿದ್ದಳು. ತಲೆನೋವೆಂದು ನೆಪ ಹೇಳಿ ತಾಯಿಯ ಮಾತಿನಿಂದ ತಪ್ಪಿಸಿಕೊಂಡಿದ್ದಳು. ತಂದೆ ಮನೆಗೆ ಬರುವ ಹೊತ್ತಿಗಾಗಲೆ ಒಂದು ನಿದ್ರೆಯಾಗಿತ್ತು. ತಂದೆಯ ಗಂಟೆಯಂತಹ ಗಂಟಲಿನ ಸದ್ದು ಕೇಳಿ ಅರನಿದ್ರೆಯಲ್ಲಿದ್ದ ಅವಳಿಗೆ ಎಚ್ಚರವಾಯಿತು. ಹಾಗೆಯೆ ಬಿದ್ದು ಕೊಂಡೆ ಮಾತೆಲ್ಲ ಕೇಳುತ್ತಿದ್ದಳು. ಆ ಕಡೆಯಲ್ಲಿ ಅತ್ತಿಗೆ ಗೊರಕೆ ಹೊಡೆಯು ತ್ತಿದ್ದಳು. ಮಗು ತೊಟ್ಟಿಲಲ್ಲಿ ಹಾಯಾಗಿ ನಿದ್ರೆಮಾಡುತ್ತಿತ್ತು. ಹಜಾರದಿಂದ ಬೆಳಕು ರೂಮಿನೊಳಕ್ಕೂ ಬೀಳುತ್ತಿತ್ತು. ಎದ್ದುಹೋಗಿ ತಂದೆಯನ್ನು ಮಾತಾ ಡಿಸಬೇಕೆಂದುಕೊಂಡರೂ ಏಳಲು ಮನಸ್ಸು ಬರಲಿಲ್ಲ.

" ಶಾಂತ ಒಬ್ಬಳೆ ಬಂದಳೇನು ? ಯಾಕೆ ಯಾರೂ ಬರಲಿಲ್ಲವೆ ಜತೆ ? " ಎಂದರು ರಾಮಸ್ವಾಮಿ ಜೋರಾಗಿ.

" ಇಲ್ಲ " ಎಂದರು ಸಣ್ಣ ದನಿಯಲ್ಲೆ ಸಾವಿತ್ರಮ್ಮ. ದನಿಯಲ್ಲಿಯೆ ಹೆದರಿಕೆ ಕಾಣುತ್ತಿತ್ತು.

" ಹಾಗಂದರೇನು ? ನೀನು ಕೇಳಲೆ ಇಲ್ಲವೆ ಅವಳನ್ನು ? "

" ಕೇಳಿದರೆ ಅವಳು ಸರಿಯಾಗಿ ಉತ್ತರ ಕೊಡಬೇಕಲ್ಲ. ಏನೋ ಅದು ಇದು ಅಂದುಬಿಟ್ಟಳು."

" ಬಹಳ ಚೆನ್ನಾಗಿದೆ. ಮಗಳನ್ನು ಕಳಿಸಿಕೊಡುವುದು ಎರಡು ವರ್ಷ ಕ್ಕೊಂದು ಸಾರಿ, ಆಗಲೂ ಒಬ್ಬೊಂಟಿಯಾಗಿ ! ಎಂತಹ ಸಹವಾಸ ಮಾಡಿದ್ದು. ಥೂ ! ಥೂ ! ಅಲ್ಲ, ಅವಳ ಗಂಡ—ಅವನಿಗೂ ಅಷ್ಟೊಂದು ಜ್ಞಾನ ಬೇಡವೆ ? —ಹೋಗಲಿ, ಅವನಿಗೆ ಕೆಲಸವಿದ್ದರೆ ಆ ಥಾಂಡಿಗ—ಮೈದುನನಾದರೂ ಬರ ಬಾರದಾಗಿತ್ತೆ ? ಆ ಅತ್ತೆಮಾವ ಹೇಗೆತಾನೆ ಬಿಟ್ಟರೊ ! ಒಟ್ಟಿನಲ್ಲಿ ಗಿಣಿ ಹಾಗೆ ಸಾಕಿ ಕಟುಕರ ಕೈಗೆ ಒಪ್ಪಿಸಿದ ಹಾಗಾಯಿತು."

" ಅಲ್ಲ, ಪಾಪ ! ಅವಳಿಗೇನು ತೊಂದರೆಯೊ. ಅಲ್ಲಾಂದರೆ, ಅವಳನ್ನು ನೋಡಿದರೆ ಕರುಳು ಕಿತ್ತು ಬರೋಹಾಗಾಯ್ತು ನನಗೆ. ಮೈ ಎಷ್ಟು ತೆಗೆದು ಹೋಗಿದೆ ಅಂತೀರಿ " ಎಂದು ಸಾವಿತ್ರಮ್ಮನವರು ರಾಗ ಎಳೆದರು.

" ಇನ್ನೇನಾಗುತ್ತೆ ! ಎಲ್ಲರಿಗೂ ಸೇವೆಯಾಗಬೇಕಲ್ಲ. ದುಡಿಯೋದಕ್ಕೆ

ತಾನೆ ಇವಳು ಅಲ್ಲಿಗೆ ಹೋದದ್ದು. ಎಲ್ಲರಿಗೂ ಗಾಣದೆತ್ತಿನ ಹಾಗೆ ದುಡಿದು ಹಾಕಬೇಕು. ಏನು ಕಷ್ಟವೊ, ಪಾಪ!" ಎಂದು ರಾಮುಸ್ವಾಮಿಯೂ ಮರುಗಿದರು.

ಶಾಂತಳಿಗೂ ಕಣ್ಣಿನಲ್ಲಿ ಪರಿತಾಪದ ಹನಿಯಾಡಲಾರಂಭಿಸಿತು. ತನ್ನ ಅತ್ತೆ ಮಾವ ಯಜಮಾನರಿಗೆ ಬರಿದೆ ಈ ಬೈಗುಳ—ತಾನು ಹೀಗೆ ಹೊರಟು ಬಂದುದರ ಫಲವೆನ್ನಿಸಿ ಪಶ್ಚಾತ್ತಾಪವಾಯಿತು. ತಾನು ಮಾಡಿದ ತಪ್ಪು ಎಷ್ಟು ಆಘಾತಕ್ಕೆಡೆಕೊಡುವುದೊ ಎಂದು ಗಾಬರಿಯಾಯಿತು.

"ನೋಡಿ, ಊಟಕ್ಕೆ ಕೂತಳು. ಎಷ್ಟೊ ದಿನದಿಂದ ಅನ್ನ ಕಾಣದೆ ಇದ್ದವಳ ಹಾಗೆ ಆಡಿದಳು. ಬಾಯಿಗೆ ತುರುಕಿಕೊಂಡಿದ್ದು ಗಂಟಲಲ್ಲಿಳಿಯಲೆ ಇಲ್ಲ. ಹೊಟ್ಟೆ ಕಂದಿಸಿದರೆ ಇನ್ನೇನಾಗುತ್ತೆ ಹೇಳಿ. ನನಗೆ ಅಯ್ಯೊ ಅನಿಸಿತು. ನಾವಿಲ್ಲಿ ಸುಖವಾಗಿ ಊಟ ಮಾಡೋದು, ಅವಳು ಏನು ಪಾಡುಪಡುತ್ತಾಳೊ ಅಲ್ಲಿ ಅನಿಸಿತು" ಎಂದರು ಸಾವಿತ್ರಮ್ಮ ಮರುಕದ ದನಿಯಲ್ಲಿ.

"ಬೆಳಿಗ್ಗೆ ಹೊರಟಾಗ ಊಟ ಹಾಕಿದರೊ, ಹಾಗೆಯೆ ಮನೆ ಬಿಟ್ಟು ದೂಡಿದರೊ?" ಎಂದು ರಾಮುಸ್ವಾಮಿಯವರು ಗರ್ಜಿಸಿದರು.

ಶಾಂತಳಿಗೆ ಈ ಮಾತಿನಿಂದ ಚಾವಟಿಯೇಟು ಬಿದ್ದಂತಾಯಿತು. ಅವಳ ಮನಸ್ಸು ದಿಕ್ಕೆಟ್ಟಿತು. ಅಷ್ಟರಲ್ಲಿ ಮತ್ತೆ ತಂದೆಯ ಮಾತು ಕೇಳಿಸಿತು:

"ಹೋಗಲಿ ಬಿಡು. ಇನ್ನು ಏನೆ ಆಗಲಿ, ಅವರ ಮನೆಗೆ ಕಳಿಸೋದಿಲ್ಲ. ಅವನು ಬರಲಿ—ಅವಳ ಗಂಡ. ಒಂದು ಬೇರೆ ಮನೆ ಮಾಡಿ, ಅಲ್ಲಿ ಇಟ್ಟು ಕೊಳ್ಳುವುದಿದ್ದರೆ ಇಟ್ಟುಕೊಳ್ಳಲಿ, ಇಲ್ಲದಿದ್ದರೆ ನಮಗೇನೂ ಅವಳು ಭಾರವಿಲ್ಲ. ಇದೇ ನನ್ನ ಕೊನೆಯ ನಿರ್ಧಾರ" ಎಂದರು ರಾಮುಸ್ವಾಮಿ.

ಶಾಂತಳ ಹೃದಯ ಬಿರಿಯಿತು. ಬಿಕ್ಕಿಬಿಕ್ಕಿ ಅಳು ಬಂತು. ಆದರೆ ಎಲ್ಲಿ ತನ್ನ ಅಳುವಿನ ದನಿ ಕೇಳಿಸಿಬಿಟ್ಟೀತೊ ಎಂದು ಗಾಬರಿಯಿಂದ ತಡೆದು ಕೊಳ್ಳಲು ಯತ್ನಿಸಿದಳು. ಬಾಯನ್ನು ದಿಂಬಿಗೆ ಅದುಮಿಕೊಂಡಳು. ಆದರೆ ದುಃಖ ತಡೆಯಲಾರದೆ ಪ್ರವಾಹವಾಗಿ ಹುಚ್ಚುಹೊಳೆಯಾಗಿ ಹರಿಯಿತು. ತಾನು ಬೆಳಿಗ್ಗೆ ಜಗಳವಾಡಿದಾಗ 'ಈ ಮನೆಗೆ ನಾನು ಇನ್ನು ಕಾಲಿಡುವುದಿಲ್ಲ ಎಂದು ಹಟ ಮಾಡಿ ಹೊರಟಿದ್ದಳು. ಬೇರೆ ಮನೆ ಮಾಡಿದರೆ ತಾನು ಬರುವು ದೆಂದು ನೇರವಾಗಿ ಹೇಳಿರದಿದ್ದರೂ ದನಿಯಲ್ಲಿ ಸೂಚಿಸಿದ್ದಳು. ಈಗ ಅದೇ

ಮಾತನ್ನು ತಂದೆಯೂ ಅಂದಿದ್ದರು. ಆದರೆ ತಂದೆಯ ಮಾತಿನಿಂದ ಅವಳಿಗೆ ಸಮಾಧಾನವಾಗಲಿಲ್ಲ, ಸುಖಸಂತೋಷವೂ ಆಗಲಿಲ್ಲ. ತಾನಾಡಿದ ದುಡುಕು ಮಾತನ್ನೆ ತಂದೆ ಕೂಡ ಅನ್ನುತ್ತಿದ್ದಾರೆ. ಇನ್ನು ಮುಂದೇನು ಗತಿಯೆಂದು ಹೃದಯ ಭೀತಿಯಿಂದ ಕಾತರಿಸಿತು. ನಾಳಿನ ಗತಿಯೇನೆಂದು ದುಃಖ ಉಮ್ಮಳಿಸಿ ಬಂತು. ಅಯ್ಯೋ! ತಾನು ಹಾಗೆ ಮಾಡಬಾರದಾಗಿತ್ತೆಂಬ ಚಿಂತೆ ಜೋರಾಯಿತು. ತಂದೆಯ ಮಾತು ಕೇಳಿದ ಅವಳಿಗೆ ಆಕಾಶವೆ ಕಳಚಿ ತಲೆಯ ಮೇಲುರುಳಿದಂತಾಯಿತು. ಅದೆಷ್ಟೊ ಹೊತ್ತು ಹಾಗೆಯೆ ಅಳುತ್ತಲೆ ಮಲಗಿದ್ದಳು.

ನಿದ್ರೆ ಬಾರದು. ಹೇಗೆ ಹೊರಳಿದರು ಕೊಂಚವಾದರೂ ಆರಾಮವಿಲ್ಲ. ತಲೆ ಕಾದು ಸುಡುತ್ತಿತ್ತು. ಕಣ್ಣು ತೆರೆಯಲೂ ಇಷ್ಟವಿಲ್ಲ. ಮುಚ್ಚಿದ್ದರೂ ನೋವು. ತೆರೆದರೆ ಆ ಸಣ್ಣ ರಾತ್ರಿಯ ದೀಪವೆ ಕೋರೈಸಿ ಚುಚ್ಚುತ್ತಿತ್ತು. ಮತ್ತೆ ಕಣ್ಣೆವೆ ದಣಿದು ಇನ್ನು ತನ್ನಿಂದಾಗದೆಂದು ಮುಚ್ಚಿಕೊಳ್ಳುತ್ತಿತ್ತು. ಆದರೆ ಏನೇ ಪ್ರಯತ್ನಪಟ್ಟರೂ ನಿದ್ರೆ ಮಾತ್ರ ಬಾರದು. ಚಿಂತೆಯಲ್ಲಿ ತಲೆ ಬೇಯುತ್ತಿತ್ತು. ಹೃದಯ ಸುಡುತ್ತಿತ್ತು. ತಂದೆ ಹಟ ಹಿಡಿದರೇನು ಗತಿ? ಅವರು ಲಾಯರು. ಹಟ ಸಾಧಿಸುವವರು. ಏನು ಮಾಡುವರೊ ಹೇಳದಂತಹಮ. ಈಗ ಏನು ಮಾಡುವುದು. ತನ್ನ ಯಜಮಾನರು ಬಂದು ತನ್ನನ್ನು ಕರೆದೊಯ್ಯುವರೊ? ಅಲ್ಲದೆ ತಾನು ಬರುವಾಗ ಅವರನ್ನೊಂದು ಮಾತೂ ಕೇಳದೆ ಬಂದಿರಲಿಲ್ಲವೆ? ಅವರು ಮನೆಗೆ ಬರುವ ವರೆಗಾದರೂ ಇರಬೇಕಾಗಿತ್ತು. ಆದರೆ ಆ ವಿಷಗಳಿಗೆ ಅಂತಹದು. ತನ್ನನ್ನು ಕಾಡಿಸಿ ಇಲ್ಲಿಗೆ ಓಡಿಸಿತು. ಈಗ ಅವರು ಬರುವರೆಂಬುದು ಹೇಗೆತಾನೆ ಗೊತ್ತು? ತನ್ನಲ್ಲಿ ಅವರಿಗೇನೊ ಅಸಾಧಾರಣ ಪ್ರೀತಿಯೆಂಬುದು ನಿಜ. ಆದರೆ ತಾನು ಅದಕ್ಕೆ ಯೋಗ್ಯಳಲ್ಲ. ಅವರನ್ನೊಂದು ಮಾತು ಕೇಳದೆ ಸಣ್ಣ ಮಾತಿಗೆ, ಸಣ್ಣ ರೀತಿಯಲ್ಲಿ, ಹೀಗೆ ಬಂದುಬಿಟ್ಟು ಈಗ ಅವರು ಇಲ್ಲಿಗೆ ಬರಲೆಂದರೆ ಅದು ಹೇಗೆತಾನೆ ಸಾಧ್ಯ. ಅತ್ತೆ ಮಾವ ಎಲ್ಲರೂ ಎಷ್ಟೊ ರೀತಿಯಲ್ಲಿ ಹೇಳಿದರು. ಆ ಮಗು, ವಸಂತು, ತನಗಾಗಿ ಎಷ್ಟು ಪರಿತಪಿಸಿದಳು. ತಾನೆಲ್ಲವನ್ನೂ ಕಡೆಗಣಿಸಿ ಆ ಕೆಟ್ಟ ಗಳಿಗೆಯಲ್ಲಿ ಹಾಗೆ ಬಂದುಬಿಟ್ಟಿದ್ದಳು. ಅದು ಕೆಟ್ಟುದಾಯಿತು, ತನ್ನ ತಪ್ಪಿಗೆ ಏನೇನು ಆಗುವುದೊ! ಅವರೆಲ್ಲರನ್ನು ಬಿಟ್ಟಿರಬೇಕು. ಒಂದು ದಿನಕ್ಕೆ ಇಲ್ಲಿ

ಬೇಸರವಾಗಿಹೋಯಿತು. ಇನ್ನು ಇಲ್ಲಿದ್ದರೆ ಇನ್ನೇನೇನು ಮಾತುಗಳನ್ನು ಕೇಳಬೇಕೊ. ಎಲ್ಲರೂ ಏನೇನು ಆಡಿಕೊಳ್ಳುವರೊ. ಒಂದು ವೇಳೆ ಊರಿನಿಂದ ತನ್ನ ಯಜಮಾನರು ಬಂದರೆ ಸರಿ, ಇಲ್ಲದಿದ್ದರೆ ಎಲ್ಲರೂ ತನ್ನನ್ನು 'ಗಂಡನನ್ನು ಬಿಟ್ಟವಳು' ಎಂದು ಆಡಿಕೊಳ್ಳುವುದಿಲ್ಲವೆ? ಬೊಟ್ಟಿಟ್ಟು ತನ್ನನ್ನು ಎಲ್ಲರಿಗೂ ತೋರಿಸಿ ವ್ಯಂಗ್ಯವಾಗಿ ನಗುವುದಿಲ್ಲವೆ! ಅಯ್ಯೊ! ಎಂತಹ ಕೆಲಸವಾಗಿಹೋಯಿತು, ಎಂದು ಒದ್ದಾಡಿದಳು. ಈ ಒದ್ದಾಟದಲ್ಲಿ ಏನು ಮಾಡಿದರೂ ನಿದ್ರೆಯ ಸೋಂಕು ಕೂಡ ಅವಳ ಹತ್ತಿರ ಬರಲಿಲ್ಲ. ಎಂತಹ ಅನ್ಯಾಯ! ಎಂತಹ ಹಾಳು ಗಳಿಗೆ! ಎಷ್ಟೊಂದು ಅತ್ತರೂ ದುಃಖ ಇನ್ನೂ ಒತ್ತರಿಸಿಕೊಂಡೆ ಬರುತ್ತಿತ್ತು. ಅದರಿಂದ ಬಿಡುಗಡೆ ಸಿಗುವಂತಿರಲಿಲ್ಲ. 'ಇನ್ನು ಅವರ ಮನೆಗೆ ಕಳಿಸೋದಿಲ್ಲ' ಎಂದು ತಂದೆ ಅಂದ ಸಿಡುಕಿನ ಮಾತು ಕಿವಿಯಲ್ಲಿ ಸಿಡಿಲಂತೆ ಸಿಡಿಯುತ್ತಿತ್ತು. ಹೃದಯ ಅಯ್ಯೊ ಎಂದು ಮುಲುಗುಟ್ಟುತ್ತಿತ್ತು. ಶಾಂತಳಿಗೆ ಅತ್ತು ಅತ್ತು ನಿತ್ರಾಣವಾಯಿತು. ಇನ್ನು ಅಳಲು ಕೂಡ ತ್ರಾಣವಿಲ್ಲದಾಯಿತು. ದಣಿವು ಎಷ್ಟೆ ಆದರೂ ನಿದ್ರೆ ಮಾತ್ರ ಬಾರದು. ಮೂಕವಾಗಿ ವೇದನೆ ಒಳಗೆ ತಿನ್ನಲಾರಂಭಿಸಿಬಿಟ್ಟಿತು. 'ದೇವರೆ, ಇನ್ನೇನು ಗತಿ—ಇನ್ನೇನು ಗತಿ!' ಎಂದು ಹೃದಯ ಬಡಿಯುತ್ತಿತ್ತು. ಕಾತರಿಸಿ ಕಂಗೆಟ್ಟಿತು. ಬದುಕು ಬೇಡವೆನಿಸಿತು.

ಬೆಳಿಗ್ಗೆ ಎದ್ದಾಗ ಅವಳ ಕಣ್ಣುಗಳೆರಡೂ ಕೆಂಡದುಂಡೆಯಾಗಿದ್ದವು. ಕಾಯಿಲೆ ಬಂದವರಂತೆ ಮುಖ ಹುಚ್ಚುಹುಚ್ಚಾಗಿದ್ದಿತು. ಏಳಲು ಕೂಡ ಮನಸ್ಸಾಗಲಿಲ್ಲ. ಏನೊ ಒಂದು ಬಗೆಯ ಕತ್ತಲೆ ಅವಳ ಜೀವನವನ್ನೆಲ್ಲ ಮುಸುಕಿದಂತೆ ತೋರಿತು!

## ೫

ಶಾಂತ ತಂದೆಯ ಮನೆಗೆ ಬಂದು ಹತ್ತು ದಿನವಾಗಿತ್ತು. ಈ ಹತ್ತು ದಿನ ಕಳೆಯುವುದು ಅವಳಿಗೆ ಹತ್ತು ಯುಗ ಕಳೆದಂತಾಗಿತ್ತು. ಮನಸ್ಸಿಗೆ ಏನೂ ಬೇಕಾಗುತ್ತಿರಲಿಲ್ಲ. ತನ್ನದೆ ಆದ ಸ್ವರ್ಗವನ್ನು ಬಿಟ್ಟು ಬಂದು ಹೀಗೆ ಸಂಕಟ ಪಡುವುದು ತನ್ನ ಹಣೆಯಲ್ಲಿ ಬರೆದುದೆಂದು ಎಷ್ಟೊ ಬಾರಿ ಕಣ್ಣೀರುಗರೆದಳು. ಬಂದ ಮಾರನೆಯ ದಿನ ಬೆಳಿಗ್ಗೆ ತಂದೆ ಖಡಾಖಂಡಿತವಾಗಿ ಹೇಳಿಬಿಟ್ಟಿದ್ದರು.

ಆ ಮಾತು ಶಾಂತಳ ಹೃದಯವನ್ನು ಚೂರಿಯಂತೆ ಇರಿಯಿತು. “ ನಿನ್ನ ಗಂಡ ಅಯೋಗ್ಯ. ಹೆಂಡತಿಯನ್ನು ಹೇಗೆ ನೋಡಿಕೊಳ್ಳಬೇಕೆಂಬುದು ತಿಳಿಯದ ಅವನಿಗೆ ನಿನ್ನನ್ನು ಕೊಟ್ಟು ನಾನೇ ತಪ್ಪು ಮಾಡಿದೆ” ಎಂದರು. ಶಾಂತಳಿಗೆ ತನ್ನ ಯಜಮಾನರನ್ನು ಹಾಗಂದುದು ಹಿಡಿಯಲಿಲ್ಲ. ಹಾಗೆನ್ನಲು ತಂದೆಗೇನು ಕಾರಣ, ಏನು ಹಕ್ಕೆಂದು ಹೃದಯ ರೊಚ್ಚಿಗೆದ್ದಿತು. ಆ ನೋವಿನಲ್ಲಿ ಪ್ರತಿಯಾಡಿದಳು : “ ಹಾಗೆಲ್ಲ ಸುಮ್ಮನೆ ಅನ್ನಬೇಡಪ್ಪ ಅವರನ್ನು. ಅವರು ಬಹಳ ಒಳ್ಳೆಯವರು. ನನ್ನನ್ನು ಮದುವೆಯಾದಂದಿನಿಂದಲೂ ಚೆನ್ನಾಗಿಯೆ ನೋಡಿಕೊಂಡಿದಾರೆ.”

“ ಚೆನ್ನಾಗಿ ನೋಡಿಕೊಂಡಿದಾನೆ—ಚೆನ್ನಾಗಿ! ಅವನ ತಲೆ! ನಿನ್ನ ಅವಸ್ಥೆಯನ್ನು ಯಾರಾದರೂ ನೋಡಬಹುದೆ! ಎಷ್ಟು ದಿನವಾಯಿತೊ ಹೊಟ್ಟೆ ತುಂಬ ಊಟ ಮಾಡಿ—ಕಂಗಾಲಾಗಿ ಹೋಗಿದೀಯಲ್ಲೆ ” ಎಂದರು ರಾಮುಸ್ವಾಮಿ.

“ ನಮ್ಮ ಮನೆಯಲ್ಲಿ ನನಗೇನೂ ಊಟಕ್ಕೆ ಕಡಿಮೆಯಿಲ್ಲ.”

“ ಎರಡೆರಡು ಕೈಯಲ್ಲೂ ಊಟ ಮಾಡುತ್ತಿ ಅಂತ ಕಾಣುತ್ತೆ. ಅದಕ್ಕೆ ಇಷ್ಟು ಚೆನ್ನಾಗಿದ್ದೀ ” ಎಂದರು ರಾಮುಸ್ವಾಮಿ ಕುಹಕವಾಗಿ.

ಶಾಂತಳಿಗೆ ಈ ಚುಚ್ಚುಮಾತಿನಿಂದ ರೇಗಿತು. ವ್ಯಂಗ್ಯದಿಂದ ಆವಳ ಮನಸ್ಸು ರೋಸಿತು.

“ ಎರಡೆರಡು ಕೈಯಲ್ಲಿ ಊಟ ಮಾಡಲು ನಮಗೆ ಗತಿಯಿಲ್ಲದಿದ್ದರೂ ಎರಡು ಹೊತ್ತು ಹೊಟ್ಟೆತುಂಬ ಊಟ ಮಾಡಲು ನಮಗಿದೆ, ಅಪ್ಪ. ಅಷ್ಟೊಂದು ಭಿಕಾರಿಗಳಲ್ಲ, ನಾವು. ಅವರು ಯಾವತ್ತೂ ನಿನ್ನ ಹತ್ತಿರಕ್ಕೆ ಕೈ ನೀಡಿಕೊಂಡು ಬೇಡಲು ಬಂದಿಲ್ಲ, ಬರುವುದೂ ಇಲ್ಲ ” ಎಂದಳು.

ಶಾಂತಳ ಉಗ್ರ ರೂಪ ಕಂಡು, ಬಿರುಸು ಮಾತು ಕೇಳಿ ರಾಮುಸ್ವಾಮಿ ಅವಾಕ್ಕಾದರು. ಆದರೆ ಯಾವುದಕ್ಕೂ ಹೆದರದ ವಕೀಲಬುದ್ಧಿ ಅವಳ ಈ ಮಾತಿಗೆ ಹೆದರುವುದೆ! ಮಾತನ್ನು ಅಲ್ಲಿಗೆ ನಿಲ್ಲಿಸದೆ,

“ ಸರಿ, ಸರಿ. ನಿನ್ನನ್ನು ನೋಡಿದರೆ ಮನಸ್ಸಿಗೆ ತಂಪಾಗುತ್ತೆ. ನನ್ನ ಅಳಿಯ ಮಗಳನ್ನು ಎಷ್ಟು ಚೆನ್ನಾಗಿ ನೋಡಿಕೊಂಡಿದಾನೆಂದು ಸಂತೋಷ ವಾಗುತ್ತೆ. ಅಲ್ಲಿ ಇಷ್ಟು ಹಿಂಸೆ, ತೊಂದರೆಯಿದ್ದೂ ಅವರನ್ನೇ ವಹಿಸಿಕೊಂಡು

ಮಾತಾಡುತೀಯಲ್ಲ, ಅದು ಮತ್ತೆ!"

"ಅಲ್ಲೇನೂ ನನಗೆ ಹಿಂಸೆಯೂ ಇಲ್ಲ, ತೊಂದರೆಯೂ ಇಲ್ಲ. ಸುಖವಾಗಿ—"

ಶಾಂತಳ ಮಾತು ಪೂರೈಸುವುದರಲ್ಲೆ ರಾಮಸ್ವಾಮಿ ಅಡ್ಡಬಾಯಿ ಹಾಕಿದರು: "ಸುಖವಾಗಿಯೆ ಇದೀಯ, ನಿನ್ನನ್ನು ನೋಡಿದರೆ ಹೇಳುತ್ತೆ ನಿನ್ನ ಸುಖವನ್ನೆಲ್ಲ. ಸೊರಗಿದ ಮುಖ, ಕಂಗಾಲಾದ ದೇಹ—ಇನ್ನೇನಾಗುತ್ತೆ ಹೇಳು. ಅಲ್ಲಿ ಆ ಧಾಂಡಿಗ ಮೈದುನನಿಗೆ ಸೇವೆ ಆಗಬೇಕು. ಆ ಚಂಡಿ ಹುಡುಗಿ ಇದೆಯಲ್ಲ, ಅದು ನಿನ್ನ ರಕ್ತ ಹೀರುವ ಜಿಗಣೆ ಹಾಗೆ ಯಾವಾಗಲೂ ನಿನಗೆ ಅಂಟಿಕೊಂಡಿರಬೇಕು. ಗಂಡನಂತೂ ಸರಿಯೆ ಸರಿ. ಸುಖಕ್ಕೇನು ಕಡಿಮೆ, ಮತ್ತೆ ಸ್ವರ್ಗಸುಖವೆ!"

"ನೀನು ಅವರನ್ನೆಲ್ಲ ಹಾಗೆ ಅನ್ನುವುದಿದ್ದರೆ ನಾನು ಇಲ್ಲಿ ಇರುವುದೆ ಇಲ್ಲಪ್ಪ" ಎಂದಳು ಸಿಡುಕುತ್ತ ಶಾಂತ.

"ಹುಂ! ನನಗೇನಾಗಬೇಕು ಹೇಳು. ಆದರೆ ಒಂದು ಮಾತ್ರ ಖಂಡಿತ. ಅವನು—ನಿನ್ನ ಗಂಡನೆ ಬಂದು 'ಬೇರೆ ಮನೆ ಮಾಡಿದೇನೆ, ನಿಮ್ಮ ಮಗಳನ್ನು ಕಳಿಸಿಕೊಡಿ' ಅಂತ ಕೇಳುವವರೆಗೆ ಕಳಿಸುವುದಿಲ್ಲ."

ಇಷ್ಟು ಹೇಳಿ ತಂದೆ ಹೊರಟುಹೋಗಿದ್ದರು. ಶಾಂತಳ ಹೃದಯದಲ್ಲಿ ಜ್ವಾಲಾಮುಖಿಯೊಳಗಿನ ಆಸ್ಫೋಟಗಳಾಗುತ್ತಿದ್ದವು. ಅವಳ ನೋವನ್ನು ಯಾರ ಕೈಯಲ್ಲಿ ಹೇಳಿಕೊಳ್ಳಬೇಕು. ತನ್ನಲ್ಲಿ ಯಾರಿಗೆ ತಾನೆ ಸಹಾನುಭೂತಿ ಬಂದೀತು ಎಂದು ಬಹಳ ಯೋಚಿಸಿದಳು. ತನ್ನ ತಂದೆಯ ಮನೆಯಲ್ಲಿ ತನ್ನ ಮನಸ್ಸಿನೊಳಗಿನ ಮಾತು ಕೇಳಲು ತನ್ನವರಾಗಿ ಯಾರೂ ಇಲ್ಲವಲ್ಲ ಎನಿಸಿ ಶಾಂತಳಿಗೆ ಮತ್ತೆ ಅಳು ಬಂತು. ಮರಳುಗಾಡಿಗೆ ತಾನಾಗಿಯೆ ಬಂದಂತಾಯಿತು ಅವಳ ಹೃದಯದ ದಾಹ!

ಆ ದಿನವೆಲ್ಲ ಹೇಗೊ ಹುಚ್ಚು ಹುಚ್ಚಾಗಿಯೆ ಕಳೆದಳು. ಮನಸ್ಸು ಯಾವುದರಲ್ಲಿಯೂ ನಿಲ್ಲದು, ಯಾವುದೂ ಬೇಕಾಗಲಿಲ್ಲ. ಮಡಿಯುಟ್ಟುಬಂದು ಊಟ ಮಾಡಿದಳು. ಅದೂ ತಾಯಿ, ಅತ್ತಿಗೆಯರ ಬಲವಂತಕ್ಕೆ. ಮನಸ್ಸಿನಲ್ಲಿ ಏನೋ ಕೊರಗು ಹತ್ತಿಸಿಕೊಂಡಿದಾಳೆಂದು ಸಾವಿತ್ರಮ್ಮನವರಿಗೆ ಗೊತ್ತಿತ್ತು.

ಆದರೆ ಅದನ್ನರಿತುಕೊಳ್ಳಲು ಅವರು ಪ್ರಯತ್ನಿಸಲಿಲ್ಲ. ಗಂಡನ ಮನೆಯಲ್ಲಿ ಸುಖವಿರಲಿಲ್ಲ, ಆದ್ದರಿಂದ ಹೀಗಿದಾಳೆ. ನಾಲ್ಕು ದಿನವಾದರೆ ಸರಿಹೋಗುತ್ತ ದೆಂದು ಅವರು ಮನಸ್ಸಿಗೆ ಸಮಾಧಾನ ತಂದುಕೊಂಡರು. ಅಲ್ಲದೆ ತಮ್ಮ ಯಜಮಾನರು ಅವಳನ್ನು ಇನ್ನು ಈಗಲೆ ಕಳಿಸುವುದಿಲ್ಲವೆಂದು ಹೇಳಿದ್ದುದೂ ಅವರಿಗೆ ನೆಮ್ಮದಿಯ ವಿಷಯವೆ. ಮಗಳನ್ನು ಒಂದು ತಿಂಗಳಾದರೂ ಸುಖ ವಾಗಿಟ್ಟುಕೊಳ್ಳಬೇಕು. ಆಮೇಲೆ ಅವಳ ಯಜಮಾನಿಕೆಯ ಮನೆಗೆ ಕಳಿಸ ಬೇಕೆಂದು ಅವರು ತೀರ್ಮಾನಿಸಿದ್ದರು. ನಾಲ್ಕು ದಿವಸವಾದರೆ ತಾನಾಗಿಯೆ ಎಲ್ಲವೂ ಹದಕ್ಕೆ ಬರುತ್ತದೆ, ಅಳಿಯ ಕಾಗದ ಹಾಕುತ್ತಾರೆ, ಬಂದೇ ಬರು ತ್ತಾರೆ ಎಂದುಕೊಂಡರು ಅವರು. ಆಗಲೆ ಇನ್ನೊಂದು ಮಾತೂ ಅವರಿಗೆ ತೋರಿತು. ಅದನ್ನು ಆಡಿಯೂ ಬಿಟ್ಟರು. ಮಗಳು ಎಲ್ಲಾದರೂ ಮೋಸ ಹೋದಾಳೆಂದು ಹೆದರಿಕೆಯಿತ್ತು. ಎಲ್ಲವೂ ಅವಳು ಸುಖವಾಗಿರಲೆಂದೆ.

"ಶಾಂತ, ನಿನ್ನ ಯಜಮಾನರು ಕಾಗದ ಬರೆದರೆ, ಅದಕ್ಕೆ ಮರುಳಾಗಿ ಹೊರಟುಬಿಡಬೇಡ" ಎಂದರು.

"ಕಾಗದವನ್ನೆಲ್ಲಿ ಬರೆಯುತ್ತಾರೆ" ಎಂದು ಶಾಂತ ನಿಟ್ಟುಸಿರು ಬಿಟ್ಟಳು. ಆದರೆ ತಾಯಿಯ ಈ ಮಾತಿನಿಂದ ನಿರಾಶೆಯಲ್ಲೂ ಏನೊ ಒಂದು ಆಸೆ ಎದ್ದಿತು. ಅವರಾಗಲಿ, ಅವರ ಮನೆಯವರಾಗಲಿ ತನ್ನನ್ನು 'ಬಾ' ಎಂದು ಬರೆಯುಬಹುದು. ಹಾಗೆ ಬರೆದರೆ ಸಾಕು ಎಂದುಕೊಂಡಳು. ಆದರೆ ಹಾಗೆ ಬರೆದಾರೆ? ಎಂದು ಅನುಮಾನ. ತಾಯಿಯ ಮಾತಿನಿಂದ ಕುಡಿಯಿಟ್ಟ ಆಸೆ ಅವಳ ಹೃದಯದಲ್ಲಿ ತಳಮಳವನ್ನೆಬ್ಬಿಸಿತು. ಸುಮ್ಮನೆ ಒಂದು ಕಾಗದ ಬಂದರೆ ಸಾಕು; ತನ್ನ ಹಟ, ಕೋಪ, ಅಭಿಮಾನಗಳನ್ನೆಲ್ಲ ಒದರಿ ಕಿತ್ತೆ ಸೆದು ತನ್ನ ಮನೆಗೆ ಹೋಗಿ ಸೇರಿಕೊಳ್ಳುವುದೆಂದುಕೊಂಡಳು. ಸೀನು ತನ್ನ ತಪ್ಪನ್ನೊಪ್ಪಿಕೊಂಡು ಕಾಗದ ಬರೆಯುಬಹುದು ಅಥವಾ ವಸಂತು ತನ್ನ ದುಂಡಕ್ಷರಗಳಲ್ಲಿ ವಕ್ರವಕ್ರ ರೇಖೆಗಳಲ್ಲಿ ತನ್ನನ್ನು ಬಾರೆಂದು ಕರೆಯುಬಹುದು, ಇಲ್ಲದಿದ್ದರೆ ತನ್ನ ಯಜಮಾನರೆ ಕಾಗದ ಹಾಕಬಹುದು. ಹೇಗೊ, ಯಾರು ಬರೆದರೂ ಸರಿ—ಕಾಗದ ಬಂದರೆ ಸಾಕು ಎಂದು ಆಸೆಪಟ್ಟಳು ಶಾಂತ. ಈ ಆಸೆ ತುಟಿಯ ಮೇಲೊಂದು ನಗೆಯನ್ನು ಸುಳಿಸಿದರೂ ಮುಖದ ಮೇಲೆ ಮೂಡಿದ್ದ ಉದಾಸ ಮಾಸಲಿಲ್ಲ. ರೂಮಿನಲ್ಲಿ ಸುಮ್ಮನೆ ಕುಳಿತಿದ್ದಳು.

ಅತ್ತಿಗೆ ಲೀಲಾ ಹಾಗೆಯೆ ಸುತ್ತಿಕೊಂಡು ಬರೋಣವೆಂದು ಕರೆದರೆ ಅದೂ ಬೇಕಾಗಲಿಲ್ಲ. ತಾಯಿಯ ಜತೆಯಲ್ಲಿ ಮಾತುಕತೆಯೂ ಬೇಕಾಗಲಿಲ್ಲ. ಕಣ್ಣು ತೆರೆದುಕೊಂಡು ಏನನ್ನೂ ನೋಡದೆ ಹಾಗೆಯೆ ಕುಳಿತಿದ್ದಳು. ಏನೊ ಕಳೆದು ಕೊಂಡಂತಾಗಿತ್ತು ಅವಳ ಜೀವ.

ಸಂಜೆ ಮತ್ತೆ ತಾಯಿಯ ಸ್ನೇಹಿತರ ಗುಂಪು ಸೇರಿತು. ಶಾಂತಳ ಬಗ್ಗೆ ಎಲ್ಲರೂ ವಿಚಾರಿಸುವವರೆ. ಸಾವಿತ್ರಮ್ಮನವರು ಯಾವುದೊ ಉತ್ತರ ಹೇಳಿ ಕೊಂಡರು. ಎಲ್ಲರಿಗೂ ಸ್ವಲ್ಪ ಅನುಮಾನವೆ ಆಯಿತು. ಅನುಮಾನವನ್ನು ಅಷ್ಟು ಮಾತಿನಲ್ಲಿ ಹೇಳದಿದ್ದರೂ ಅಷ್ಟರಲ್ಲೆ ಸೂಚಿಸಿದ್ದರು. ಅವರಲ್ಲಿ ಶಾರದಮ್ಮ, ಶಂಕರಮ್ಮ ಇಬ್ಬರೂ ಶಾಂತ ಮಲಗಿದ್ದ ರೂಮಿಗೆ ಬಂದು ಇಣಿಕಿ ನೋಡಿದರು. ಶಾಂತ ನಿದ್ರೆ ಬಂದವಳಂತೆ ಮಲಗಿದ್ದಳು. ಒಂದೆರಡು ಬಾರಿ ಕರೆದರೂ ಅವಳು ಅಲುಗಲೆ ಇಲ್ಲ. ಆಗ ಇಬ್ಬರೂ ನಿರಾಶೆಗೊಂಡು ಹೊರಟರು. ಶಂಕರಮ್ಮನವರಂತೂ ಅವಳಲ್ಲಿ ಬಹಳ ಸಹಾನುಭೂತಿ ತೋರು ವಂತೆ, "ಪಾಪ! ಎಷ್ಟು ಸೊರಗಿಹೋಗಿದಾಳೆ. ಏನು ಕಷ್ಟವೊ ಅಲ್ಲಿ" ಎಂದರು. ಈ ಮಾತು ಕೇಳಿ ಶಾಂತಳಿಗೆ ಕೋಪ ಹೆಡೆ ಮೆಟ್ಟಿದ ಹಾವಿನಂತೆ ಎದ್ದಿತು. ಆದರೆ ವಿಧಿಯಿಲ್ಲದೆ ಸುಮ್ಮನಿದ್ದಳು.

ಅದಾದ ಮರುದಿನದಿಂದಲೆ ಪೋಸ್ಟ್ ಜವಾನ ಬರುವ ಹೊತ್ತನ್ನು ಆಸೆಯಿಂದ ಎದುರುನೋಡುತ್ತಿದ್ದಳು. ಹನ್ನೊಂದು ಗಂಟೆಗೆ ಬರುವ ಪೋಸ್ಟಿ ಗಾಗಿ ಒಂಬತ್ತು ಗಂಟೆಯಿಂದಲೆ ಚಡಪಡಿಸುತ್ತಿದ್ದಳು. ಅವನು ದೂರದಲ್ಲಿ ಬಂದನೆಂದರೆ ಅವಳೆದೆ ಢಕಢಕಗುಟ್ಟುತ್ತಿತ್ತು. ಆಸೆನಿರಾಶೆಗಳೆರಡರ ದ್ವಂದ್ವದಲ್ಲಿ ಮತ್ತೆಲ್ಲವೂ ಮರೆಯುತ್ತಿತ್ತು. ಕಾಗದ ಬಂದಿರಬಹುದೆನ್ನುವ ಅರೆನಂಬಿಕೆಯಲ್ಲಿ ಮುಖದ ಉದಾಸ ಕ್ಷಣಕಾಲ ಮರೆಯಾಗಿ ಆಸೆ ಆಸಕ್ತಿ ಮೂಡಿಬರುತ್ತಿತ್ತು. ಆದರೆ ಹಿಂದೆಯೆ ಕಾತರವೂ ಹೊಡೆದುಕೊಳ್ಳುತ್ತಿತ್ತು. ಕಾಗದ ಬಂದಿರಲಾರ ದೆನ್ನುವ ಕಳವಳವೂ ಹಿನ್ನೆಲೆಯಲ್ಲಿರುತ್ತಿತ್ತು. ನಡಗುವ ಕೈಗಳಲ್ಲಿ ಕಾಗದಗಳ ನ್ನೆತ್ತಿಕೊಂಡು ಕಾತರಗಣ್ಣುಗಳಲ್ಲಿ ಅವುಗಳನ್ನೆಲ್ಲಾ ನೋಡುತ್ತಿದ್ದಳು. ಹುಂ! ತನಗೆ ಅದೃಷ್ಟವಿಲ್ಲವೆಂದುಕೊಂಡು ನಿಟ್ಟುಸಿರು ಬಿಡುತ್ತಿದ್ದಳು. ಮುಖದಲ್ಲಿ ಮತ್ತೆ ಉದಾಸ ಭಾವ ಮೂಡಿಬರುತ್ತಿತ್ತು. ಕ್ಷಣಕಾಲ ಆತುರ ಗೊಂಡಿದ್ದ ಕಣ್ಣುಗಳಲ್ಲಿ ಮತ್ತೆ ಮಂಕು ನೆರಳು ಸೇರಿಕೊಳ್ಳುತ್ತಿತ್ತು. ಏನೂ

ಬೇಕಿಲ್ಲವಾಗಿ ಹೃದಯ ಬೇಸರಗೊಳ್ಳುತ್ತಿತ್ತು. ಜೀವ ರೋಸಿ ಹೋಗುತ್ತಿತ್ತು. ಯೋಚನೆಯ ಭಾರದಲ್ಲಿ ಮನಸ್ಸು ಕುಗ್ಗುತ್ತಿತ್ತು. ಹಾಗೂ ಹೀಗೂ ತಾಯಿಯ ಬಲವಂತಕ್ಕಾಗಿ ಊಟ ಮಾಡುವ ಶಾಸ್ತ್ರ ಮಾಡುತ್ತಿದ್ದಳು. ಆಗ ಕೂಡ ತಾಯಿಯ ಪ್ರೀತಿಯ ಮಾತು ಅವಳಿಗೆ ವಿಷವಾಗಿ ಕೇಳುತ್ತಿತ್ತು: "ಒಂದು ತುತ್ತು ಊಟ ಮಾಡುತ್ತೀಯಲ್ಲೆ—ಎಳೆ ಮಕ್ಕಳ ಹಾಗೆ. ಪಾಪ! ಅಲ್ಲಿ ಕೊಂಚ ಕೊಂಚ ಹಾಕಿ ಅಭ್ಯಾಸ ಮಾಡಿದಾರೆ, ಹೊಟ್ಟೆ ಸಣ್ಣದಾಗಿದೆ. ಕಂದಿ ಹೋಗಿದೆ" ಎಂದು ಅಂದು ಬಲವಂತದಿಂದ ಒಂದು ತುತ್ತು ಹೆಚ್ಚಿಗೆ ಅನ್ನ ಹಾಕುತ್ತಿದ್ದರು. ಆ ಮಾತಿನ ಪ್ರೀತಿ ಶಾಂತಳ ಮನಸ್ಸು ತಾಕುತ್ತಿರಲಿಲ್ಲ. ಅದರ ಆರೋಪ ಅವಳನ್ನು ಕೆಣಕುತ್ತಿತ್ತು. ಆದರೆ ಹೇಗೊ ಕಷ್ಟಪಟ್ಟು ಮಾತನ್ನು ನಾಲಗೆಯ ತುದಿಯಲ್ಲಿ ಕಟ್ಟಿಹಾಕುತ್ತಿದ್ದಳು. ನೋವನ್ನು ಮೌನವಾಗಿ ಅನುಭವಿಸುತ್ತಿದ್ದಳು.

ಶಾಂತಳಿಗೆ ಈ ಕೊರಗು ಯಾವಾಗಲೂ ಮನಸ್ಸನ್ನು ಕೊರೆಯುತ್ತಿತ್ತು. ಅದರ ಭಾರ ತಡೆಯುವುದು ಬಹಳ ಕಷ್ಟವಾಗಿತ್ತು. ಯಾರಿಗಾದರೂ ಅದನ್ನು ಹೇಳಿಕೊಳ್ಳಬೇಕು, ಯಾರ ಬಾಯಲ್ಲಾದರೂ ನಾಲ್ಕು ಮಾತು ಅನುಕಂಪ ಕೇಳಬೇಕು. ತನ್ನ ಅತ್ತೆಯ ಮನೆಯವರನ್ನು ಬೈಯದೆ ತನ್ನನ್ನು ಅಂದರೂ ಚಿಂತೆಯಿಲ್ಲ. ಆದರೆ ಮನಸ್ಸಿಗೆ ಸಮಾಧಾನ ಕೊಟ್ಟರೆ ಸಾಕೆನ್ನಿಸಿತು. ಮೊದಲ ದಿನ ರಾತ್ರಿಯೆ ಅತ್ತಿಗೆಗೆ ಹೇಳಿಬಿಡುವುದರಲ್ಲಿದ್ದಳು. ಆದರೆ ಆ ಹೊತ್ತಿನಲ್ಲೆ ಲೀಲಾ ಮಗುವಿನ ಕೆಲಸದಲ್ಲಿ ಬೇರೆ ಕಡೆ ಗಮನ ಕೊಟ್ಟುದರಿಂದ ಅವಳಿಗೆ ಹೇಳಲಿಲ್ಲ. ಈಗಲೂ ಯಾರು ಸಿಕ್ಕಿದರೂ ಹೇಳಬಹುದೆಂದುಕೊಂಡಳು. ಬಂದು ಎರಡು ಮೂರು ದಿನಗಳಾಗಿತ್ತು. ಲೀಲಾ ಯಾವಾಗಲೂ ಶಾಂತಳನ್ನು ಸಮಾಧಾನ ಪಡಿಸಲು ಯತ್ನಿಸುತ್ತಿದ್ದಳು. ಊಟಕ್ಕೆ, ಸ್ನಾನಕ್ಕೆ ಎಲ್ಲಕ್ಕೂ ಬಂದು ಎಬ್ಬಿಸುತ್ತಿದ್ದಳು. ಪದೆ ಪದೆ ಬಲವಂತಪಡಿಸಿ, ಉದಾಸೀನವನ್ನು ಕಳೆಯಲು ಹೊರಕ್ಕೆಳೆದುಕೊಂಡು ಹೋಗಲು ಪ್ರಯತ್ನಿಸುತ್ತಿದ್ದಳು. ಆದರೆ ಈ ಎರಡು ಮೂರು ದಿನವೂ ಶಾಂತ ಗಟ್ಟಿಯಾಗಿ ರೂಮಿನಲ್ಲಿಯೆ ಕುಳಿತು ಬಿಟ್ಟಿದ್ದಳು. ಆದರೆ ಲೀಲಾ ಮಾತ್ರ ಕೊಂಚವೂ ಬೇಸರಪಡದೆ ಅವಳನ್ನು ಸಮಾಧಾನ ಪಡಿಸುತ್ತಿದ್ದಳು: "ಯಾಕೆ ಹೀಗೆ, ನಿನ್ನ ಮನಸ್ಸಿನಲ್ಲಿ ಏನು ಕೊರಗು ಹತ್ತಿಸಿಕೊಂಡಿದೀಯೆ? ನನಗೆ ಹೇಳು" ಎಂದು ಬಲವಂತಪಡಿಸು

ತ್ತಿದ್ದಳು. ಒಂದೆರಡು ಬಾರಿ ಶಾಂತಳಿಗೆ ದುಃಖ ಬಾಯಿಗೆ ಬಂದಿದ್ದರೂ, ಹೆದರಿಕೆಯಿಂದ ಹೇಳಿರಲಿಲ್ಲ. ಅಲ್ಲದೆ, ಈವತ್ತೊ ನಾಳೆಯೊ ಕಾಗದ ಬರಬಹು ದೆಂಬ ಒಂದು ಭ್ರಮೆಯ ಆಸೆಯೂ ಇತ್ತು. ಎರಡು ಮೂರು ದಿನವಾದರೂ ಕಾಗದ ಬರಲಿಲ್ಲ. ರೂಮಿನಲ್ಲಿ ಕುಳಿತಿರುವುದು ಕೂಡ ಶಾಂತಳಿಗೆ ಬಹಳ ಬೇಸರವಾಯಿತು. ಹೇಗೊ ಒಂದು ಇದ್ದರಾಯಿತು ಎಂಬ ತಾತ್ಸಾರ ಭಾವ ಬಂತು. ಆದರೂ ಇದರಲ್ಲಿಯೂ ಒಂದು ಆಸೆ. ಮೊದಲೆರಡು ದಿನವಿಲ್ಲದ ಹೊಸ ಆಸಕ್ತಿಯೊಂದು ಮೂರನೆಯ ದಿನ ಬಂದಿತ್ತು. ಲೀಲಳ ಮಗು ಅನಂತ ರಾಮು ಮೊದಲೆರಡು ದಿನ ಹೊಸ ಮುಖವಾದ್ದರಿಂದ ದೂರದಿಂದಲೆ ನೋಡಿ ಹಣಿಕೆ ಹಾಕುತ್ತಿದ್ದ. ಕರೆದರೆ ಮುಖ ತಿರುಗಿಸಿಕೊಳ್ಳುತ್ತಿದ್ದ. ಎತ್ತಿಕೊಳ್ಳಲು ಶಾಂತಳಿಗೂ ಇಚ್ಛೆಯಿರಲಿಲ್ಲ. ಮಗು ಮಾತ್ರ ಮುದ್ದುಮುದ್ದಾಗಿತ್ತು. ಶಾಂತಳ ಹೆಂಗರುಳು ಅವಳಿಗರಿವಿಲ್ಲದೆ ಅವಳ ಆಸಕ್ತಿಯನ್ನು ಆ ಮಗುವಿನ ಕಡೆಗೆ ಎಳೆಯುತ್ತಿತ್ತು. ಬೇಸರದ ಮನಸ್ಸು ಮಗುವಿನ ಕಡೆ ಮೆಲ್ಲನೆ ತಿರುಗಿತು. ಲೀಲಾ ಅನಂತುವನ್ನು ಹತ್ತಿರ ತಂದು "ನಿಮ್ಮ ಅತ್ತೆ ಕಣೊ" ಎಂದಾಗ ಮೊದಲು ಅತ್ತಿಗೆ ಏನಾದರೂ ಅಂದುಕೊಂಡಾಳೆಂದು, ಬಾರದ ನಗೆಯನ್ನು ತಂದುಕೊಂಡು "ಬಾರೊ, ಮರಿ" ಎಂದು ಕೈ ನೀಡುತ್ತಿದ್ದಳು. ಮಗು ತಾಯಿಯನ್ನೆ ತಬ್ಬಿಕೊಂಡು ಅಳುತ್ತಿದ್ದ. ಆಮೇಲೆ ಲೀಲಾ "ಇನ್ನೂ ಹೊಸ ಮುಖ ನೋಡು. ಇನ್ನೇನು ಎಲ್ಲ ನಾಳೆ ನಾಡಿದ್ದರಲ್ಲಿ ನಿನ್ನನ್ನು ಬಿಟ್ಟಿರುವುದೆ ಇಲ್ಲ, ನೋಡುತ್ತಿರು" ಎಂದು ತನ್ನ ಮಗುವನ್ನು ಮುತ್ತಿಟ್ಟು ಸಮಾಧಾನಪಡಿಸುತ್ತಿದ್ದಳು. ಒಂದು ವರ್ಷವಾದರೂ ಅನಂತು ವಿಗೆ ಎದ್ದು ನಡೆಯಲು ಬರುತ್ತಿರಲಿಲ್ಲ. ಮಗು ಸ್ವಲ್ಪ ಸಣಕಲಾಗಿತ್ತು. ಆರೇಳು ತಿಂಗಳಾಗಿದ್ದಾಗ ಕಾಯಿಲೆ ಬಿದ್ದುದರಿಂದ ಮಗು ಹೀಗಾಗಿತ್ತೆಂದು ಲೀಲಾ ಹೇಳಿದಳು. ಈಗ ಅನಂತು ತಪ್ಪು ಹೆಜ್ಜೆ ಹಾಕಲು ಯತ್ನಿಸುತ್ತಿದ್ದ. ಎದ್ದು ನಿಲ್ಲಲು ಹೋದರೆ ಕಾಲುಗಳು ಭಾರ ತಡೆಯಲಾರದೆ ಇನ್ನೂ ಕುಸಿಯು ತ್ತಿದ್ದವು. ಆದರೂ ನಡೆಯುವ ಆಸೆ. ಮಾತುಗಳೂ ಕೂಡ ತೊದಲು ತೊದಲಾಗಿ ಬರುತ್ತಿದ್ದವು. 'ಅಮ್ಮ, ತಾತ' ಎರಡು ಚೆನ್ನಾಗಿ ಬರುತ್ತಿದ್ದವು. ಈಗ ಲೀಲಾ ಆಗಾಗ ಶಾಂತಳ ಹತ್ತಿರ ಕುಳಿತು ಮಾತನಾಡುತ್ತಿದ್ದುದರಿಂದ ಶಾಂತಳನ್ನೆ ನೋಡುತ್ತ ನೋಡುತ್ತ ಅನಂತು ಅವಳೂ ತಮ್ಮ ಮನೆಯವ

ಳೆಂದು ತಿಳಿದ. ಮೂರನೆಯ ದಿನ ಲೀಲಾ, ಶಾಂತ ಮಾತನಾಡುತ್ತಿದ್ದಾಗ ಮೆಲ್ಲನೆ ತೆವಳಿಕೊಂಡು ಶಾಂತಳ ಹತ್ತಿರ ಬಂದ. “ಬಾರೊ—ಬಾ, ಇಲ್ಲಿ” ಎಂದು ಶಾಂತ ಕರೆದಳು. ಮೊದಲು ಕೊಂಚ ಹಿಂಜರಿದರೂ ಒಂದೆರಡು ನಿಮಿಷದನಂತರ ಅವಳ ಹತ್ತಿರಕ್ಕೆ ಬಂದ. ತೊಡೆಯ ಮೇಲೆ ಕುಳಿತು ಅವಳ ಕೊರಳಲ್ಲಿದ್ದ ಸರಕ್ಕೆ ಕೈಹಾಕಿದ. “ತುಂಟ ಮರಿ” ಎಂದು ಶಾಂತ ಅವನಿಗೆ ಮುತ್ತಿಟ್ಟಳು. ಆ ಸಮಯದಲ್ಲಿ ಅವಳ ಮನಸ್ಸಿನ ಬೇಸರ ಹಿಂದಕ್ಕೆ ಹೋಯಿತು. ಮಗುವಿನ ಆಟದಲ್ಲಿ ಮಗ್ನಳಾದ ಅವಳ ಮನಸ್ಸು ನಾಳಿನ ಕಡೆಗೆ ನೋಡಿತು. ತನ್ನ ಮಗುವನ್ನು—ತಮ್ಮ ಮಗುವನ್ನು—ತಾವಿಬ್ಬರೂ ಆಟವಾಡಿಸುವುದು ಸಾಧ್ಯವೆ ಎನಿಸಿ ಹೃದಯ ಮತ್ತೆ ಮುಲುಗಿತು. ಕಣ್ಣಿನಲ್ಲಿ ಹನಿಯೂಡಿತು. ಲೀಲಾ ಅದನ್ನು ಕಂಡಳೊ ಏನೊ ಮರುಕದ ದನಿಯಲ್ಲಿ “ಯಾಕೆ, ಶಾಂತ. ಯಾಕೆ ಯಾವಾಗಲೂ ಹೀಗೆ ಕೊರಗುತ್ತ ಕಣ್ಣೀರು ಹಾಕುತ್ತ ಇರುವೆಯಲ್ಲ. ಏನು, ನನಗಾದರೂ ಹೇಳು” ಎಂದಳು. ಶಾಂತಳಿಗೆ ದುಃಖ ಮರುಕಳಿಸಿ ಬಂತು. ಅದನ್ನು ಹೇಗೆ ಹೇಳಿಕೊಳ್ಳುವುದು, ತನ್ನ ಮನಸ್ಸಿನ ಕೊರಗನ್ನು. ಅದನ್ನು ಲೀಲಾ ಅಪಾರ್ಥ ಮಾಡಿಕೊಳ್ಳದೆ ಸರಿಯಾಗಿ ತಿಳಿದು ಕೊಳ್ಳುವಳೆಂಬ ನಂಬಿಕೆಯಾದರೂ ಏನು? ತೊಡೆಯ ಮೇಲಿದ್ದ ಅನಂತು ಶಾಂತಳ ಕೊರಳಿನ ಸರವನ್ನೆಳೆಯುತ್ತ ಅತ್ತೆ ಎನ್ನಲು ಯತ್ನಿಸಿ ‘ಕತ್ತೆ’ ಎಂದ. ತಕ್ಷಣ ಈ ಅಳುವಿನಲ್ಲೂ ಶಾಂತಳಿಗೆ ನಗು ಬಂತು. ಲೀಲಳೂ ಹಿಗ್ಗಿ ನಗುತ್ತ, “ಥೂ! ತುಂಟ. ಕತ್ತೆ ಅಲ್ಲ ಕಣೊ ಅತ್ತೆ, ಅತ್ತೆ ಅನ್ನು” ಎಂದು ಮಗುವಿನ ಕೆನ್ನೆಯನ್ನು ಸವರಿದಳು. ಅನಂತು ಶಾಂತಳನ್ನೆ ತಬ್ಬಿಕೊಂಡು ಸರವನ್ನು ಜಗ್ಗಲಾರಂಭಿಸಿದ. ಅವನ ಈ ಆಟ ಶಾಂತಳ ಮನಸ್ಸಿಗೆ ಕೊಂಚ ಹಿತವಾಯಿತು. ಬೆಂಕಿ ಕೊಂಚ ಶಾಂತವಾಯಿತು. ಮಗು ಕೊಚಕೊಚನೆ ಹೇಳಲಾರಂಭಿಸಿತು. ಶಾಂತ ಅದರ ಮೋಹದಲ್ಲಿ, ಅದರ ಆಟದಲ್ಲಿ ಪರವಶ ಳಾಗಿ ಮುತ್ತಿಟ್ಟಳು. ಅದನ್ನು ಮತ್ತೆ ತಬ್ಬಿಕೊಂಡಂತೆ ಅವಳ ಮೈಯೆಲ್ಲ ಪುಲಕವಾಯಿತು. ಕೆನ್ನೆಗೆ ಲಟಲಟನೆ ಮುತ್ತಿಟ್ಟಳು. ಕಣ್ಣಿನಿಂದ ಮತ್ತೆ ಮಳೆಗರೆಯಿತು.

ತನ್ನ ಮೈದುನನೊಂದಿಗೆ ಜಗಳವಾಡಿದೆನೆಂದು ಮಾತ್ರ ಹೇಳಲಿಲ್ಲ. ಆವರೆ ಬಹಳ ಪ್ರೀತಿಯ ಸಾಂತ್ವನೆಗೆ ಮನಸೋತು ತಾನು ಅತ್ತೆಯ ಮನೆ

ಯಿಂದ ಆಕ್ರೋಶದಲ್ಲಿ ಬಂದುಬಿಟ್ಟೆನೆಂದು ಹೇಳಿಕೊಂಡುಬಿಟ್ಟಳು. ತಾನು ಮಾಡಿದುದು ದುಡುಕಿನ ಕೆಲಸ, ಹಾಗೆ ಮಾಡಬಾರದಾಗಿತ್ತು ಎಂದು ತನ್ನನ್ನು ತಾನೆ ಹಳಿದುಕೊಂಡಳು. ಲೀಲಾ ನಿಧಾನವಾಗಿ ಎಲ್ಲ ಕೇಳಿಕೊಂಡು ಶಾಂತ ಳನ್ನು ಸಮಾಧಾನಪಡಿಸಲು ಒಳ್ಳೆಯ ಮಾತಾಡಿದಳು. ಇದು ದೊಡ್ಡ ಮಾತಲ್ಲ, ಅವಳು ಇಷ್ಟಕ್ಕೆಲ್ಲ ಕೊರಗಬಾರದು. ಅವಳ ಯಜಮಾನರು ಖಂಡಿತವಾಗಿ ಬರುವರು, ಬಂದು ಕರೆದೊಯ್ಯುವರು, ಇಲ್ಲದಿದ್ದರೆ ಖಂಡಿತವಾಗಿಯೂ ಕಾಗದ ಬರೆಯುವರು. ಕರೆಸಿಕೊಳ್ಳುವರೆಂದು ಆಸೆಯ ಮಾತುಗಳನ್ನೂ ಆಡಿದಳು. ಅವಳ ಸಾಂತ್ವನದಿಂದ, ಅವಳ ಮೃದು ಮಾತಿನಿಂದ ಶಾಂತಳ ಹೃದಯದಲ್ಲಿ ತುಂಬಿದ್ದ ದುಃಖ ಹೊರಬಿತ್ತು. ಅನಂತುವನ್ನು ತಬ್ಬಿಕೊಂಡು ಗಳಗಳನೆ ಅತ್ತುಬಿಟ್ಟಳು. ಲೀಲಳಿಗೆ ಕೂಡ ಶಾಂತಳ ಅಳು ಕಂಡು ಕಣ್ಣಿನಲ್ಲಿ ನೀರಿನ ಪರದೆ ಕಾಣಿಸಿಕೊಂಡಿತು.

ಆ ಸಂಜೆ ಹೊರಗೆ ಸೇರಿದ ಗುಂಪು ಮಾತಾಡುತ್ತಿದ್ದುದು ಲೀಲಳ ಜತೆಯಲ್ಲಿ ಶಾಂತ ಹೊರಟುದನ್ನು ಕಂಡು ಗುಸಗುಸ ಎಂದಿತು. ಶಂಕರಮ್ಮ ನವರಂತೂ ಖಡ್ಗದಂತಹ ನೋಟ ಬೀರುತ್ತ, “ ಏನಮ್ಮ ಶಾಂತ, ಸೌಖ್ಯ ವಾಗಿದೀಯಾ ? ” ಎಂದರು. ಶಾರದಮ್ಮ ಉಳಿದವರೆಲ್ಲ ಶಾಂತಳನ್ನೆ ಹಸಿವೆ ಗಣ್ಣಿನಿಂದ ನೋಡುತ್ತಿದ್ದರು. “ ಹೂಂ ” ಎಂದಷ್ಟೆ ಅಂದು ಶಾಂತ ಹೊರಟು ಬಿಟ್ಟಳು. ಸಾವಿತ್ರಮ್ಮನವರು ಹಿತ್ತಲ ಕಡೆಯಲ್ಲಿ ಮುಸುರೆಪಾತ್ರೆ ಹಾಕಿ ಬಂದಿದ್ದವರು ಮುಸುರೆಯವಳು ಕೂಗಿದ್ದರಿಂದ ಹಿಂದಕ್ಕೆ ಹೋದರು. ಅದೇ ಸಮಯ—ಆ ಹೆಂಗಸರಿಗೆ !

“ ಎಷ್ಟು ಹೆಡಸು ನೋಡಿ ಅವಳಿಗೆ. ಮಾತಾಡಿಸಿದರೆ ಮಾತು ಕೂಡ ಆಡುವುದಿಲ್ಲ ” ಎಂದು ಟೀಕಿಸಿದರು ಶಂಕರಮ್ಮ.

“ ಅಯ್ಯೋ ಬಿಡೀಂದ್ರೆ. ಅವಳು ಹೀಗೆ ಇದ್ದಕ್ಕಿದ್ದ ಹಾಗೆ ಬಂದದ್ದು ನೋಡಿದರೆ ನನಗೇನೊ ಅನುಮಾನ ” ಎಂದು ಶಾರದಮ್ಮ ಪಿಸುಮಾತಾಡು ವಂತೆ ಜೋರಾಗಿ ಅಂದರು.

“ ನನಗೂ ಹಾಗೆಯೆ ಅನ್ನಿಸಿತು. ಇಲ್ಲದೆ ಹೋದರೆ ಹಾಗೆ ಕಂದಿ ಬಾಡಿದ ಬದನೆಕಾಯಿ ಹಾಗೆ ಬರತಾ ಇದ್ದಳೆ ? ” ಎಂದರು ಮತ್ತೊಬ್ಬರು.

“ ಬಂದು ಮೂರು ದಿನವಾಯಿತು, ಹೊರಕ್ಕೆ ತಲೆ ಹಾಕಿಲ್ಲ. ಏನೊ

ಇದೆ" ಎಂದರು ಶಾರದಮ್ಮ ಮತ್ತೊಮ್ಮೆ.

"ನಾನು ಹೇಳ್ತೀನಿ ನೋಡಿ. ಎಲ್ಲೋ ಮಾವನ ಮನೆಯಿಂದ ಓಡಿಸಿ ಬಿಟ್ಟದಾರೆ. ಅದಕ್ಕೆ ಮುಖ ಎತ್ತೋಕೆ ಹೀನಾಯ. ಮಾತಾಡೋದಕ್ಕೆ ಮುಖವಿರಬೇಕಲ್ಲ. ಅವಮಾನವಲ್ಲವೆ?" ಎಂದು ಕುಹಕವಾಗಿ ಅಂದರು ಶಂಕರಮ್ಮ.

"ಏನೋಮ್ಮ, ಅಂತೂ ಏನೊ ಇದೆ ಅಂತ ನನಗೆ ಅನುಮಾನ ವಾಯ್ತು. ಈಗ ನೀವೆ ಹೇಳಿದಿರಲ್ಲ, ಹಾಗೆ ಇದ್ದರೂ ಇರಬಹುದು" ಎಂದರು ಮೊದಲು ಮಾತಾಡಿದ ಹೆಂಗಸು.

"ಇರಬೇಕೇನು? ಅದೇ ಕಾರಣ. ನನಗೆ ಗೊತ್ತು" ಎಂದರು ಶಂಕರಮ್ಮ ಮಾತಿನಲ್ಲಿ ಗೆದ್ದವರಂತೆ.

ಸಾವಿತ್ರಮ್ಮನವರು ಬರುವ ಸದ್ದಾಗಲು ಎಲ್ಲರೂ ಸುಮ್ಮನಾಗಿಬಿಟ್ಟರು. ಸಾವಿತ್ರಮ್ಮನವರು ಏನೂ ಶಂಕೆಯಿಲ್ಲದೆ ಮೊದಲಿನಂತೆ ಬಂದು ಕುಳಿತರು. ಅವರು ಕುಳಿತುಕೊಳ್ಳುತ್ತಿದ್ದಂತೆ ಶಾರದಮ್ಮನವರು ತಮ್ಮ ಕುತೂಹಲ ತಡೆಯಲಾರದೆ ಶಾಂತಳ ಬಗ್ಗೆ ಕೇಳಿಬಿಟ್ಟರು :

"ಯಾಕೆ ಸಾವಿತ್ರಮ್ಮನವರೆ, ಶಾಂತಳಿಗೆ ಮೈ ಚೆನ್ನಾಗಿಲ್ಲವೆ?" ಎಂದರು.

"ಏನೋಮ್ಮ. ಏನೊ ಕೊರಗು ಹಚ್ಚಿಕೊಂಡು ಕುಳಿತಿದಾಳೆ. ಜೊತೆಗೆ ಮೂರು ತಿಂಗಳು ಬೇರೆ ಆಗಿದೆ. ನೀವೆ ನೋಡಿದಿರಲ್ಲ" ಎಂದು ಸಾವಿತ್ರಮ್ಮ ನಿಟ್ಟುಸಿರು ಬಿಟ್ಟರು.

ಉಳಿದವರಿಗೆ ಮಾತಿಗೆ ಇಷ್ಟು ಅನುವು ಸಾಕಾಯಿತು. ತಮಗಿಷ್ಟ ಬಂದಂತೆ ಆ ವಿಷಯಕ್ಕೆ ಮಾತಾಡಿದರೂ ಕೇಳುವವರಿಲ್ಲವೆಂದು ಅವರಿಗನಿಸಿತು. ಸಹಾನುಭೂತಿ ತೋರಿಸುವ ನೆಪದಲ್ಲಿ ಒಳಗಿನ ಗುಟ್ಟನ್ನು ತಿಳಿಯುವ ಆಸೆ ಕಿವಿಯವರು ಅವರೆಲ್ಲ. ಶಂಕರಮ್ಮನಿಗಂತೂ ಅದೇ ಜೀವನಾಧಾರವಾಗಿ ದ್ದಂತಿತ್ತು. ಈ ರಹಸ್ಯವನ್ನೊಡೆಯುವೆನೆಂದುಕೊಂಡು,

"ಅಲ್ಲಾಂದ್ರೆ, ಶಾಂತ ಯಾಕೆ ಹೀಗೆ ಕಂಗೆಟ್ಟುಕೊಂಡಿದಾಳೆ. ಪಾಪ, ಹೇಗಾಗಿಹೋಗಿದಾಳೆ. ಆಸ್ಪತ್ರೆಗಾದರೂ ತೋರಿಸಿ" ಎಂದರು ಸಹಾನು ಭೂತಿಯ ಸೋಗಿನಲ್ಲಿ.

" ಹೌದು. ಊಟ ಗೀಟ ಸರಿಯಾಗಿ ಮಾಡುತಾಳೊ ಇಲ್ಲವೊ—" ಎಂದರು ಶಾರದಮ್ಮ.

" ಊಟವೆ ಬೇಕಿಲ್ಲ ನೋಡಿ, ಅವಳಿಗೆ. ಭಿಕ್ಷಾನ್ನದ ಹುಡುಗನಿಗೆ ಹಾಕುವ ಹಿಡಿ ಅನ್ನವೆ ಅವಳಿಗೆ ಹೆಚ್ಚಾಗುತ್ತೆ. ಹೊಟ್ಟೆ ಹಸಿವೆಯೆ ಇಲ್ಲ ಅಂತಾಳೆ. ಏನು ಕರ್ಮವೊ ಏನೊ" ಎಂದರು ಸಾವಿತ್ರಮ್ಮ.

" ಹಾಗಂದರೆ ಹೇಗೆ. ಬಸುರಿ—ಅನ್ನ ಸೇರಿಸಿಕೊಂಡು ಊಟ ಮಾಡ ಬೇಕು, ಇಲ್ಲದಿದ್ದರೆ ಮೈ ತಡೆಯಬೇಕಲ್ಲ!" ಎಂದರು ಶಂಕರಮ್ಮ.

" ಏನು ಮಾಡಲಿ ಹೇಳಿ. ಊಟ ಮಾಡುವುದೆ ಇಲ್ಲ. ತಿಂಡಿ ಕೊಟ್ಟರೆ ಬೇಡ ಅನ್ನುತ್ತಾಳೆ. ಎಲ್ಲೊ ಅಲ್ಲಿ ಅತ್ತೆ ಮನೆಯಲ್ಲಿ ಇಷ್ಟಿಷ್ಟೆ ಹಾಕಿ ಅಭ್ಯಾಸ ಮಾಡಿಬಿಟ್ಟಿದಾರೆ. ಈಗ ಸೇರಬೇಕು ಅಂದರೆ ಹೇಗೆ ಸೇರುತ್ತೆ" ಎಂದು ತಮ್ಮ ದುಃಖವನ್ನು ಸಾವಿತ್ರಮ್ಮ ತೋಡಿಕೊಂಡರು.

" ಏನು ಹಿಂಸೆ ಕೊಡತಾರಮ್ಮ. ಇಂತಹ ಮುತ್ತಿನಂತಹ ಸೊಸೆಯಿದ್ದು ಕೂಡ ಅದು ಹೇಗೆ ಹಿಂಸೆ ಕೊಡೋಕೆ ಮನಸ್ಸು ಬರುತ್ತದೋಮ್ಮ" ಎಂದರು ಶಾರದಮ್ಮ.

" ಕಟುಕರು, ಕಟುಕರು! ಅವರ ಕರುಳು ಹೇಗೆತಾನೆ ತಡೆಯುತ್ತದೊ ಕಾಣೆ. ಈಗ ನೋಡಿ, ನಮ್ಮ ಮನೆಯಲ್ಲಿ ನನ್ನ ಸೊಸೆ ಇದಾಳಲ್ಲ, ಅವಳು ನಮ್ಮ ಮನೆಗೆ ಬಂದಾಗ ಏನೂ ಬರ್ತಾ ಇರಲಿಲ್ಲ. ಈಗ ಕೂಡ ಏನೂ ಸರಿ ಯಾಗಿ ಬರೋದೆ ಇಲ್ಲ. ಆದರೆ ನಾನು ಅವಳನ್ನು ಒಂದು ಮಾತನ್ನುವುದೂ ಇಲ್ಲ. ಯಾರ ಹತ್ತಿರ ಹೇಳುವುದೂ ಇಲ್ಲ. ನಿಮ್ಮ ಶಾಂತ ಎಷ್ಟು ಜಾಣೆ, ಎಲ್ಲಾ ಕಲಿತವಳು. ಚೆನ್ನಾಗಿ ಸುಟಿಯಾಗಿರುತ್ತಿದ್ದವಳು" ಎಂದರು ಆ ಥಡೂ ತಿಯ ಹೆಂಗಸು.

" ಆ ಸುಟಿಯೆಲ್ಲ ಎಲ್ಲೊ ಹೋಯಿತು. ಮೂರು ಹೊತ್ತೂ ಪೆಚ್ಚಾಗಿ ರೂಮಿನಲ್ಲಿ ಕುಳಿತಿರತಾಳೆ. ಈವತ್ತೆ ಹೊರಗಡೆ ಹೊರಟಿದ್ದು" ಎಂದರು ಸಾವಿತ್ರಮ್ಮ ಕಣ್ಣಿನಲ್ಲಿ ಬಿದ್ದ ಧೂಳನ್ನು ಸೆರಗಿನಲ್ಲಿ ಒರಸುತ್ತ. ಅದನ್ನು ಕಂಡು ಅಪಾರ್ಥಮಾಡಿಕೊಂಡು ಶಂಕರಮ್ಮ ಸಮಾಧಾನಪಡಿಸಲು ಹೊರಟರು.

" ಯಾಕೆ ಕಣ್ಣಿನಲ್ಲಿ ನೀರು ಹಾಕತೀರಿ ಬಿಡಿ. ಸಂಜೆಯ ಹೊತ್ತು, ಅಳಬಾರದು. ಎಲ್ಲ ತಾನಾಗಿಯೆ ಸರಿಹೋಗುತ್ತೆ. ಹೋಗಲಿ, ನಿಮ್ಮ ಅಳಿಯ ನಿಂದ ಕಾಗದ ಬಂತೆ? ಅಲ್ಲಿ ಎಲ್ಲ ಸೌಖ್ಯ ತಾನೆ?" ಎಂದರು.

" ಕಾಗದವೂ ಇಲ್ಲ ಏನೂ ಇಲ್ಲ. ಇವಳಿಲ್ಲಿ ಒದ್ದಾಡುತಿರೋದು ಅಲ್ಲದೆ ಕೊರಗು ಹತ್ತಿಸಿಕೊಂಡು ಸಾಯುತಿದಾಳೆ. ಅಲ್ಲಿ ಅವರಿಗೇನು ಬೇಕಾಗಿದೆ. ಅವಳಿಗೆ ಕಾಗದ ಬರೆಯುವುದು ಕೂಡ ಬೇಕಾಗಿಲ್ಲ" ಎಂದರು ಸಾವಿತ್ರಮ್ಮ ಬೀಗರ ಮೇಲಿನ ಆಕ್ರೋಶ ಕಾರುತ್ತ.

" ಸೊಸೆಯನ್ನು ಹೀಗೆ ಕಾಡಿಸುವುದೂ ಉಂಟೇನಮ್ಮ. ಅಲ್ಲ, ಒಬ್ಬಳನ್ನೆ ಕಳಿಸಿದರು. ಯಾರನ್ನೂ ಜತೆಗೆ ಕಳಿಸದೆ ಹಾಗೆ ಮನೆ ಬಿಟ್ಟು ಕಳಿಸಿ ಬಿಡೋದು ಅಂದರೇನು ಹೇಳಿ. ಅವರಿಗೆ ಅಷ್ಟೂ ತಿಳಿಯಬೇಡವೆ ? ಅವರೇನು ಹೆಣ್ಣು ಹೆತ್ತವರಲ್ಲವೆ ? " ಎಂದರು ಶಂಕರಮ್ಮ.

ಆ ಥಡೂತಿಯ ಹೆಂಗಸು " ನೋಡಿ, ನನ್ನ ಸೊಸೆ ಹೀಗೆ ಹಾಗೆ ಅಂತ ನಾನು ಒಂದು ಸಲವೂ ಆಡಿಕೊಂಡವಳಲ್ಲ. ಒಂದಿಷ್ಟು ಕೊಬ್ರಿ ಕಡ್ಲೆ ಬೇಳೆ ಚಟ್ಣಿ ಅನ್ನ ಸಾರು ಮಾಡುವುದಕ್ಕೆ ಬೆಳಗ್ಗಿನಿಂದ ಹಾರಾಡಿದಳು—ಮೊನ್ನೆ ಏಕಾದಶಿ. ಹನ್ನೆರಡು ಗಂಟೆಯಾಯ್ತು, ಎಲೆಗೆ ಅನ್ನ ಬೀಳಬೇಕಾದರೆ. ನನಗಂತೂ ಊಟವಿಲ್ಲವಲ್ಲ. ಆದರೆ ಇಷ್ಟು ಹೊತ್ತಾದರೂ ನೀರ ಜೋಳಿಸಾರು, ಅರ್ಧಾರ್ಧ ಅಕ್ಕಿಕಾಳೆ ಇದ್ದ ಅನ್ನ. ಇಷ್ಟಾದರೂ ನಾನು ಒಂದು ಮಾತೂ ಆಡೋದಿಲ್ಲ, ಯಾರ ಮುಂದೂ ಹೇಳ ಹೋಗುವುದಿಲ್ಲ" ಎಂದರು.

" ಹೀಗೆ ಅಂತ ನಮಗೆ ಗೊತ್ತಿರಲಿಲ್ಲ ನೋಡಿ, ಶಂಕರಮ್ಮನವರೆ. ಗೊತ್ತಿದ್ದರೆ ಅವರ ಮನೆಗೆ ಶಾಂತಳನ್ನ ಕೊಡತಾನೆ ಇರಲಿಲ್ಲ" ಎಂದು ಸಾವಿತ್ರಮ್ಮನವರು ಕಣ್ಣೀರು ಹಾಕಿದರು. ಹಾಗೂ ಹೀಗೂ ಅವರಿಗೆ ಸಮಾಧಾನ ಹೇಳಿ, ಬಂದಿದ್ದ ಹೆಂಗಸರೆಲ್ಲ ಕುಂಕುಮ ತೆಗೆದುಕೊಂಡು ಮನೆಗೆ ಹೊರಟರು. ಎಲ್ಲರಿಗೂ ಮನಸ್ಸಿನಲ್ಲಿ ಒಂದೆ ಯೋಚನೆ ಇದ್ದುದು ! ಹೊರಗೆ ಕಾಲಿಡುತ್ತಿದ್ದಂತೆ ಶಂಕಮ್ಮನವರು " ನೋಡಿದಿರಾ ಶಾರದಮ್ಮ, ನಾನು ಹೇಳಿದ ಮಾತು ನಿಜವಾಯ್ತೊ ಇಲ್ಲವೊ ? ಇದ್ದರೂ ಇರಬಹುದು ಅಂತ ನೀವು ಅನುಮಾನಪಟ್ಟಿರಲ್ಲ. ಅವರ ಬಾಯಿಂದಲೆ ಬಂತಲ್ಲ" ಎಂದರು.

" ಸರಿಯಮ್ಮ, ಅಂತೂ ಶಾಂತ ಇಲ್ಲೆ ಇನ್ನು ? "

" ಇನ್ನೇನು ಅಂತೀರಿ. ಕಾಗದ ಬರಿಯಲಿಲ್ಲ ಅಳಿಯ ಅಂದರಲ್ಲ. ಮನೆ ಬಿಟ್ಟು ಓಡಿಸಿದವರು ಕಾಗದ ಹಾಕತಾರೆಯೆ ? ಇವರೇನೊ ಹೇಳಿಕೊಳ್ಳ ಬೇಕು ಮಗಳ ಗುಣ" ಎಂದು ವಿಷ ಕಾರಿದರು ಶಂಕರಮ್ಮ.

“ ಹೇಳಿಕೊಂಡರಲ್ಲ ದೊಡ್ಡದಾಗಿ. ಬೇರೆ ಮನೆ ಮಾಡಿ ಕರೆದುಕೊಂಡು ಹೋದರೆ ಮಾತ್ರ ಕಳಿಸುವುದು ಅಂತ. ಅವರಿಗೆಲ್ಲ ಏನು ದರದು ಅಂತೀನಿ. ಯಾಕೆ ಕರಕೊಂಡು ಹೋಗತಾರೆ.”

“ ಹಾಗೆ ನಿಂತ ನಿಲುವಿನಲ್ಲೆ ಮನೆ ಬಿಟ್ಟು ಓಡಿಸಬೇಕಾದರೆ ಏನು ಮಾಡಿದಾಳೊ ಏನೊ.”

“ ಯಾರಿಗೆ ಗೊತ್ತಮ್ಮ.”

ಆ ಹೊತ್ತಿಗೆ ಸರಿಯಾಗಿ ಶಾಂತ ಲೀಲಳ ಜತೆಯಲ್ಲಿ ಆ ಕಡೆ ಯಿಂದ ಬಂದಳು. ಅವಳ ಕಂಕುಳಲ್ಲಿ ಮಗು ಅನಂತರಾಮು ಇದ್ದ. ಅವಳನ್ನು ನೋಡಿದೊಡನೆ ಶಂಕರಮ್ಮ ಮುಖ ಸಿಂಡರಿಸುತ್ತ “ ನೋಡಿ, ಅವಳ ಗತ್ತು, ಆಹಾ! ಮಹಾರಾಣಿ! ಏನೂ ತಿಳಿಯದ ಊಮೆಮುಳ್ಳಿ ” ಎಂದು ಗೊಣಗಿದರು. ಶಂಕರಮ್ಮನ ಜತೆಗಿದ್ದವರೂ ಮೂಗು ಮುರಿದರು. ಶಾಂತ ಇದಾವುದನ್ನೂ ನೋಡಲಿಲ್ಲ.

ಇದಾಗಿ ಎರಡು ದಿನಗಳು ಕಳೆಯಿತು. ಶಾಂತಳಿಗೆ ಮನಸ್ಸಿನ ತಳಮಳ ಹೆಚ್ಚಿತು. ಊರಿಂದ ತಾನು ಬಂದು ಐದು ದಿನಗಳಾಗಿ ಹೋಗಿತ್ತು. ಆದರೂ ಕಾಗದ ಬರಲಿಲ್ಲ. ಇನ್ನೇನು ಬರಲಾರದೊ ಏನೊ ಎಂದು ಸಂದೇಹ ಬಲ ವಾಯಿತು. ಲೀಲಳ ಹತ್ತಿರ ತನ್ನ ದುಃಖವನ್ನು ತೋಡಿಕೊಂಡಳು. ಆದರೇನು —ಅವಳು ಎಂದಿನಂತೆ ಸಮಾಧಾನದ ಮಾತುಗಳನ್ನಾಡಿದಳು. ಅವುಗಳಲ್ಲಿ ಏನೂ ಹುರುಳಿಲ್ಲವೆಂದು ಲೀಲಳಿಗೆ ಗೊತ್ತಿತ್ತು. ಶಾಂತಳಿಗೆ ಆ ಕ್ಷಣಕ್ಕಾದರೂ ಮನಸ್ಸಿಗೆ ಸಮಾಧಾನ ಬರುತ್ತಿತ್ತು. ಆದರೆ ಕೊಂಚ ಹೊತ್ತಿನ ನಂತರ ಲೀಲಳ ಮಾತೆಲ್ಲ ಬರಿಯ ಒಣ ಸಮಾಧಾನವಷ್ಟೆ ಹೊರತು ಅದರಲ್ಲಿ ಏನೂ ಸತ್ವವಿಲ್ಲ ವೆಂದು ಅವಳಿಗೂ ಅರಿವಾಗುತ್ತಿತ್ತು. ಆಗ ರೂಮಿನಲ್ಲಿ ತನ್ನಷ್ಟಕ್ಕೆ ಕುಳಿತು ಅಳುತ್ತಿದ್ದಳು. ಮತ್ತೆ ಲೀಲಳ ಸಮಾಧಾನದ ಮಾತು. ಶಾಂತಳಿಗೆ ಬಹಳ ಬೇಸರವಾಗಹತ್ತಿತು. ಅಲ್ಲದೆ, ವಸಂತುವನ್ನು ನೋಡಬೇಕೆಂಬ ಹಂಬಲ ಹೆಚ್ಚಾಯಿತು. ಊರಿನಲ್ಲಿದ್ದಾಗ ಒಂದು ನಿಮಿಷವೂ ತನ್ನನ್ನು ಬಿಟ್ಟಿರಲಾರದ ನಾದಿನಿ ವಸಂತು ಈಗ ಹೇಗೆ ಇರುವಳೊ ಎಂದು ಯೋಚನೆ ಹತ್ತಿತು. ಹೇಗಾದರೂ ಸರಿ, ವಸಂತುವನ್ನು ನೋಡಬೇಕೆಂದು ಹೃದಯ ಕಾತರಿಸಿತು. ಅವಳು ಈಗೇನು ಮಾಡುತ್ತಿರಬಹುದು, ಏನು ಎಂದೆಲ್ಲ ಯೋಚಿಸಿಕೊಳ್ಳು

ತ್ತಿದ್ದಳು. ಸುಪ್ತವಾಗಿದ್ದ ಪ್ರೀತಿಯೆಲ್ಲ ಈ ಅಗಲಿಕೆಯಲ್ಲಿ ಎದ್ದುನಿಂತಿತು. ಅತ್ತೆ, ಮಾವ, ತನ್ನ ಯಜಮಾನರು, ಮೈದುನ, ನಾದಿನಿ ವಸಂತು ಎಲ್ಲರೂ ತಾನು ಅಲ್ಲಿ ಇಲ್ಲದುದರಿಂದ ಕೊರಗುವರೆಂದು ಶಾಂತಳಿಗೆ ಗೊತ್ತು. ಆದರೆ ತನಗೆ ಒಂದು ಕಾಗದ ಕೂಡ ಬರೆಯಲಿಲ್ಲವಲ್ಲ. ತನ್ನನ್ನು ಅವರೆಲ್ಲರೂ ಅಷ್ಟೊಂದು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ತನ್ನಲ್ಲಿ ವಾತ್ಸಲ್ಯವಿಟ್ಟು ಎಷ್ಟು ಆಸ್ಥೆಯಿಂದ ನೋಡಿಕೊಳ್ಳುತ್ತಿದ್ದರು. ತನಗೆ ಈಗ ಒಂದು ತಿಂಗಳ ಹಿಂದೆ ವಾಂತಿ ವಾಕರಿಕೆ ಎದ್ದಾಗ ಮನೆಯವರೆಲ್ಲ ಎಷ್ಟು ಗಾಬರಿಪಟ್ಟರು. 'ಇದು ಒಳ್ಳೆಯ ಸೂಚನೆ' ಎಂದು ಅತ್ತೆ ನಕ್ಕು ತನ್ನನ್ನು ನಲಿಸಿದರು. ಮನೆಯಲ್ಲಿ ಎಲ್ಲರೂ ತನ್ನ ಮೈ ಚೆನ್ನಾಗಿರಲೆಂದು ಎಷ್ಟೊಂದು ಒದ್ದಾಡಿದರು. ಕ್ಷಣಕ್ಕೊಮ್ಮೆ ಆರೋಗ್ಯ ವಿಚಾರಿಸುವ ಆ ಮೈದುನ, ತನ್ನನ್ನು ಕೆಲಸಕ್ಕೆ ಎಬ್ಬಿಸದ ಅತ್ತೆ—ಅವರು ಈಗ ತಾನು ಹೇಗಿದೇನೆ ಎಂದು ತಿಳಿಯಲು ಒಂದು ಅಕ್ಷರ ಕೂಡ ಹಾಕಲಿಲ್ಲ. ತನ್ನ ಯಜಮಾನರು ಹೆಚ್ಚು ಮಾತಿನವರಲ್ಲ. ಅವರ ಹೃದಯದ ಭಾವನೆಗಳು, ನೋವುನಲಿವುಗಳು, ಮಾತಿನ ಹಿಡಿತಕ್ಕೆ ಸಿಗದಂತಹ ಆಳವಾದ ಅಂತರ್ವಾಹಿ. ಅವರು ತಮ್ಮ ಪ್ರೀತಿಯನ್ನೆಲ್ಲ ಒಂದು ನಗೆಯಲ್ಲಿ, ಒಂದು ನೋಟದಲ್ಲಿ ಚಿಮ್ಮಿ ಕುಣಿಸಿ ತೋರಿಸಿಬಿಡುತ್ತಿದ್ದರು. ನೋವಾದರೆ ಅದನ್ನು ಬಚ್ಚಿಟ್ಟುಕೊಳ್ಳುತ್ತಿದ್ದರು. ಅವರ ಈ ಗುಣ—ಚಿನ್ನದಂತಹ ಗುಣ—ಶಾಂತಳನ್ನು ಮಾರುಗೊಳಿಸಿತ್ತು. ಜನ್ಮಜನ್ಮಾಂತರದ ಪುಣ್ಯದ ಫಲ ಅವರ ಕೈಹಿಡಿದುದು ಎಂದುಕೊಂಡಿದ್ದಳು ಶಾಂತ. ಜನ್ಮಜನ್ಮಕ್ಕೂ ಅವರೇ ತನ್ನ ಕೈಹಿಡಿದರೆ ಅದೆ ತನಗೆ ಮುಕ್ತಿಯೆಂದು ದೇವರಲ್ಲಿ ಮೊರೆಯಿಟ್ಟಿದ್ದಳು. ಅಂತಹ ಪ್ರೀತಿಯ ಅವರು ಬರುವ ತನಕ ತಾನು ಕಾಯದೆ ಬಂದುಬಿಟ್ಟುದು ತಪ್ಪಾಯಿತು. ಆದರೆ ಅವರು ಅಂತಹ ಸಹನೆಯುಳ್ಳವರು. ತಪ್ಪು ಮಾಡಿದ ತನ್ನನ್ನು ಕ್ಷಮಿಸಿ ಒಂದು ಕಾಗದ ಬರೆಯಬಾರದೆ ಎಂದು ಮಿಡುಕಿದಳು, ಶಾಂತ. ತಾನು ಅವರಿಗೆಲ್ಲ ಬೇಡವಾದೆನೆಂದು ಒಂದು ಸಾರಿ ಅನ್ನಿಸಿ ಜೀವವೆ ರೋಸಿಹೋಯಿತು. ಈ ಜೀವ ಇನ್ನಿದ್ದರೆಷ್ಟು ಬಿಟ್ಟರೆಷ್ಟು—ಆತ್ಮಹತ್ಯೆ ಮಾಡಿಕೊಂಡರೂ ಸರಿಯೆನಿಸುವ ತನಕ ನಿರಾಶೆಯ ವಿಷ ಮೈಯನ್ನೆಲ್ಲ ಆವರಿಸಿತ್ತು. ಆದರೂ ಎಲ್ಲೊ ಇದ್ದ ಒಂದು ಬೊಟ್ಟು ಆಸೆಯ ಅಮೃತ ಇನ್ನೂ ಅವಳನ್ನು ಜೀವಂತವಾಗಿಯೆ ಇರಿಸಿತು. ಒಮ್ಮೆ ದುಡುಕಿ ಸ್ವರ್ಗದಂತಹ ಮನೆ ಬಿಟ್ಟು

ಬಂದುದಾಯಿತು. ಮತ್ತೆ ದುಡುಕಿ ನರಕಕ್ಕೆ ಹೋಗುವುದು ಬೇಡವೆಂದು ಆಸೆ ಎಚ್ಚರಿಸಿತು. ಅವಳ ಈ ಬೇಸರದ ಜೀವಕ್ಕೆ ಆಗಾಗ ಸಮಾಧಾನ ಕೊಡುತ್ತಿದ್ದುದು ಲೀಲಳ ಮಗು ಅನಂತರಾಮುವಿನ ಆಟಗಳು. ಎದ್ದೊಡನೆಯೆ ಅಳುತ್ತ ಶಾಂತಳ ಹತ್ತಿರ ಬಂದುಬಿಡುತ್ತಿದ್ದ. ಈಗ ಅವನಿಗೆ ತಾಯಿಗಿಂತಲೂ ಶಾಂತಳೆ ಹೆಚ್ಚು ಬೇಕಾಗಿತ್ತು. ಅವಳಿಗೂ ಕಾಲಕಳೆಯಲು ಏನಾದರೂ ಸಾಧನ ಬೇಕಾಗಿತ್ತು. ಅಲ್ಲದೆ, ಬೇಸರದಿಂದ ಅವಳ ಮನಸ್ಸು ತಿಂದುಹೋಗುತ್ತಿತ್ತು. ಹೀಗಾಗಿ ಅನಂತುವಿನ ಪ್ರೀತಿಯೆ ಅವಳಿಗೆ ಆಧಾರವಾಯಿತು. ಮಗುವಿನ ಎಲ್ಲ ಆವಶ್ಯಕತೆಗಳನ್ನೂ ತಾನು ನೋಡಿಕೊಳ್ಳಲು ಆರಂಭಿಸಿದಳು. ಅವನನ್ನು ಕಂಕುಳಲ್ಲಿ ಕೂಡಿಸಿಕೊಂಡು ಅನ್ನ ಕಲಸಿ ಓಡಾಡಿಸುತ್ತ ತಿನ್ನಿಸುತ್ತಿದ್ದಳು. ಸ್ನಾನ ಮಾಡಿಸಿ ಬಟ್ಟೆ ಹಾಕುತ್ತಿದ್ದಳು, ತೂಗಿ ಮಲಗಿಸುತ್ತಿದ್ದಳು. ಲೀಲಳಿಗೂ ಇದು ಬೇಕಾಗಿತ್ತು. ಮಗುವನ್ನು ನೋಡಿಕೊಳ್ಳುವುದು ಅವಳಿಗೂ ಬೇಜಾರಾಗುತ್ತಿತ್ತು. ಶಾಂತ ತಾನಾಗಿಯೆ ಆ ಕೆಲಸ ಮಾಡುತ್ತಿದ್ದುದರಿಂದ, ಅದರಿಂದ ಸಂತೋಷ ಪಡೆಯುತ್ತಿದ್ದುದರಿಂದ, ಅವಳಿಗೆ ಇನ್ನೂ ಸಂತೋಷವೆ ಆಯಿತು. ಶಾಂತಳ ಮನಸ್ಸಿಗೆ ಪೂರ್ತಿ ಬೇಸರ. ಇದೊಂದರಿಂದಲಾದರೂ ಅವಳಿಗೆ ಬೇಸರ ಕಳೆಯುತ್ತದೆ, ಹಾಗಾದರೂ ಅವಳ ಮನಸ್ಸಿನ ಭಾರ ಇಳಿಯಲಿ ಎಂದು ಲೀಲಾ ಅಂದುಕೊಂಡಿದ್ದಳು. ಹೀಗಾಗಿ ಶಾಂತಳನ್ನು "ನಿನಗೆ ಕೊಟ್ಟುಬಿಡುತೀನಿ, ಶಾಂತಾ, ನೀನೆ ನೋಡಿಕೊ" ಎಂದು ನಗೆಯಾಡಿದ್ದಳು. ಶಾಂತಳಿಗೂ ಆ ಮಗು ತನ್ನ ಮಗುವೊ ಎನ್ನುವಂತೆ ಆಗಿಹೋಯಿತು. ವಸಂತುವಿನ ಮೇಲೆ ತಾನಿಟ್ಟಿದ್ದ ಪ್ರೀತಿಯನ್ನೆಲ್ಲ ಈ ಮಗು ಅನಂತರಾಮುವಿನ ಮೇಲೆ ಬೀರಲಾರಂಭಿಸಿದಳು. ಆದರೆ ಅವನನ್ನು ಆಡಿಸುತ್ತಿದ್ದಂತೆ ಇದ್ದಕ್ಕಿದ್ದಂತೆ ಅವಳ ಮನಸ್ಸಿನೊಳಗಿನ ಬೇಸರ ಮೇಲೆದ್ದುಬಂದು ಕಣ್ಣಿನಲ್ಲಿ ಉದಾಸ ಮೂಡಿಸುತ್ತಿತ್ತು. ಅಂತು ಐದು ದಿನಗಳು ಹೀಗೆಯೆ ಕಳೆದಿದ್ದವು. ಆದರೆ ಐದನೆಯ ದಿನ ಸಂಜೆ ಶಾಂತ, ಲೀಲಾ ಇಬ್ಬರೂ ಮಗುವನ್ನೆತ್ತಿಕೊಂಡು ಹೊರಟಾಗ ಶಾಂತಳಿಗೆ ತುಂಬಾ ಅವಮಾನವಾಗಿಹೋಯಿತು. ಶಂಕರಮ್ಮ, ಶಾರದಮ್ಮ ಎಲ್ಲರೂ ವಕ್ರದೃಷ್ಟಿಯಲ್ಲಿ ಶಾಂತಳನ್ನು ನೋಡಿದ್ದರು. ಮತ್ತೆ ಗುಸಗುಸ ಎಂದುಕೊಂಡರು. ಒಬ್ಬರೂ ಅವಳನ್ನು ಮಾತನಾಡಿಸಲಿಲ್ಲ. ಆದರೆ ಲೀಲಳನ್ನು ಮಾತ್ರ ಶಾರದಮ್ಮ ಮಾತನಾಡಿಸಿದರು. ಅವಳ ಮಗು ಚೆನ್ನಾಗಿದೆ

ಎಂದು ಹೇಳಿ ಅವಳ ಗಂಡ ರಾಜಣ್ಣ ಯಾವಾಗ ಬರುವನೆಂದು ಕೇಳಿದರು. ಈವತ್ತೊ ನಾಳೆಯೊ ಬರಬಹುದೆಂದು ಹೇಳಿ ಲೀಲಾ ಶಾಂತಳ ಜತೆಗೆ ಬಂದು ಬಿಟ್ಟಳು. ಶಾಂತಳನ್ನು ಮಾತ್ರ ಯಾರೂ ಮಾತನಾಡಿಸಲಿಲ್ಲ. ಅವರೆಲ್ಲರ ಮುಖವೂ ತುಕ್ಕುಹಿಡಿದ ಕಬ್ಬಿಣದಂತಾಗಿತ್ತು. ಶಾಂತಳೂ ಅದನ್ನು ನೋಡಿದಳು. ಲೀಲಳಿಗೂ ಅದರ ಅನುಭವವಾಯಿತು. ಶಾಂತಳೊಂದಿಗೆ ತಾನು ಹೊರಗೆ ಹೊರಟುದು ಅವರಲ್ಲೊಬ್ಬರಿಗೂ ರುಚಿಸಲಿಲ್ಲವೆಂಬುದು ಅವರ ಮುಖದ ಛಾಯೆಯಿಂದಲೆ ಲೀಲಳಿಗೆ ತಿಳಿಯಿತು. ಆ ನಿಮಿಷದಲ್ಲೇನೊ ಅವಳಿಗೆ ಕೊಂಚ ಗಾಬರಿಯೆ ಆಯಿತು. ಇವರೆಲ್ಲ ಕೂಡಿ ಇನ್ನು ತನ್ನನ್ನೂ ಏನಾದರೂ ಅನ್ನುವರೇನೊ ಎಂದು ಹೆದರಿದಳು. ಆದರೆ ಶಾಂತಳ ಜತೆಗೆ ಹೊರಟುನಿಂತಾಗಿತ್ತು. ಮಗುವನ್ನೆತ್ತಿಕೊಂಡ ಶಾಂತ ಹೊಸಲಿನಿಂದ ಆಚೆಗೆ ಹೊರಟುಹೋಗಿದ್ದಳು. ಆಗುವುದು ಆಗಿಹೋಗಲಿ, ನೋಡೋಣವೆಂದು ಲೀಲಾ ಶಾಂತಳ ಜತೆ ಹೊರಟುಬಿಟ್ಟಳು. ಅಂಗಡಿಬೀದಿಗೆ ಬರುವ ತನಕ ಶಾಂತ ಮಗುವಿನ ಆಟದ ಬಗ್ಗೆ ಹರಟೆ ಕೊಚ್ಚುತ್ತಿದ್ದಳು. ಅವನ ಆಟದ ಬಗ್ಗೆ ಹಿಗ್ಗಿನಿಂದ ಮಾತಾಡುತ್ತಿದ್ದಳು. ಅಲ್ಲಿಗೆ ಬಂದಾಗ ಆ ಕಡೆಗೆ ಮುಂದೆ ಹೋಗಬೇಕಾದರೆ ದೊಡ್ಡ ರಸ್ತೆ ಬಸವನಗುಡಿಗೆ ಹೋಗುವ ರಸ್ತೆಯನ್ನು ದಾಟಬೇಕಾಗಿತ್ತು. ಬಸ್ಸು ಅಡ್ಡಬರುತ್ತಿದ್ದುದರಿಂದ ಅದು ಹೋಗುವ ತನಕ ಕಾಲುದಾರಿಯ ಒಂದು ಪಕ್ಕದಲ್ಲಿ ನಿಂತರು. ಆಗ ಶಾಂತಳ ಕಿವಿಗೆ ಅಲ್ಲಿದ್ದ ಹುಡುಗಿಯರ ಗುಂಪಿನ ಮಾತು ಕೇಳಿಸಿತು. ಅವರು ಯಾರೆಂಬುದನ್ನು ಅವಳು ಮೊದಲು ಗಮನಿಸಿರಲಿಲ್ಲ. ಆದರೆ ಅವರ ಮಾತು ಇದ್ದಕ್ಕಿದ್ದಂತೆ ಕಿವಿಗೆ ಬಿದ್ದು ಅವಳ ನೋವು ಮತ್ತೆ ಮೊನಚಾಯಿತು.

"ಮಗು ಎತ್ತಿಕೊಂಡಿಲ್ಲವೇನೆ—ಅವಳೆ ಕಣೆ, ಶಾಂತ—ಸಾವಿತ್ರಮ್ಮನವರ ಮಗಳು. ಅವಳನ್ನ ಮನೆ ಬಿಟ್ಟು ಓಡಿಸಿಬಿಟ್ಟಿದಾರಂತೆ—ಅತ್ತೆಮನೆಯವರು."

"ಹೌದೆ? ನನಗೆ ಗೊತ್ತೆ ಇರಲಿಲ್ಲ."

"ಊಂ! ಇದ್ದಕ್ಕಿದ್ದ ಹಾಗೆ ಕಾಗದಗೀಗದ ಏನೂ ಹಾಕದೆ ಒಮ್ಮೆಲೆ ಇಳಿದಳು. ಒಳ್ಳೆ ಭೂತ ಇದ್ದಹಾಗೆ ಕಾಣುತ್ತಿದ್ದಳಂತೆ ಆಗ."

"ನಿನಗೆ ಯಾರು ಹೇಳಿದರು, ಇದನ್ನೆಲ್ಲ?"

" ನಮ್ಮ ತಾಯಿ—"

" ಶಂಕರಮ್ಮನವರಿಗೆ ಇದೆಲ್ಲ ಹೇಗೆ ತಿಳಿಯಿತು ? "

" ಅವಳ ತಾಯಿಯನ್ನ ಕೇಳಿದರಂತೆ. ' ನಮ್ಮ ಶಾಂತನಿಗೆ ಸುಖವಿಲ್ಲ, ಅತ್ತೆಯ ಮನೆಯಲ್ಲಿ ಕಾಟ, ಹಿಂಸೆ ' ಅಂತ ಹೇಳಿದರಂತೆ. ಆದರೆ ಅವಳದ್ದೂ ಏನೊ ಚಾಳಿ ಇರಬೇಕು, ಹಾಗಂತ ನಮ್ಮ ತಾಯಿ ಅಂದರು."

" ಹೂಂ, ಮತ್ತೆ. ಇಲ್ಲದೆ ಹೋದರೆ ಸುಮ್ಮಸುಮ್ಮನೆ ಮನೆ ಬಿಟ್ಟು ಓಡಿಸತಾರೆಯೆ ? ನೋಡೋದಕ್ಕೆ ಎಷ್ಟು ಸಭ್ಯಳ ಹಾಗಿದಾಳೆ."

ಬಸ್ಸು ಹೋಗಿ ದಾರಿ ತೆರವಾಯಿತು. ಶಾಂತ ದಿಕ್ಕುಗಾಣದವಳಂತೆ ಮುಂದೆ ಕಾಲಿಟ್ಟಳು, ಎಡವಿದಳು; ಪುಣ್ಯವಶಾತ್ ಬೀಳಲಿಲ್ಲ. ಹೋಟಲಿನ ರೇಡಿಯೊವಿನಿಂದ ಹಾಡಿನ ದನಿ—ಅಳುವ ರಾಗದಲ್ಲಿ ಕೇಳಿಬರುತ್ತಿತ್ತು—' ಐಸೀ ಆಗ್ ಬಗೀ ಹೈ ಮನಮೆ—ಜೀನಾಭಿ ನಹೀಂ ಮರನಾಭಿ ನಹೀಂ ' (ಎಂತಹ ಬೆಂಕಿ ಎದೆಗೆ ಬಿದ್ದಿತೊ! ಜೀವವೂ ಇಲ್ಲ, ಸಾವೂ ಇಲ್ಲ!) ಎಂದು ಹಿಂದಿ ಸಿನಿಮಾ ಹಾಡು ಕೇಳಿತು. ಶಾಂತಳ ಹೃದಯ ಒಮ್ಮೆಲೆ ಕುಸಿದಂತಾಯಿತು. ತಾನು ಬಾಯಿ ಮುಚ್ಚಿಕೊಂಡಿದ್ದರೂ, ತಾಯಿಯ ಗೊಣಗಾಟದಿಂದ ಆ ಚೇಳಿನ ಬಾಯಿ ಶಂಕರಮ್ಮ ಏನೇನೊ ಕಲ್ಪನೆ ಮಾಡಿದ್ದರು. ಎಂತಹ ಸಿಡಿಲು ಬಡಿಯಿತು! ಕಣ್ಣು ಕಗ್ಗತ್ತಲೆಯಾದಂತಾಯಿತು. ಇನ್ನೇನು ಗತಿ, ಇನ್ನೇನು ಗತಿಯೆಂದು ಜೀವ ಹೊಯ್ದಾಡಿತು.

ಲೀಲಳಿಗೂ ಈ ಮಾತು ಕೇಳಿಸಿತು. ಅವಳಿಗೂ ಇದು ಅತಿ ವಿಪರೀತವೆನಿಸಿತು. ಆದರೆ ಅವರನ್ನು ತಾನೇನೂ ಅನ್ನುವಂತಿರಲಿಲ್ಲ. ಶಾಂತಳಿಗೆ ಎಂತಹ ಕೆಟ್ಟ ಹೆಸರು ಬಂತು! ತಾನು ಅವಳ ಜತೆಯಲ್ಲಿ ಹೀಗೆ ಓಡಾಡಿದರೆ—ತನ್ನ ಬಗ್ಗೆ ಹೀಗೆಯೆ ಮಾತನಾಡಿಕೊಂಡಾರು ಎಂದು ಅವಳ ಬುದ್ಧಿಯೂ ಜಗ್ಗೆಂದಿತು. ಏನೇ ಆಗಲಿ, ಇನ್ನು ಹೊರಗೆ ಹೊರಟಾಗ ಶಾಂತಳ ಜತೆಯಲ್ಲಿ ಹೊರಡಬಾರದೆಂದು ತೀರ್ಮಾನಿಸಿಕೊಂಡಳು. ತನಗೆಲ್ಲಿ ಕೆಡುಕಾದೀತು ಎನ್ನುವ ಭೀತಿಯ ಸ್ವಾರ್ಥದಲ್ಲಿ ಶಾಂತಳ ಮನಸ್ಸಿನ ನೋವು ಅವಳಿಗೆ ಅರ್ಥವೆ ಆಗಲಿಲ್ಲ. ಅರ್ಥವಾದರೂ ಅದನ್ನು ಅವಳು ಅಷ್ಟಾಗಿ ಗಮನಿಸುವಂತಿರಲಿಲ್ಲ. ಶಾಂತಳಿಗೂ ಈಗ ಮುಂದೆ ಹೋಗಲು ಬೇಕಾಗಲಿಲ್ಲ. ಆದರೆ ಹಟ. ಯಾರೆಂದರೆ ಅನ್ನಲಿ, ಎನ್ನುವ ಹಟ—ಇದ್ದಕ್ಕಿದ್ದಂತೆ ನೋವಿನಿಂದ

ಮೇಲೆದ್ದು ಬಂದಿತು. ತಾನು ಯಾವ ರೀತಿಯ ತಪ್ಪನ್ನೂ ಮಾಡಿಲ್ಲ. ಅಲ್ಲಿ ಅತ್ತೆಯ ಮನೆಯವರಿಗೂ ತನ್ನಲ್ಲಿ ಪ್ರೀತಿಯಿದೆ. ಅನ್ನುವ ಕುಹಕಿಗಳು ಬಾಯಿಗೆ ಬಂದಂತೆ ಅಂದುಕೊಳ್ಳಲಿ. ಅಂದವರ ಬಾಯಿ ಕೆಟ್ಟೀತೆ ಹೊರತು ತನಗೇನು ಎಂದಿತು ಅವಳ ಅಭಿಮಾನ. ಆದರೆ ಹೆದರಿಕೆ ಮಾತ್ರ. ಅಯ್ಯೊ! ಎಂತಹ ಮಾತು! ಇನ್ನೇನು ಗತಿಯೆಂದು ಚಡಪಡಿಸಿತು. ಹೀಗಾಗಿ ಶಾಂತ ಳಿಗೆ ಏನು ಮಾಡಲೂ ತೋಚಲಿಲ್ಲ. ಯಾಂತ್ರಿಕವಾಗಿ ಮುಂದೆ ನಡೆಯು ತ್ತಿದ್ದಳು. ಲೀಲಳಿಗೆ ಬೇಗ ಮನೆ ಸೇರಿಕೊಂಡರೆ ಸಾಕು ಎನಿಸಿತು. ಒಮ್ಮೆ ಹಿಂದೆ ತಿರುಗಿ ನೋಡಿದಳು. ಆ ಹುಡುಗಿಯರ ಗುಂಪಿನ್ನೂ ಅಲ್ಲಿಯೆ ಇತ್ತು. ಈಗ ತನ್ನನ್ನು ಕುರಿತು ಏನಾದರೂ ಆಡಿಕೊಳ್ಳಬಹುದೆಂದು ಲೀಲಳಿಗೆ ಗಾಬರಿ ಆಯಿತು. ತಲೆ ಸಿಡಿಯಲಾರಂಭವಾಯಿತು. ಶಾಂತಳ ಹತ್ತಿರ ಬಂದು " ಶಾಂತ, ಯಾಕೋ ತಲೆನೋವು, ಮನೆಗೆ ಹೊರಟುಹೋಗೋಣ " ಎಂದಳು.

" ಆಂ? " ಎಂದು ಯಾವುದೊ ಪ್ರಪಂಚದಿಂದ ಹಿಂದಿರುಗುತ್ತ ಕೇಳಿದಳು ಶಾಂತ. ತನ್ನ ಅತ್ತಿಗೆಯ ಮಾತು ಅವಳಿಗೆ ಕೇಳಿಸಿರಲಿಲ್ಲ.

" ತಲೆನೋವು. ಮನೆಗೆ ಹೊರಟುಹೋಗೋಣ ಅಂದೆ " ಎಂದಳು ಲೀಲಾ ಮತ್ತೆ. ಮಾತು ಕುಂಟುತ್ತಿತ್ತು, ದನಿ ಸಪ್ಪೆಯಾಗಿತ್ತು.

ಶಾಂತ ಒಂದು ಸಾರಿ ತನ್ನ ಅತ್ತಿಗೆಯ ಮುಖ ನೋಡಿದಳು. ಅತ್ತಿಗೆಯ ನೋವು ಅವಳಿಗೆ ಅರ್ಥವಾಯಿತು. ಒಂದು ಸಣ್ಣ ತಾತ್ಸಾರದ ನಗೆ ತುಟಿಯ ತುದಿಯನ್ನು ಸಣ್ಣಗೆ ಕೊಂಕಿಸಿ ಮಾಯವಾಯಿತು. ಇಷ್ಟೇನೆ ಎಲ್ಲವೂ, ಎಂದಿತು ಬುದ್ಧಿ. ಅಯ್ಯೊ! ಇನ್ನೇನು ಗತಿ ಎಂದು ಎದೆ ಡವಡವಗುಟ್ಟಿತು.

" ಹೂಂ, ಹೋಗೋಣ " ಎನ್ನುತ್ತ ಬಂದ ದಾರಿಗೆ ಹಿಂತಿರುಗಲು ಹೊರಟಳು. ಅನಂತರಾಮುವಿನ ತಲೆಗೆ ಹೊದಿಸಿದ್ದ ಶಾಲನ್ನು ಸರಿಪಡಿಸಿದಳು. ಅವಳು ತಿರುಗುತ್ತಿದ್ದಂತೆ ಲೀಲಾ ಮುಂದಕ್ಕೆ ಬಂದಳು. ಇನ್ನೂ ಆ ಮೂಲೆ ಯಲ್ಲಿ ಆ ಹುಡುಗಿಯರ ಗುಂಪು ನಿಂತಿತ್ತು. ಆ ಕಡೆಯಲ್ಲಿ ಮತ್ತೆ ಹಾದು ಹೋಗಲು ಕೂಡ ಲೀಲಳಿಗೆ ಹೆದರಿಕೆ. ಆದ್ದರಿಂದ ತಕ್ಷಣವೆ " ಈ ರಸ್ತೆಯಲ್ಲಿ ತಿರುಗಿಕೊಂಡು ಹೊರಟುಹೋಗೋಣ " ಎಂದಳು.

ಶಾಂತ ಮಾತಿಲ್ಲದೆ ಆ ರಸ್ತೆಗೆ ತಿರುಗಿದಳು. ಲೀಲಳ ಹೇಡಿತನ, ಹೆದರಿಕೆ ಕಂಡು ಅವಳ ಮನಸ್ಸು ಧಿಕ್ಕಾರ ಹಾಕಿತು.

ಲೀಲಳ ಮನಸ್ಸು ಅಧೀರವಾಗುತ್ತಿತ್ತು. ಮಗುವನ್ನು ಶಾಂತಳ

ಕೈಯಿಂದ ತಾನೇ ಎತ್ತಿಕೊಂಡುಬಿಟ್ಟರೆ ವಾಸಿ ಎನಿಸಿತು. ಆದರೆ ಹಾಗೆ ಕೊಡೆಂದು ಕೇಳುವುದು ಹೇಗೆಂದು ಅವಳಿಗೆ ತೋಚಲಿಲ್ಲ. ಅಲ್ಲದೆ ಹಾಗೇನಾದರೂ ತಾನು ಕೇಳಿ ಶಾಂತ ರೇಗಿದರೆ? ಬದಲು ಶಾಂತಳ ಮನಸ್ಸು ನೊಂದುಕೊಳ್ಳಬಹುದು. ಅವಳ ಮನಸ್ಸು ಈಗಲೆ ಕೊರಗಿ ಕೊರಗಿ ಕ್ಷಯಿಸುತ್ತಿತ್ತು. ಊರಿನಿಂದ ಬಂದಾಗಿನಿಂದ ಕೊರಗಿನಲ್ಲಿ ಊಟ ಉಣಿಸು ಏನೂ ಬೇಕಾಗಿರಲಿಲ್ಲ ಶಾಂತಳಿಗೆ. ಈಗ ಈ ಮಾತಿನ ಸಿಡಿಲು ಬೇರೆ ಬಂದೆರಗಿತ್ತು. ಮನೆಗೆ ಹಿಂತಿರುಗಿಬಿಡೋಣ ಎಂದು ರಸ್ತೆಯನ್ನು ಹಿಡಿದಿದ್ದರು. ಮಗುವನ್ನು ತನ್ನ ಕೈಗೆ ಕೊಡೆಂದರೆ ಶಾಂತಳ ಮನಸ್ಸಿಗೆ ಎಷ್ಟು ನೋವಾಗುವುದು, ಪಾಪ! ಅವಳ ಮನಸ್ಸಿಗೆ ಯಾಕೆ ಗಾಯಪಡಿಸುವುದು ಎಂದುಕೊಂಡಳು ಲೀಲಾ. ಶಾಂತಳ ಬಗ್ಗೆ ಪೂರ್ತಿ ಮರುಕ ಆ ನಿಮಿಷದಲ್ಲಿ ಅವಳ ಹೃದಯದಲ್ಲಿತ್ತು. ಆದರೆ ಆ ಹುಡುಗಿಯರು ಆಡಿದ ಮಾತು ಕಿವಿಯಲ್ಲಿ ಗುಂಯ್ಗುಟ್ಟುತ್ತಿತ್ತು. ಅಲ್ಲದೆ ಶಾಂತಳೇ ಎರಡು ದಿನಗಳ ಹಿಂದೆ ಹೇಳಿದ್ದಳು—ತಾನು ಅತ್ತೆಯ ಮನೆಯನ್ನು ಕೋಪದಲ್ಲಿ ಬಿಟ್ಟುಬಂದಿದ್ದೇನೆಂದು. ಪೂರ್ತಿ ಸಮಾಚಾರವನ್ನು ಶಾಂತ ಅವಳಿಗೆ ಹೇಳದಿದ್ದುದರಿಂದ ಲೀಲಳ ಮನಸ್ಸಿನಲ್ಲೂ ಅನುಮಾನ ಮೊಳೆಯಲು ಆಸ್ಪದವಾಯಿತು. ಶಾಂತಳ ಬಗ್ಗೆ ಕೆಟ್ಟ ಅಭಿಪ್ರಾಯ ಬಾರದಿದ್ದರೂ ಅವಳನ್ನು ಅತ್ತೆಯ ಮನೆಯವರು ಓಡಿಸಿದ್ದರೂ ಓಡಿಸಿರಬಹುದು ಎನಿಸಿತು. ಆದರೆ ಈಗ ಅವಳಿಗೆ ಶಾಂತಳ ಮನಸ್ಸನ್ನು ನೋಯಿಸಲು ಆಗಲಿಲ್ಲ. ತಾತ್ಸಾರ, ಅನುಮಾನ ಒಳಗೆ ಸೇರಿಕೊಂಡವು. ಮರುಕ ಮಾತ್ರ ಹೊರಗೆ ಕಾಣಿಸಿಕೊಂಡಿತು.

ಲೀಲಾ, ಶಾಂತ ಮನೆಗೆ ಬಂದಾಗ ಆ ಹೆಂಗಸರ ಗುಂಪು ಇನ್ನೂ ಅಲ್ಲಿಯೆ ಕುಳಿತಿತ್ತು. ಶಂಕರಮ್ಮನಂತೂ ಪಡರಿಸಿಕೊಂಡು ಕುಳಿತಿದ್ದರು. ತಮ್ಮದೇ ಈ ಮನೆ, ಉಳಿದವರೆಲ್ಲರೂ ತಮ್ಮ ಊಳಿಗದವರು ಎನ್ನುವಂತಿತ್ತು ಅವರ ರೀತಿ. ಗೇಟ್ ತೆಗೆದು ಒಳಕ್ಕೆ ಬರುತ್ತಲೆ ಶಾಂತಳಿಗೆ ಅವರೆಲ್ಲ ಕುಳಿತುದು ಕಾಣಿಸಿತು. ತಕ್ಷಣ ಮೈಯೆಲ್ಲ ಬೆಂಕಿ ಆಯಿತು. ಆದುದಾಗಿಹೋಗಲಿ, ಆ ಶಂಕರಮ್ಮನನ್ನು ಚೆನ್ನಾಗಿ ಥಳಿಸಿ ಬುದ್ಧಿ ಕಲಿಸಬೇಕೆಂದು ರೋಷ ಹೇಳಿತು. ಆದರೆ ದುಡುಕಬೇಡ, ನಿಧಾನಿಸು ಎಂದು ಸಂಯಮ ಹೇಳಿತು. ಬೆಂಕಿಯನ್ನು ಕಣ್ಣಿನಲ್ಲಿ ಉಗುಳುತ್ತ ಶಾಂತ ಒಳಕ್ಕೆ ಕಾಲಿಟ್ಟಳು. ಲೀಲಳಿಗೆ ಹೆದರಿಕೆ

ಆಯಿತು. ಆದರೆ ತನ್ನ ಕೋಪವನ್ನು ತಗ್ಗಿಸಿಕೊಂಡು ಶಾಂತ ಒಳಕ್ಕೆ ಹೋದಳು. ಹಜಾರವನ್ನು ದಾಟಿ ರೂಮಿನೊಳಕ್ಕೆ ಹೋಗಬೇಕು. ಎಲ್ಲರೂ ಅವಳನ್ನೆ ದಿಟ್ಟಿಸಿ ನೋಡುತ್ತಿದ್ದರು. ಅವರ ಕರ್ಕಶ ದೃಷ್ಟಿ ಮೈಗೆಲ್ಲ ಚೇಳಿನ ವಿಷದಂತೆ ಏರಿಕೊಂಡು ಉರಿಯುತ್ತಿತ್ತು. ಶಾಂತ ಅಂತೂ ಬಹು ಪ್ರಯಾಸ ದಿಂದ ಕೋಪವನ್ನು ಗಂಟು ಕಟ್ಟಿಟ್ಟಳು. ಆದರೆ ಶಂಕರಮ್ಮನವರು ಸುಮ್ಮ ನಿದ್ದಿದ್ದರೆ ಎಲ್ಲ ಚೆನ್ನಾಗಿರುತ್ತಿತ್ತು. ಇದ್ದಕ್ಕಿದ್ದಂತೆ ಅವರಿಗೆ ಶಾಂತಳನ್ನು ಚುಚ್ಚಬೇಕೆನಿಸಿ,

"ಏನಮ್ಮ ಶಾಂತ, ಈಗ ಮೈ ಹೇಗಿದೆ ?" ಎಂದರು ಅವಳ ಕಡೆ ತಿರುಗಿ.

ಒಂದು ಫ್ಯೂಸ್ ಸಾಕು ಒಂದು ಬಾಂಬನ್ನು ಸಿಡಿಸಲು! ಈ ತನಕ ಅದುಮಿಟ್ಟುಕೊಂಡಿದ್ದ ಶಾಂತಳ ಕೋಪ ಈ ಮಾತಿನಿಂದ ಸಿಡಿಯಿತು. ಆದರೂ ಅವಳು ನಾಲಗೆಯನ್ನು ಮಿತಿಯಲ್ಲಿಯೆ ಇಟ್ಟುಕೊಂಡಿದ್ದಳೆಂದು ಹೇಳಬೇಕು. ಮನಸ್ಸಿನ ಕಹಿಯನ್ನೆಲ್ಲ ಸಾಧ್ಯವಾದಷ್ಟೂ ತಡೆದು ನಿಲ್ಲಿಸಿದಳು. ಹೀನಾಮಾನವಾಗಿ ಶಂಕರಮ್ಮನವರನ್ನು ಅಂದುಬಿಡಬೇಕು, ಹುಲಿಯ ಹಾಗೆ ಅವರ ಮೇಲೆ ಬೀಳಬೇಕು ಎನಿಸಿದರೂ ಹೇಗೊ ತಡೆದಳು. ಆದರೂ ಮಾತಿನಲ್ಲಿ ಕಹಿ ಸೂಚಿತವಾಯಿತು. ಕೊಂಚ ಕಟುವಾದ ಸ್ವರದಲ್ಲಿ ಉತ್ತರ ಕೊಟ್ಟಳು :
"ಇನ್ನೂ ನಿಮ್ಮ ದಯದಿಂದ ಬದುಕಿದ್ದೇನೆ, ಹೀಗೆಯೆ."

ಎಲ್ಲರೂ ಬೆರಗುಗಣ್ಣಾದರು. ಎಂತಹ ಉತ್ತರ! ಇಂತಹ ಉದ್ಧಟತನವೆ! ಆರೋಗ್ಯವಾಗಿರುವೆಯಾ ಎಂದರೆ ಈ ರೀತಿಯ ಮಾತು ಆಡುವುವೆ ಎಂದು ಎಲ್ಲರ ಮುಖವೂ ಧುಮುಗುಟ್ಟಿದವು. ಬೆಕ್ಕಸಬೆರಗಾಗಿ ಅವಾಕ್ಕಾಗಿ ಕುಳಿತರು. ಆದರೆ ಶಂಕರಮ್ಮ ಇಷ್ಟಕ್ಕೆಲ್ಲ ಜಗ್ಗುವ ಪ್ರಾಣಿಯಲ್ಲ. ಮಾತಿನ ವ್ಯಂಗ್ಯ, ಕಹಿ ಅವರಿಗೆ ತಾಕಲಿಲ್ಲ. ಆದರೂ ಶಾಂತಳಿಗೆ ಬುದ್ಧಿ ಕಲಿಸುವವರಂತೆ ಮಾತಾಡಿಯೇ ಆಡಿದರು. "ಹಾಗಂದರೇನಮ್ಮ, ಏನೋ ಪಾಪ, ಮೈ ಚೆನ್ನಾಗಿರಲಿಲ್ಲವಲ್ಲ ಅಂತ ಕೇಳಿದೆ ಅಷ್ಟೆ. ಅದೇ ತಪ್ಪಾಯಿತೆ ?" ಎಂದರು ತಾವು ಅವಮಾನಿತರಾದಂತೆ.

"ಹೌದು, ನಾನಿನ್ನೂ ನಿಮ್ಮ ದಯದಿಂದ ಬದುಕಿಯೆ ಇದೇನೆ ಅಂತ ಅದಕ್ಕೇ ಹೇಳಿದ್ದು" ಎಂದಳು ಶಾಂತ ಹಿಂದಕ್ಕೆ ತಿರುಗಿ. ಈಗ ಅವಳ ಮುಖ ಉಗ್ರವಾಗಿತ್ತು.

"ಹಾಗಂದರೇನೆ, ಶಾಂತ. ದೊಡ್ಡವರ ಎದುರಿಗೆ ಕೊಂಚ ಮಾನ

ಮರ್ಯಾದೆ ಇಟ್ಟುಕೊಂಡು ಮಾತಾಡಬೇಕು" ಎಂದರು ಸಾವಿತ್ರಮ್ಮ. ತಮ್ಮ ಮಗಳು ಹೀಗೆ ಮಾತಾಡಿ ಶಂಕರಮ್ಮನವರಿಗೆ ಅವಮಾನ ಮಾಡಿಬಿಟ್ಟಳಲ್ಲ ಎಂದು ಅವರ ಮನಸ್ಸು ವ್ಯಗ್ರವಾಯಿತು. ಮಗಳ ಮುಖದಲ್ಲಿ ಕೂಡ ಉಗ್ರತೆ ಕಂಡು ಅವರಿಗೆ ಗಾಬರಿಯಾಯಿತು.

"ಮಾನ! ಮರ್ಯಾದೆ! ಯಾರಿಗೆ ಮಾನಮರ್ಯಾದೆ! ಇಂತಹ ಮನೆ ಹಾಳುಮಾಡುವವರಿಗೆ, ಮಾನಗೆಟ್ಟವರಿಗೆ, ಇದೇ ಸರಿ" ಎಂದಳು ಶಾಂತ.

ತಕ್ಷಣ ಶಂಕರಮ್ಮ ಎದ್ದರು. ಅವರ ಮುಖ ಕಪ್ಪಿಟ್ಟಿತು. ಈ ಆಘಾತ ಬಂದೀತೆಂದು ಅವರು ಎಣಿಸಿರಲಿಲ್ಲ. ಎಲ್ಲ ದೂರುಗೋರ(Rumour mongers)ರಂತೆ ಅವರೂ ಪುಕ್ಕಲು ಸ್ವಭಾವದವರು. ಹೇಡಿತನ ಅವರಿಗೆ ಮೈಗೂಡಿತ್ತು. ಯಾರ ಮೇಲಾದರೂ ಹೀಗೆ ಊಹಾಪೋಹದ ದೂರು ಕಟ್ಟಿದಾಗ ಅವರು ಆ ವ್ಯಕ್ತಿಯ ಒದ್ದಾಟ ನೋಡಿ ಹಿಗ್ಗುತ್ತಿದ್ದರು. ಆದರೆ ತಮ್ಮ ವಿರುದ್ಧವಾಗಿ ಮಾತನ್ನು ಕೇಳುವ ಅವಕಾಶ ಈ ತನಕ ಬಂದಿರಲಿಲ್ಲ. ಆದರೆ ಈಗ ಇದ್ದಕ್ಕಿದ್ದಂತೆ ಶಾಂತ ಎರಗಿಬಿದ್ದುದರಿಂದ ಅವರಿಗೆ ಗಾಬರಿ ಆಯಿತು. ತಕ್ಷಣವೆ ಎದ್ದು ಹೊರಡಲು ಸಿದ್ಧರಾದರು. ಸಾವಿತ್ರಮ್ಮನವರು ಅದನ್ನು ನೋಡಿದರೂ ಏನು ಮಾಡಬೇಕೆಂಬುದು ಅವರಿಗೆ ತೋರಲಿಲ್ಲ. ಇದ್ದಕ್ಕಿದ್ದ ಹಾಗೆ ಶಂಕರಮ್ಮ ಹೊರಟುಹೋಗುವುದು ಅವರಿಗೆ ಸರಿದೋರಲಿಲ್ಲ.

"ಯಾಕೆ ಎದ್ದಿರಿ, ಶಂಕರಮ್ಮನೋರೆ, ಕೂತುಕೊಳ್ಳಿ" ಎಂದರು.

"ಯಾಕಮ್ಮ, ಈ ಮನೆಯಲ್ಲಿ ಮಾನವಂತರೆ ಇರಲಿ. ನಮಗೆ ಯಾಕೆ ಹೇಳಿ. ನಲವತ್ತು ವರ್ಷವಾಯಿತು ಸಂಸಾರ ಮಾಡಲಾರಂಭಿಸಿ. ಈ ತನಕ ಒಬ್ಬರ ಕೈಯಲ್ಲಿ ಒಂದು ಮಾತು ಅನ್ನಿಸಿಕೊಳ್ಳಲಿಲ್ಲ. ಈಗ ಮಾನಗೆಟ್ಟವಳು ಅಂತ ಅನ್ನಿಸಿಕೊಂಡದ್ದಾಯಿತು. ಅದೂ ಗಂಡ ಬಿಟ್ಟವಳ ಕೈಯಲ್ಲಿ" ಎಂದಂದು ಹೊರಟೇಬಿಟ್ಟರು. ಅವರ ಜತೆ ಶಾರದಮ್ಮನೂ ಉಳಿದವರೂ ಹೊರಟುಬಿಟ್ಟರು.

ಸಾವಿತ್ರಮ್ಮನವರು ಒಮ್ಮೆಲೆ ಕುಸಿದರು. ಶಂಕರಮ್ಮನ ಬಾಯಿಂದ ಎಂತಹ ಮಾತು ಬಂತು. ತಮ್ಮ ಶಾಂತಳನ್ನು ಅಂತಹ ಮಾತಂದುಬಿಟ್ಟರಲ್ಲ. ಇನ್ನೇನು ಗತಿಯೆಂದು ಆಕಾಶವೆ ತಲೆಯ ಮೇಲೆ ಬಿದ್ದಂತಾಯಿತು ಅವರಿಗೆ. ಶಂಕರಮ್ಮನವರು ಆ ಮಾತಂದರು! ಇನ್ನು ತಾವು ಬೀದಿಯಲ್ಲಿ ತಾನೆ ಹೇಗೆ

ತಲೆಯೆತ್ತಿಕೊಂಡಿರುವುದು. ಎಲ್ಲರೂ ತಮ್ಮನ್ನು ತಾತ್ಸಾರದಿಂ [redacted] ತಿರಸ್ಕಾರ ಮಾಡುವರು; ಗೌರವ, ವಿಶ್ವಾಸಕ್ಕೆ ಬದಲು ಅಸಡ್ಡೆಯನ್ನು [redacted] ವರು. ಹೇಗೆ ತಾನೆ ಈ ಅಪವಾದದಲ್ಲಿ ಬದುಕಿಕೊಂಡಿರುವುದು ಎನಿಸಿತು. ಅಲ್ಲದೆ ಶಾಂತಳ ಗತಿಯಾದರೂ ಏನು! ಹೀಗಾಗಿಹೋಯಿತಲ್ಲ ಎಂದು ನೊಂದು ಹೃದಯ ಸೀದುಹೋಯಿತು. ಕಣ್ಣಿನಲ್ಲಿ ಒಂದೇ ಸಮನಾಗಿ ಧಾರೆ ಇಳಿಯಿತು. ಶಾಂತಳ ಗತಿಯೇನು? ಶಾಂತಳ ಗತಿಯೇನು? ಎರಡು ಮೂರು ತಿಂಗಳ ಬಸುರಿ ಜೀರೆ! ಹೀಗೆಯೆ ಕೊರಗಿಗೆ ಕೊರಗು ಸೇರಿ ಇನ್ನೇನಾಗಿ ಹೋದಾಳೊ. ಇನ್ನೇನಾದರೂ ಅನಾಹುತಕ್ಕೆಡೆಕೊಟ್ಟರೇನು ಗತಿಯೆಂದು ತಕ್ಷಣ ಧಿಗ್ಗೆಂದಿತು ಎದೆ. ನಾಲ್ಕು ದಿನಕ್ಕಾಗಿ ಮನೆಗೆ ಬಂದರೆ ಅದಕ್ಕೆ ಹೀಗೆ ಅಪವಾದ, ಅಪಪ್ರಚಾರವಾರಂಭವಾಯಿತಲ್ಲ. ಆದರೂ ಶಾಂತ ಬಂದ ಸ್ಥಿತಿಯಲ್ಲಿ ಹೀಗೆ ಎಂದು ಹೇಳಲಿಕ್ಕಾಗದು. ಯಾವುದಕ್ಕೂ ಸರಿಯಾಗಿ ಉತ್ತರ ಕೂಡ ಕೊಡುತ್ತಿರಲಿಲ್ಲ. ಹೊರಕ್ಕೆ ಬರುತ್ತಿರಲಿಲ್ಲ. ರೂಮಿನಲ್ಲಿಯೆ ಕುಳಿತು ಕೊರಗಿ ಕೊರಗಿ ಕೃಶವಾಗುತ್ತಿದ್ದಳು. ಇದರಿಂದಲೆ ಊಹಾಪೋಹಕ್ಕೆ ಅವಕಾಶವಾಯಿತು. ಹೀಗಾಗಬಾರದಾಗಿತ್ತು. ಪಾಪ! ಶಾಂತ! ಹೀಗೆ ಯೋಚನೆಗಳ ಜಲಪಾತ ತಲೆಯಲ್ಲಿ ಸಿಡಿಯುತ್ತಿತ್ತು. ಸಾವಿತ್ರಮ್ಮನವರು ಆ ಕಡೆ ನೋಡಿದರು. ಶಾಂತ ರೂಮಿನೊಳಕ್ಕೆ ಹೋಗಿ ಕುಳಿತು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಲೀಲಾ ಮಾತ್ರ ಏನೂ ತಿಳಿಯದೆ ಬಾಗಿಲ ಬಳಿ ನಿಂತುಬಿಟ್ಟಿದ್ದಳು. ಅನಂತರಾಮು ನೆಲದ ಮೇಲೆ ಕುಳಿತು ಆಟವಾಡಲು ಹವಣಿಸುತ್ತಿದ್ದ. ಸಾವಿತ್ರಮ್ಮನಿಗೂ ಹೊಟ್ಟೆಯ ಸಂಕಟ ತಡೆಯಲಾಗಲಿಲ್ಲ. ರೂಮಿನ ಹತ್ತಿರಕ್ಕೆ ಬಂದರು. ಮಗಳ ದುಃಖವನ್ನು ಕಂಡು ಅವರ ದುಃಖವೂ ಉಮ್ಮಳಿಸಿತು. ಶಾಂತಳನ್ನು ಹೇಗೆ ಮಾತನಾಡಿಸಬೇಕೆಂದು ಅವರಿಗೆ ತೋಚಲಿಲ್ಲ. ಆದರೂ ಅವಳ ದುಃಖ, ಅವರ ಹೃದಯದ ನೋವು ಹೇಗಾದರೂ ಅವಳನ್ನು ಸಮಾಧಾನಪಡಿಸಬೇಕೆನ್ನುವ ಆಸ್ಥೆಯನ್ನು ಕೆರಳಿಸಿದವು.

"ಏನಾಯಿತೆ, ಶಾಂತ—ಏನಾಯಿತು ಹೇಳು" ಎಂದರು.

ಅವರ ಮಾತಿನಿಂದ ಶಾಂತಳ ದುಃಖ ಉಕ್ಕಿತು. ಮೈಯೆಲ್ಲ ಕುಲುಕಿ ಹೋಯಿತು, ಅವಳ ಅಳುವಿನಲ್ಲಿ. ಅದನ್ನು ಕಂಡು ಸಾವಿತ್ರಮ್ಮನಿಗೆ ಹತ್ತಿರ ಹೋಗಿ ಮಗಳನ್ನು ತಬ್ಬಿಕೊಂಡು ಗಳಗಳನೆ ಅತ್ತುಬಿಡಬೇಕೆನ್ನಿಸಿತು. ಆದರೆ

ಕಾಲು ಹಿಂದೆಗೆಯಿತು. ಮತ್ತೆ ಕಣ್ಣೊರಸಿಕೊಳ್ಳುತ್ತ "ಏನಾಯಿತು ಶಾಂತ, ಯಾರಾದರೂ ಏನಾದರೂ ಅಂದರೆ? ಹೇಳು" ಅಂದರು. ಮಗಳ ದುಃಖ ಹೇಗಾದರೂ ನೀಗಿದರೆ ಸಾಕೆನಿಸಿತು ಅವರಿಗೆ.

ಶಾಂತ ಅದಕ್ಕೆ ಉತ್ತರ ಕೊಡದೆ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಏನೂ ಉತ್ತರ ಬಾರದಿರಲು ಸಾವಿತ್ರಮ್ಮನವರು ಲೀಲಳ ಕಡೆ ತಿರುಗಿದರು. ಲೀಲಾ ದಿಕ್ಕುಗಾಣದವಳಂತೆ ಸುಮ್ಮನೆ ಚಡಪಡಿಸುತ್ತ ನಿಂತಿದ್ದಳು. ಏನು ಮಾಡ ಬೇಕೊ, ಹೇಗೆ ಸಮಾಧಾನಮಾಡುವುದೊ ತಿಳಿಯದು.

ಸಾವಿತ್ರಮ್ಮನವರು ಅವಳ ಕಡೆ ತಿರುಗಿ "ನೀನಾದರೂ ಹೇಳು ಲೀಲಾ, ಏನಾಯಿತು?" ಎಂದರು.

ಲೀಲಾ ಒದ್ದಾಡಿದಳು. ಉತ್ತರ ಹೇಳುವುದೂ ಕಷ್ಟ, ಬಿಡುವುದೂ ಕಷ್ಟ. ಶಾಂತಳೆದುರಿಗೆ ಆ ಮಾತುಗಳನ್ನು ಸಾವಿತ್ರಮ್ಮನವರಿಗೆ ಹೇಗೆ ಹೇಳುವುದೆಂದು ಒದ್ದಾಡಿದಳು. ಒಂದು ಸಾರಿ ಆ ಕಡೆ ತಿರುಗಿ ನೋಡಿದಳು. ಶಾಂತ ಮುಖ ಮುಚ್ಚಿಕೊಂಡು ಅಳುತ್ತಿದ್ದಳು. ಈ ಕಡೆ ನೋಡಿದರೆ ಅತ್ತೆ ಗಾಬರಿಮುಖ ದಿಂದ ನಿಂತಿದ್ದರು. ಏನು ಹೇಳಲೂ ಸಂಕಟ, ಹೇಳದಿದ್ದರೂ ಸಂಕಟ. ಅದ ಕ್ಕೋಸ್ಕರ "ಏನೂ ಇಲ್ಲ" ಎಂದಳು ಮೆಲ್ಲನೆ.

"ಏನೂ ಇಲ್ಲದಿದ್ದರೆ ಯಾಕೆ ಹೀಗಿದಾಳೆ? ಏನಾಯಿತು ಹೇಳು."

ಕೊಂಚ ಧೈರ್ಯ ಮಾಡಿಕೊಂಡು ಲೀಲಾ "ನಾವು ಸುತ್ತಾಡಲು ಹೋಗಿ ದ್ದಾಗ—ಶಂಕರಮ್ಮನ ಮಗಳು—ಶಾಂತಳ ವಿಷಯವಾಗಿ—" ಎಂದು ತಡ ವರಿಸುತ್ತ ಎಲ್ಲವನ್ನೂ ಹೇಳಿದಳು. ಆದರೆ 'ಕೆಟ್ಟ ಚಾಳಿ'ಯ ಮಾತನ್ನು ಆಡಲು ಅವಳಿಗೆ ಧೈರ್ಯ ಬರಲಿಲ್ಲ. ಅದಕ್ಕೋಸ್ಕರ ಆ ಮಾತನ್ನೊಂದನ್ನು ಮರೆಮಾಚಿದಳು.

ಸಾವಿತ್ರಮ್ಮನಿಗೆ ಮಾತಾಡಲು ನಾಲಗೆ ಬರಲಿಲ್ಲ. ಹೊಸಲಲ್ಲಿ ಕುಳಿತು ಅಳಲು ಆರಂಭಿಸಿದರು. ಲೀಲಳಿಗೆ ಏನೂ ತೋಚದು. ಆಡಿಕೊಂಡಿದ್ದ ಅನಂತು ಇದ್ದಕ್ಕಿದ್ದಂತೆ ಕಾಲಿನ ಮೇಲೆ ಆಟದ ಸಾಮಾನು ಜಜ್ಜಿಕೊಂಡು ಅಳಲಾರಂಭಿಸಿದ.

ಆ ಹೊತ್ತಿಗೆ ಸರಿಯಾಗಿ ರಾಮಸ್ವಾಮಿ ಮನೆಯೊಳಕ್ಕೆ ಬಂದರು. ಸಾವಿತ್ರಮ್ಮನವರು ಕಣ್ಣೀರು ಹಾಕುತ್ತ ಕುಳಿತಿದ್ದರು. ಮಗು ಅಳುತ್ತಿತ್ತು.

ರೂಮಿನಲ್ಲಿ ಶಾಂತ ಅಳುತ್ತ ಮಲಗಿದ್ದಳು. ಲೀಲಾ ವ[illegible]ತ್ತಿಕೊಳ್ಳಲು ಮುಂದೆ ಬಂದಳು. ಅವಳ ಮುಖವೂ ಕಂದಿಹೋಗಿತ್ತು. ರಾಮಸ್ವಾಮಿಗೆ ಇದೇನೂ ಗೊತ್ತಾಗಲಿಲ್ಲ. ಯಾಕೆ ಹೀಗೆ ಎಲ್ಲರೂ ಕುಳಿತುಬಿಟ್ಟಿದ್ದೋ, ಏನೋ ಆಗಿದೆಯೆಂದು ತಕ್ಷಣ ಆನಿಸಿತು. ಅವರಿಗೂ ಈ ಅಳು ಕಂಡು ಗಾಬರಿ ಆಯಿತು. ಅದನ್ನು ಮುಚ್ಚಿಡಲು ಅವರಿಗೂ ಆಗಲಿಲ್ಲ.

"ಏನೇ—ಏನಾಯಿತು. ಯಾಕೆ ಹೀಗೆ ಕುಳಿತುಬಿಟ್ಟದೀರಿ, ಎಲ್ಲ ಅಳುತ್ತ. ಏನು ಲೀಲಾ, ಏನಾಯಿತಮ್ಮ? ಶಾಂತ ಯಾಕೆ ಅಳುತ್ತಿದಾಳೆ?" ಎಂದು ಒಂದೇ ಸಮನೆ, ಒಂದೆ ಉಸುರಿಗೆ ಕೇಳಿಬಿಟ್ಟರು. ಅವರ ಪ್ರಶ್ನೆ ಕೇಳಿದೊಡನೆಯೆ ಸಾವಿತ್ರಮ್ಮನವರ ದುಃಖವಿನ್ನೂ ಹೆಚ್ಚಾಯಿತು. ಮೌನ ವಾಗಿದ್ದ ಅಳು ಈಗ ಜೋರಾಯಿತು. ಕಟ್ಟೆಯೊಡೆದು ಬಂದ ಪ್ರವಾಹ ವಾಯಿತು. ಶಾಂತಳ ಅಳುವಿನ ದನಿಯೂ ಜೋರಾಯಿತು. ಲೀಲಳಿಗೆ ಏನು ಹೇಳಬೇಕೊ ತೋಚಲಿಲ್ಲ. ತಲೆ ತಗ್ಗಿಸಿಕೊಂಡು ಅನಂತುವನ್ನು ಸಮಾಧಾನ ಪಡಿಸಲು ಯತ್ನಿಸಿದಳು. ಈ ಮೌನ ತಡೆಯದ ಮೌನ. ರಾಮಸ್ವಾಮಿಯ ಗಾಬರಿ ಇನ್ನೂ ಹೆಚ್ಚಾಯಿತು. ಏನು ಅನಾಹುತವಾಗಿಹೋಗಿದೆಯೊ ಎಂದು ಹೃದಯ ಹೊಡೆದುಕೊಂಡಿತು. ಹೆಂಡತಿಯ ಮುಖ ನೋಡಿದರು, ಮಗಳ ಕಡೆ ನೋಡಿದರು, ಸೊಸೆಯ ಕಡೆ ನೋಟ ಬೀರಿದರು. ಆದರೆ ಯಾರಿಂದಲೂ ಉತ್ತರ ಬರಲಿಲ್ಲ. ಮನಸ್ಸು ತಡೆಯದಾಯಿತು. ಬೇಸರ ಗಾಬರಿಗೆ ಕೂಡಿ ಕೊಂಡಿತು. ಮೂಗಿನೊಳಗೆ ನೊಣ ಹೊಕ್ಕಂತಾಯಿತು ಅವರಿಗೆ.

"ಏನೇ—ಏನಾಯಿತೆ?" ಎಂದರು ಕೊಂಚ ಗಾಬರಿಯಿಂದ ಗಡುಸಾದ ದನಿಯಲ್ಲಿ—"ಏನು ಹೇಳಬಾರದೆ—ಸುಮ್ಮನೆ ಅಳುತ್ತ ಕೂತುಬಿಟ್ಟರೆ?"

ಸಾವಿತ್ರಮ್ಮನವರಿಗೆ ಏನು ಹೇಳುವುದೂ ತಿಳಿಯಲಿಲ್ಲ. ಎದ್ದು ನಿಂತು ಸೆರಗನ್ನು ಕಣ್ಣಿಗೊತ್ತಿಕೊಂಡರು. ಮೆಲ್ಲನೆ "ಶಾಂತಳ ಮೇಲೆ—ಏನೇನೋ ಮಾತು—" ಎಂದರು.

"ಏನು ಮಾತು? ಯಾರಾಡಿದ್ದು?" ಎಂದರು ರಾಮಸ್ವಾಮಿ. ಈಗ ಮನಸ್ಸಿಗೆ ಕಾತರ ಕಡಿಮೆಯಾಯಿತು. ಸದ್ಯ, ಇಷ್ಟೇತಾನೆ ಎನಿಸಿ ಕೊಂಚ ಸಮಾಧಾನವಾಯಿತು.

"ಶಂಕರಮ್ಮನವರು ಅವಳು ಇಲ್ಲಿಗೆ ಬಂದದ್ದಕ್ಕೆ—ಗಂಡ ಬಿಟ್ಟವಳು

ಅಂದರು” ಎಂದು ಸಾವಿತ್ರಮ್ಮ ಮತ್ತೆ ಕಣ್ಣೀರುಗರೆದರು.

“ಸರಿ, ಸರಿ. ಈ ಹೆಂಗಸರಿಗೆ ಇನ್ನೇನು ಕೆಲಸ. ಯಾರನ್ನು ಅನ್ನಬಹುದು, ಯಾರನ್ನು ದೂರಬಹುದು ಎಂದು ಕಾದಿರುತ್ತಾರೆ. ಶಂಕರಮ್ಮ ಅಂದರೆ ಯಾರು—ಅವಳೇ ತಾನೆ—ಸೀತಾರಾಮುವಿನ ಅತ್ತಿಗೆ—ಅಷ್ಟಕ್ಕೇ ಇಷ್ಟು ಹಗರಣ” ಎಂದು ರೂಮಿಗೆ ಹೊರಟುಬಿಟ್ಟರು.

ತಂದೆಯ ಅಸಡ್ಡೆಯ ಮಾತು ಶಾಂತಳಿಗೆ ಕೊಂಚ ಸಮಾಧಾನವನ್ನು ತಂದಿತು. ಆದರೂ ಎಂತಹ ಅವಮಾನ—ಎಂತಹ ಮಾತು! ಗಂಡ ಬಿಟ್ಟವಳು! ತನ್ನನ್ನು ಹಾಗೆಲ್ಲ ಅನ್ನಲು ಅವರಿಗೆಲ್ಲ ಏನು ಹಕ್ಕು? ಆದರೆ ತಾನು ಹಾಗೆ ಬಂದುದು, ತಾಯಿಯ ಗೊಣಗಾಟದ ರೀತಿಯೆ ಈ ರೀತಿಯ ಅಪವಾದಕ್ಕೆ ಕಾರಣವಾಯಿತು ಎಂದೂ ಅವಳಿಗೆ ಗೊತ್ತು. ಆದರೆ ಎಲ್ಲಕ್ಕಿಂತಲೂ ಹೆಚ್ಚಾಗಿ ಬರೆಯೆಳೆದಂತಹ ಆ ಮಾತು—ಕೆಟ್ಟ ಚಾಳಿಯದು! ಆ ಮಾತನ್ನು ತಾಯಿಗೂ ತಂದೆಗೂ ಲೀಲಾ ಹೇಳದಿದ್ದುದೆ ಒಳ್ಳೆಯದಾಯಿತೆನಿಸಿತು. ಆದರೆ ತಾನು ಹಾಗೆ ಬಚ್ಚಿಟ್ಟುದು ತಪ್ಪಾಯಿತು. ಅದರಿಂದಲೆ ಇದಕ್ಕೆಲ್ಲ ಅನುವಾದುದು ಎನ್ನಿಸಿತು. ತಂದೆಗೆ, ತಾಯಿಗೆ ಎಲ್ಲವನ್ನೂ ಹೇಳುವುದೆ ಸರಿಯೆಂದುಕೊಂಡಳು. ಆದರೆ ಹೇಗೆತಾನೆ ಹೇಳುವುದು. ಮೊದಲೇ ತನ್ನ ಯಜಮಾನರ ಮೇಲೆ, ಮೈದುನನ ಮೇಲೆ ತಂದೆ ಉರಿದುಬೀಳುತ್ತಿದ್ದರು. ಈಗ ತನ್ನ ಮೈದುನನೊಂದಿಗೆ ತಾನು ಜಗಳವಾಡಿಕೊಂಡು ಬಂದಿರುವೆನೆಂದು ಗೊತ್ತಾದರೆ ಇನ್ನೇನು ಬೆಂಕಿಯ ಬೆಟ್ಟವಾಗಿ ಬಿಡುವರು. ಮತ್ತೆ ಹೇಗಾದರೂ ಸರಿ, ಅವರು ರೇಗದಂತೆ ಇರಬೇಕಾದರೆ ಈ ಮಾತನ್ನು ಅವರಿಗೆ ಹೇಳದೆ ಇರುವುದೆ ಸರಿಯೆನಿಸಿತು. ಆದರೆ ಈಗೆದ್ದ ಅಪವಾದದ ಮಾತು—ಅದು ಅಲ್ಲಿಗೆ ನಿಲ್ಲಲಾರದು. ಶಂಕರಮ್ಮನ ನಾಲಗೆ ಚಾವಟಿಯಂತೆ ಪಟಪಟನೆ ಸದ್ದುಮಾಡಿಯೇ ತೀರುವುದು. ಇನ್ನು ಇದಕ್ಕೂ ಮೇಲೆ ಇನ್ನೂ ಏನೇನು ಅಪವಾದದ ಮಾತೆಬ್ಬಿಸುವರೊ ಎಂದು ಶಾಂತಳಿಗೆ ಗಾಬರಿಯಾಯಿತು.

ರಾಮಸ್ವಾಮಿಯವರು ರೂಮಿನಲ್ಲಿಯೆ ಗೊಣಗಿಕೊಂಡರು: “ಹಾಳು ಹೆಂಗಸರು. ತಮ್ಮ ಮನೆಯ ಹೆಣ ಮುಚ್ಚಿಟ್ಟು ಉಳಿದವರ ಮನೆಯ ಕಸವನ್ನು ತೋರಿಸುವವರು. ಮಾಡೋದಕ್ಕೆ ಬೇರೆ ಕೆಲಸವಿಲ್ಲ” ಎಂದುಕೊಂಡು ಹೊರಕ್ಕೆ ಬಂದರು. ಸಾವಿತ್ರಮ್ಮನವರು ಹಾಗೆಯೆ ನಿಂತಿದ್ದುದನ್ನು ಕಂಡು

ಅವರ ಮೇಲೆ ಸಿಡುಗುಟ್ಟಿದರು : "ನೋಡು, ನಿನ್ನ ಸ್ನೇಹಿತರ ಗುಣ. ಅವರ ಹತ್ತಿರ ಸೀನು ಕೂಚುಹತ್ತತೀಯು" ಎಂದರು.

ಸಾವಿತ್ರಮ್ಮ ಅಳುತ್ತ, "ನನಗೇನು ಗೊತ್ತು, ಹೀಗಾಗುತ್ತೆ ಅಂತ. ಅಲ್ಲದೆ ಏನೋ ಕೇಳಿದರು. ಪಾಪ, ಶಾಂತಳಿಗೆ ಅತ್ತೆಯ ಮನೆಯಲ್ಲಿ ಕಷ್ಟವೆಂದು ನಾನಂದೆ, ಅಷ್ಟೆ. ಅದನ್ನೆ ಇಷ್ಟು ದೊಡ್ಡದು ಮಾಡತಾರೆ ಅಂತ ನಾನು ಹೇಗೆ ತಿಳಕೋಬೇಕು. ಅಲ್ಲದೆ, ಶಾಂತ ಬಂದಾಗ ಅವರೆಲ್ಲ ಇಲ್ಲೇ ಇದ್ದರು" ಎಂದರು.

"ಸರಿ, ಸರಿ. ನೀವು ಹೆಂಗಸರೇ ಹೀಗೆ. ಈಗ ನೋಡು, ಎಂತಹ ಕೆಟ್ಟ ಮಾತು ಬಂತು. ಅವರು ತೋರಿಸಿದ ಒಣ ಸಮಾಧಾನಕ್ಕೆಲ್ಲ ನೀನು ಮೋಸ ಹೋದೆ."

"ನಾನೇನು ಮಾಡಲಿ ಹೇಳಿ. ಎಲ್ಲ ನನ್ನದೇ ತಪ್ಪು. ಆಯಿತಲ್ಲ, ಅವಳನ್ನಾದರೂ ಕೇಳಿ. ಇಷ್ಟು ದಿನವಾಯಿತಲ್ಲ ಬಂದು, ಗಂಡನಿಂದ ಕಾಗದ ಬಂತೆ—ಕೇಳಿ, ಬರಲಿಲ್ಲ. ಬಂದ ದಿವಸ ಊಟ ಕೂಡ ಇಲ್ಲದೆ ಬಂದಳು. ಯಾರಾದರೂ ನೋಡಿದವರು ಏನೆಂದುಕೊಳ್ಳಬೇಕು. ಅಷ್ಟೆ ಅಲ್ಲ, ಇದ್ದಕ್ಕಿದ್ದ ಹಾಗೆ ಇಳಿದಳಲ್ಲ, ಯಾಕೆ ಹಾಗೆ ಅಂತ ಹೇಳಿದಾಳೇನು? ಬಂದ ದಿನದಿಂದ ರೂಮಿನಲ್ಲೆ ಕೂಡಿಕೊಂಡು ಘೋಷಾ ಇದ್ದಳು. ಕೊರಗಿಹೋಗಿ ಕೃಶವಾಗತಾ ಇದಾಳೆ. ಕೇಳಿದರೆ ಯಾಕೆ ಅಂತ ಉತ್ತರ ಹೇಳೋದಿಲ್ಲ. ಸುಮ್ಮನೆ ಇದ್ದು ಬಿಡತಾಳೆ. ನಿಮ್ಮ ಮಗಳಲ್ಲವೆ—ಹಟದಲ್ಲಿ. ಏನಾದರೂ ತುಟಿ ಪಿಟಕ್ಕೆಂದರೆ ಸರಿ. ನಾನು ತಾನೆ ಏನು ಮಾಡಲಿ, ಏನು ಹೇಳಲಿ. ನೀವೇ ಹೇಳಿಕೊಳ್ಳಿ, ನನಗೂ ಹೇಳಿ ಹೇಳಿ ಸಾಕಾಯಿತು" ಎಂದು ನೊಂದ ದನಿಯಲ್ಲಿ ಸಾವಿತ್ರಮ್ಮ ಗೊಣಗಿದರು. ಈ ಮಾತನ್ನು ಶಾಂತ ಕೇಳುತ್ತಿದ್ದುದು ಅವರಿಗೆ ಗೊತ್ತು. ಕೇಳಲಿ ಎಂದೇ ಜೋರಾಗಿ ಹೇಳುತ್ತಿದ್ದರು. ಶಾಂತಳ ಮನಸ್ಸಿನ ಮೇಲೆ ಇವರ ಪರಿಣಾಮ ಏನಾದೀತೆಂದು ಅವರು ಯೋಚಿಸಲೆ ಇಲ್ಲ. ಅಲ್ಲದೆ ಆ ಉದ್ವೇಗದಲ್ಲಿ ಅವರಿಗೆ ಮಾತನ್ನು ಅಲ್ಲಿಗೆ ನಿಲ್ಲಿಸಬೇಕೆಂದೂ ತೋರಲಿಲ್ಲ. ತಮ್ಮ ಯಜಮಾನರು ಕೂಡ ತಮ್ಮ ಮಾತನ್ನು ಕೇಳಿಕೊಂಡು ಸುಮ್ಮನಿದ್ದುದು ಅವರಿಗೆ ಉತ್ತೇಜನವೆ ಆಯಿತು. ಮನಸ್ಸಿನಲ್ಲಿ ಗುಡುಗುಡಿಸುತ್ತಿದ್ದ ರೋಷವನ್ನು ಹೇಗೊ ಹೊರಕ್ಕೆಸೆಯಬೇಕಾಗಿತ್ತು. ಈಗಿನ ತನಕ ಶಾಂತಳ ಅತ್ತೆಯ

ಮನೆಯ ವಿಷಯವಾಗಿ ಗೊಣಗಾಡಿ ತೀಟೆ ತೀರಿಸಿಕೊಂಡಿದ್ದರು. ಈಗ ಶಾಂತಳ ಕಡೆಗೆ ತಿರುಗಿತ್ತು. ಶಾಂತ ಕೊರಗುತ್ತಿರುವಳೆಂಬುದನ್ನು ಕೂಡ ಮರೆತು ಬಿಟ್ಟಂತೆ ಮತ್ತೆ ಗೊಣಗಿದರು.

"ಏನೋ ಯಾರಿಗೆ ತಾನೆ ಗೊತ್ತು. ಬಂದಾಗಿನಿಂದ ಒಂದು ಮಾತಿಲ್ಲ, ಒಂದು ಕತೆಯಿಲ್ಲ. ಯಾವಾಗ ನೋಡಿದರೂ ರೂಮಿನಲ್ಲಿ ಕೂತಿರೋದು, ಕೊರಗತಾ ಇರೋದು. ಮೈ ತಾನೆ ಏನಾಗುತ್ತೆ ಹೇಳಿ. ನಾನು ಯಾರು ಹೇಳೋಕೆ ಅವಳಿಗೆ. ಹೇಳಿದರೆ ಕೇಳತಾಳೆಯೇನು? ಹಟಮಾರಿ ಅವಳು. ಹೀಗೆ ಕೂತಿದ್ದರೆ ಯಾರಾದರೂ ಏನಾದರೂ ಅನ್ನುವುದಿಲ್ಲವೇನು? ಅಲ್ಲಿ ಏನು ಮಾಡಿಕೊಂಡು ಬಂದಿದಾಳೊ" ಎಂದುಬಿಟ್ಟರು. ಅನಾಯಾಸವಾಗಿ ಅವರಿಗೆ ಅರಿವಿಲ್ಲದೆಯೆ ಕೊನೆಯ ಮಾತು ಬಾಯಿಂದ ಹೊರಬಿತ್ತು. ಈ ಮಾತಾಡಿ ದುದರ ಅರಿವು ಕೂಡ ಅವರಿಗಿರಲಿಲ್ಲ. ಅದರ ಅರ್ಥ ಏನಾದೀತೆಂಬುದು ಕೂಡ ತಿಳಿವಿಗೆ ಬರಲಿಲ್ಲ. ಆದರೆ ಈ ಮಾತು ಕೇಳಿ ರಾಮಸ್ವಾಮಿ ಬಚ್ಚಲ ಕಡೆ ಹೊರಟಿದ್ದವರು ಅವಾಕ್ಕಾಗಿ ನಿಂತುಬಿಟ್ಟರು. ಶಾಂತಳಿಗೆ ಈ ಮಾತು ಕೇಳಿಸಿದೆ, ಇನ್ನೇನಾದೀತೊ ಎಂದು ಅವರಿಗೆ ಕಳವಳವಾಯಿತು. ಹಿಂದಕ್ಕೆ ತಿರುಗಿದರೆ ಶಾಂತ ಎದ್ದು ಬಂದು ರೂಮಿನ ಬಾಗಿಲಲ್ಲಿ ನಿಂತಿದ್ದಳು.

ತಾಯಿಯ ಮಾತು ಕೇಳಿ ಶಾಂತ ಭುಸುಗುಟ್ಟಿ ಎದ್ದುನಿಂತಳು. ಬಾಲ ತುಳಿದ ಹಾವು ಫಕ್ಕನೆ ಹೆಡೆಯೆತ್ತಿ ನಿಲ್ಲುವಂತೆ ಅವಳ ಮನಸ್ಸು ಎದ್ದಿತ್ತು. ತನ್ನ ತಾಯಿ! ಇಂತಹ ಮಾತನ್ನುವುದೆ! ಉಳಿದವರು ಏನಾದರೂ ಅಂದರೆ ಅನ್ನಲಿ. ಆದರೆ ತನ್ನ ತಾಯಿ—ತನ್ನ ಮೇಲೆ ಇಂತಹ ಮಾತು! ಥೂತ್! ಎಂತಹ ಜನ್ಮ ಎನ್ನಿಸಿತು. ರೋಷ ದುಃಖಗಳೆರಡೂ ಭುಗಿಲ್ಲನೆದ್ದವು. ಕಣ್ಣು ಗಳಲ್ಲಿ ಕಿಡಿಯಾಡಿತು. ಎದ್ದು ತಾನಾಗಿಯೆ ರೂಮಿನ ಬಾಗಿಲಿಗೆ ಬಂದು ನಿಂತಳು. ಕೆಂಡಗೊಂಡ ಕಣ್ಣುಗಳು ತಾಯಿಯನ್ನೆ ದಿಟ್ಟಿಸಿದವು. ರಾಮ ಸ್ವಾಮಿಯವರಿಗೂ ಮಗಳ ಮುಖ ಕಂಡು ಎದೆ ಜಲ್ಲೆಂದಿತು. ರುದ್ರಸುಂದರ ವಾಗಿತ್ತು ಅವಳ ನಿಲುವು.

"ಏನಂದೆ ಅಮ್ಮ, ಅಲ್ಲಿ ಏನು ಮಾಡಿಕೊಂಡು ಬಂದಿದಾಳೆಯೊ ಅಂದೆ ಅಲ್ಲವೆ?" ಎಂದಳು ನಟ್ಟದನಿಯಲ್ಲಿ. ಕೊಂಚವಾದರೂ ನಡುಗಲಿಲ್ಲ ದನಿ. ಅದರಲ್ಲಿ ಯಾವುದೆ ರೀತಿಯ ಭಾವವೂ ಕಾಣಲಿಲ್ಲ.

“ಶಾಂತ, ಶಾಂತ—ನೀನು ರೂಮಿನೊಳಕ್ಕೆ ಹೋಗು, ಅವಳೊಂದಿಗೆ ಏನು” ಎಂದರು ರಾಮಸ್ವಾಮಿ ಗಾಬರಿಯಿಂದ.

“ನಾನೇನೂ ಮಾಡಿಕೊಂಡು ಬಂದಿಲ್ಲ ಅಲ್ಲಿ, ತಿಳೀತೇನು ಅಂಥಾದ್ದೇನೂ ಆಗಿಲ್ಲ” ಎಂದಳು ಶಾಂತ. ಮುಂದೆ ಇನ್ನೇನು ಹೇಳಬೇಕೆಂದಿದ್ದಳೊ ಏನೋ ಅಷ್ಟರಲ್ಲೆ ಸಾವಿತ್ರಮ್ಮನವರಿಗೆ ತಮ್ಮ ಮಾತಿನ ಮರ್ಮ ತಿಳಿಯಿತು. ಕೂಡಲೆ ಮುಂದಕ್ಕೆ ಬಂದು ಗೊಳೊ ಎಂದು ಅಳಲಾರಂಭಿಸಿಬಿಟ್ಟರು.

“ಎಂತಹ ಮಾತಂದುಬಿಟ್ಟೆನೆ. ನನ್ನ ಮನಸ್ಸಿನಲ್ಲೇನೂ ಕಾರಣವಿರಲಿಲ್ಲ, ಕಣೆ. ನಾನು ನಿನ್ನಲ್ಲಿ ಏನೂ ಅನುಮಾನಪಡಲಿಲ್ಲ. ನನ್ನ ಹಾಳು ಬಾಯಿ ಹೀಗಂದುಬಿಟ್ಟಿತು ನನ್ನ ನಾಲಿಗೆ ಸೇದಿಹೋಗ, ಹೀಗಂದುಬಿಟ್ಟೆನಲ್ಲೇ!” ಎಂದು ಗಟ್ಟಿಯಾಗಿ ಅತ್ತರು.

ಶಾಂತಳಿಗೂ ತಾಯಿಯ ಅಳು ನೋಡಿ ಕೋಪವೆಲ್ಲ ಕಣ್ಣೀರಾಯಿತು. ಹಾಗೆಯೆ ಕಲ್ಲಿನ ವಿಗ್ರಹದಂತೆ ನಿಂತು ಕಣ್ಣೀರು ಕರೆದುಬಿಟ್ಟಳು.

ಆ ಪ್ರಕರಣ ಅಲ್ಲಿಗೆ ಮುಗಿದುಹೋಯಿತು. ಆದರೆ ಅದರ ಫಲವಾಗಿ ಶಾಂತಳ ಮನಸ್ಸಿನ ಮೇಲೆ ದೊಡ್ಡ ಆಘಾತವೆ ಆಯಿತು. ಅವಳಿಗೇನೂ ಬೇಕಾಗಿರಲಿಲ್ಲ. ಭೂತ ಬಡಿದವಳಂತೆ ಸುಮ್ಮನೆ ಕುಳಿತಿರುತ್ತಿದ್ದಳು. ಊಟಕ್ಕೆ ಕರೆದರೆ ಹೋದರೆ ಹೋದಳು, ಇಲ್ಲದಿದ್ದರಿಲ್ಲ. ಜ್ಞಾನವಿದ್ದರೂ ಇಲ್ಲದಂತಾಗಿಬಿಟ್ಟಿದ್ದಳು. ಹೇಳಲಾರದ ಕೊರಗು ಒಂದೆ ಸಮನಾಗಿ ಮನಸ್ಸನ್ನು ಕೊರೆಯುತ್ತಿತ್ತು. ಏನು ಹೇಳಿದರೂ ಕೇಳುತ್ತಿರಲಿಲ್ಲ. ಇದ್ದೂ ಇಲ್ಲದಂತೆ—ಜೀವವಿದ್ದರೂ ಜೀವ ಹೋದಂತಾಗಿದ್ದಳು. ಬರಿಯ ಕೊಳವೆಯಾಗಿತ್ತು, ಅವಳ ಜೀವ. ಕೊಳಲಿನ ದನಿ ಸತ್ತುಹೋಗಿತ್ತು. ಕಣ್ಣು ಬಿಟ್ಟುಕೊಂಡು, ನಟ್ಟಕಣ್ಣಿನಿಂದ, ಬಿಚ್ಚುಗಣ್ಣಿನಿಂದ ಸುಮ್ಮನೆ ನೋಡುತ್ತ ಕುಳಿತಿದ್ದಳು. ತಾಯಿ, ತಂದೆ, ಅತ್ತಿಗೆ ಮಾತನಾಡಿಸಲು ಯತ್ನಿಸಿ ವಿಫಲರಾಗಿದ್ದರು. ಅವಳ ಸ್ಥಿತಿ ಕಂಡು ಸಾವಿತ್ರಮ್ಮನವರು ಗಾಬರಿ ಆದರು. ಎಷ್ಟು ಒದ್ದಾಡಿದರೂ ಶಾಂತ ಬಾಯಿ ಬಿಡಲಿಲ್ಲ. ರೂಮಿನೊಳಗೆ ಹೋಗಿ ಸೇರಿಕೊಂಡವಳು ಮತ್ತೆ ಅಲುಗಾಡಲೆ ಇಲ್ಲ. ಈ ಜಗತ್ತಿನ ಯಾವ ವ್ಯಾಪಾರವೂ ಅವಳಿಗೆ ಬೇಕಿಲ್ಲವೆನ್ನುವಂತಾಗಿಹೋಗಿತ್ತು. ಲೀಲಳಿಗೆ ಅಲ್ಲಿಯೆ ಅವಳೊಂದಿಗೆ ಇರಲು ಹೆದರಿಕೆಯಾಯಿತು. ಆದರೆ ಹೇಳಲು ಕೂಡ ಹೆದರಿಕೆ. ಹೀಗಾಗಿ ಅವಳೂ ಗಾಬರಿಯಿಂದಲೆ ಕುಳಿತಿದ್ದಳು. ತಾನು ಊಟಕ್ಕೆ ಹೋಗುವಾಗ ಮಗುವನ್ನು ಕರೆದುಕೊಂಡು ಹೋದಳು.

ಶಾಂತ ಮಾತ್ರ ಎಷ್ಟು ಕೂಗಿದರೂ ಹೋಗಲೆ ಇಲ್ಲ.

ಯಾರಿಗೂ ಊಟ ಬೇಕಾಗಿರಲಿಲ್ಲ. ರಾಮುಸ್ವಾಮಿ ಸಾಮಾನ್ಯವಾಗಿ ಯಾವ ಪ್ರಕೋಪಕ್ಕೂ ಒಳಗಾಗದವರು ಇದರಿಂದ ಚೆನ್ನಾಗಿ ಥಳಿಸಿದವ ರಂತಾದರು. ಅವರಿಗೆ ಕೂಡ ಮನಸ್ಸಿನ ಕಳವಳದಲ್ಲಿ ಏನೂ ಬೇಡವಾಯಿತು. ಗಾಬರಿ ಆತಂಕಗಳನ್ನು ಮನಸ್ಸಿನಿಂದ ಅವರು ಓಡಿಸಲು ಮಾಡಿದ ಪ್ರಯತ್ನ ಹಣ್ಣಾಗಲಿಲ್ಲ. ಈ ಮಾತೆಲ್ಲಿಗೆ ಮುಟ್ಟಿಬಿಡುವುದೊ ಎಂದು ಗಾಬರಿಯಾಗಿ ದ್ದರು. ಶಾಂತಳನ್ನು ಹುಷಾರಾಗಿ ನೋಡಿಕೊ, ಎಲ್ಲಾದರೂ ಅನರ್ಥವಾದೀತು ಎಂದು ಹೆಂಡತಿಯನ್ನೆಚ್ಚರಿಸಿದರು. ಅವಳ ಕೊರಗಿನ ಕಾರಣವಷ್ಟು ತಿಳಿದರೆ ಸಾಕೆಂದುಕೊಂಡರು. ಆ ಸಮಯದಲ್ಲಿ ಅವಳ ಗಂಡನಿಗೊಂದು ಕಾಗದ ಬರೆಯಲೆ ಎಂಬ ಯೋಚನೆಯೂ ಬಂತು. ಆದರೆ ಅದು ಅಷ್ಟಾಗಿ ಅವರ ಮನಸ್ಸಿಗೆ ಒಪ್ಪಲಿಲ್ಲ. ಸೋತರೂ ಸೋತೆನೆಂದು ತೋರಿಸಿಕೊಳ್ಳದ ರೀತಿ ಅವರದು. ಹಾಗಾಗಿ ಈಗ ಅಳಿಯನಿಗೆ ಕಾಗದ ಹಾಕುವ ಯೋಚನೆ ತಳ್ಳಿ ಹಾಕಿದರು. ನೋಡೋಣ ನಾಳೆ, ಎಂದುಕೊಂಡರು. ಆದರೆ ಮನಸ್ಸಿಗೆ ಅದ ರಿಂದೇನೂ ಸಮಾಧಾನವಾಗಲಿಲ್ಲ. ರಾತ್ರಿ ನಿದ್ರೆ ಬಂದಹಾಗಾದರೂ ಅವರಿಂದ ದೂರದಲ್ಲಿಯೇ ನಿಂತಿತ್ತು. ಸಾವಿತ್ರಮ್ಮನವರಿಗಂತೂ ಆಡಬಾರದಂತಹ ಮಾತೆಂದು ಮಗಳ ಮೇಲೆ ಕಳಂಕ ಹೊರಿಸಿದ ಪಾತಕಿ ತಾವು ಎಂದು ತಮ್ಮನ್ನು ತಾವೇ ಹಳಿದುಕೊಂಡರು. ತಮ್ಮ ಬಾಯಿ ಹಾಳಾಗ, ನಾಲಗೆ ಸೇದಿಹೋಗ ಎಂದು ಎಷ್ಟೊ ಬಾರಿ ಸಿಡುಕಾಡಿದರು. ಕೋಪ, ದುಃಖಗಳೆರಡೂ ಪಶ್ಚಾತ್ತಾಪಕ್ಕೆ ಸೇರಿಕೊಂಡು ಅವರನ್ನು ಹಿಂಡಿಹಾಕಿಬಿಟ್ಟವು. ಮಗಳು ಏನು ಮಾಡಿಬಿಟ್ಟಾಳೊ, ಇನ್ನು ಏನು ಅನಾಹುತವಾಗಿ ಹೋದೀತೊ—ಬಸುರಿ ಬೇರೆ—ಏನು ಕರ್ಮವೊ ಎಂದು ಕೊರಗಿದರು. ರಾತ್ರಿಯೆಲ್ಲ ತೆರೆದ ಕಣ್ಣನ್ನು ಮುಚ್ಚಲಿಲ್ಲ. ಲೀಲಳಿಗೂ ಏನೂ ತೋಚಲಿಲ್ಲ. ಈ ತಾಪತ್ರಯದಲ್ಲಿ ಅವಳಿಗೂ ಆತಂಕ ಸೇರಿಕೊಂಡಿತ್ತು. ಎಂತಹ ಅವಸ್ಥೆ ತನ್ನದು. ಇರಲಾರದೆ ಬಂದು ಇದಕ್ಕೆ ಸಿಕ್ಕಿಕೊಂಡ ಹಾಗಾಯಿತಲ್ಲ ಎಂದು ಅವಳ ಮನಸ್ಸು ಮಿಡುಕಿತು. ಶಾಂತಳ ಬಗ್ಗೆ ಕನಿಕರವಿತ್ತು. ಅತ್ತೆಯ ಮಾತಿನಿಂದ ಸಿಡುಕು ಬಂದರೂ ಮನಸ್ಸಿನ ಯಾವುದೊ ಮೂಲೆಯಲ್ಲಿ ಅನುಮಾನ ಸೇರಿತು. ಆದರೆ ಶಾಂತ ಏನು ಮಾಡಿಕೊಂಡುಬಿಡುವಳೊ, ಭೂತ ಬಡಿದವಳಂತೆ ಕುಳಿತುಬಿಟ್ಟಿರುವಳಲ್ಲ

ಎಂದು ಹೆದರಿಕೆಯೂ ಆಯಿತು. ರಾತ್ರಿಯೆಲ್ಲ ಶಾಂತ ಹಾಗೆಯೆ ಕುಳಿತಿದ್ದಳು. ಅನಂತರ ರಾಮುವನ್ನು ಪಕ್ಕದಲ್ಲಿ ಮಲಗಿಸಿಕೊಂಡು ಎಚ್ಚರವಾಗಿಯೆ ಮಲಗಿದ್ದ ಲೀಲಳಿಗೆ ಗಾಬರಿ. ಆದರೆ ಶಾಂತಳನ್ನು ಮಾತಾಡಿಸುವಷ್ಟು ಧೈರ್ಯ ಕೂಡ ಅವಳಿಗಿರಲಿಲ್ಲ. ಪದೆಪದೆ ಅವಳ ಕಡೆ ನೋಡಿ ಮಲಗಿ ನಿದ್ರೆಹೋಗಲು ಕಣ್ಣು ಮುಚ್ಚಿಕೊಳ್ಳುತ್ತಿದ್ದಳು.

ಶಾಂತಳ ತಲೆಯಲ್ಲಿ ನೋವು ಕೂಡ ಇರಲಿಲ್ಲ. ಆದರೆ ಆಘಾತ ಬಿದ್ದೊಡನೆ ಮನಸ್ಸು ನಿರ್ವಿಕಾರಗೊಂಡಿತ್ತು. ಯಾವ ಭಾವನೆಯನ್ನೂ ಅನುಭವಿಸದಂತೆ ಜಡವಾಗಿತ್ತು. ಹಾಗೆಯೆ ಕುಳಿತಿದ್ದಳು. ನಿಧಾನವಾಗಿ ನೋವು ಹತ್ತಿರ ಹತ್ತಿರ ಬಂತು. ನಿರ್ಭಾವದಿಂದ ಮೆಲ್ಲನೆ ಭಾವನೆ ರೂಪುಗೊಂಡಿತು. ಹೊಟ್ಟೆಯಲ್ಲಿ ಏನೊ ತಳಮಳ, ಸಂಕಟ ಆರಂಭವಾಯಿತು. ಸಂಜೆ ನಡೆದುದೆಲ್ಲ ನೋವಾಗಿ ನಂಜಾಗಿ ನೆನಪಾಯಿತು. ನುಂಗಲಾರದ ವಿಷ ಗಂಟಲಲ್ಲಿ ಸಿಕ್ಕಿಕೊಂಡಂತಾಗಿತ್ತು. ಎಂತೆಂತಹ ಮಾತು ಕೇಳಬೇಕಾಯಿತು. ಯಾರು ಯಾರೊ ಆಡಿಕೊಂಡರು. ಹೋಗಲಿ, ತನ್ನ ತಾಯಿಯೆ ಆ ಮಾತಂದರಲ್ಲ. ಅವರೇನೊ ಅದನ್ನು ತಿಳಿದೂ ತಿಳಿದೂ ಅಂದಿರಲಿಲ್ಲ. ಅದನ್ನು ಸೂಚಿಸಿಯೂ ಇರಲಿಲ್ಲ. ಆದರೆ ಹಾಗೆ ಮಾತಾಡಿದ್ದು ಈಗ ಹೋಗಿಬಿಟ್ಟಿತೆ! ಸಿಡಿಲು ಸಿಡಿದು ತನ್ನ ಹೃದಯದ ಕಣ್ಣುಗಳನ್ನು ಕುರುಡುಗೊಳಿಸಿದಂತಾಗಿರಲಿಲ್ಲವೆ! ಅಂತಹ ಮಾತನ್ನು ಅವರು ಆಡಬಹುದೆಂದು ಯೋಚಿಸದೆ ಹಾಗೆ ಆಡಿ ದೊಡ್ಡ ಬರೆಯೆಳೆದಂತಾಗಿತ್ತು ತನ್ನ ಹೃದಯಕ್ಕೆ. ಈಗ ತಾನು ಜೀವಿಸಿಯಾದರೂ ಫಲವೇನು? ಇನ್ನು ತಾನು ಹೇಗೆತಾನೆ ಮುಖ ತೋರಿಸುವುದು, ಬದುಕು ತನಗೆ ಯಾಕೆಂದು ಅನ್ನಿಸಿತು. ಜೀವ ಕಳೆದುಕೊಳ್ಳುವುದೆ ಸರಿಯೆಂದು ನೋವು ಹೇಳಿತು. ಮೆಲ್ಲನೆ ನೋವು ಹೆಚ್ಚಾಗಿ ಹೃದಯದ ಕಳವಳವೂ ಏರಿತು. ಹೊಟ್ಟೆಯ ಸಂಕಟವೂ ಹೆಚ್ಚಿತು. ವೇದನೆ ಹೆಚ್ಚಿದಂತೆ ಕಣ್ಣಿನಲ್ಲಿ ನೀರಿಳಿಯಲು ಆರಂಭವಾಯಿತು. ಹಾಸಿಗೆಯ ದಿಂಬಿನ ಮೇಲೆ ಹಾಗೆಯೆ ಒರಗಿಕೊಂಡಳು. ನಿದ್ರೆ ಬಾರದು, ಹಾಗೆ ಹೀಗೆ ಹೊರಳಾಟ ಅಷ್ಟೆ!

ಬೆಳಿಗ್ಗೆಯ ವೇಳೆಗೆ ಶಾಂತಳಿಗೆ ಜ್ವರ ಬಂದಂತಾಗಿತ್ತು. ತಲೆ ದಿಂಬಿನಿಂದ ಕೆಳಕ್ಕೆ ಜೋಲಿಕೊಂಡಿತ್ತು. ಜ್ಞಾನ ತಪ್ಪಿದವಳಂತೆ, ಮಂಪರು ಬಂದವಳಂತೆ ಶಾಂತ ಬಿದ್ದುಕೊಂಡಿದ್ದಳು. ರಾತ್ರಿಯೆಲ್ಲ ನೋವು ಹಿಂಡಿಹಾಕಿ ಸುಸ್ತು

ಮಾಡಿತ್ತು. ಈ ದಿನಗಳ ಕೊರಗಿನಿಂದಲೆ ಅವಳ ಜೀವ ತೇದಿತ್ತು. ಈಗ ಈ ನೋವನ್ನು ಪೂರ್ತಿ ತಡೆದುಕೊಳ್ಳಲು ಅವಳಿಂದ ಆಗಿರಲಿಲ್ಲ. ಹೀಗಾಗಿ ಸುಸ್ತಿನಿಂದ ಮಂಪರ ಬಂದುಬಿಟ್ಟಿತ್ತು. ಹೊದಿಕೆ ಕೂಡ ಹೊದ್ದುಕೊಂಡಿರಲಿಲ್ಲ.

ಬೆಳಿಗ್ಗೆ ಆರೂವರೆ ಗಂಟೆಗೆ ರಾಜಣ್ಣ ಬಂದಾಗ ಶಾಂತ ಹಾಗೆಯೆ ಮಲಗಿದ್ದಳು. ಲೀಲಾ ಎದ್ದು ಹೋಗಿ ಬಾಗಿಲನ್ನು ತೆರೆದಳು. ರಾಜಣ್ಣನಿಗೆ ಲೀಲಳ ನಿದ್ರೆಯಿಲ್ಲದ ಮುಖ ನೋಡಿ ಮನಸ್ಸು ಕುಗ್ಗಿತು. ಕಣ್ಣುಗಳು ನಿದ್ರೆ ಇಲ್ಲದೆ ಕೆಂಪಾಗಿದ್ದವು, ಕಾಂತಿಹೀನವಾಗಿದ್ದವು. ಮುಖದಲ್ಲಿ ಗಾಬರಿಯೂ ಅವನು ಬಂದನಲ್ಲ ಎಂದು ಸಮಾಧಾನವೂ ಕಾಣಿಸಿಕೊಂಡವು. ಬಾಯಿಂದ ತಾನೆತಾನಾಗಿ ಅವಳು " ಸದ್ಯ, ನೀವು ಬಂದಿರಲ್ಲ " ಎಂದುಬಿಟ್ಟಳು. ಮನಸ್ಸಿನ ಆತಂಕ ತಗ್ಗಿದ ಆ ಮಾತು ಅವನಿಗೆ ಬೇರೇನೋ ಅರ್ಥ ಕೊಟ್ಟಿತು. ಆಗೇನೂ ಮಾತಾಡಲು ಅವಕಾಶವಿರಲಿಲ್ಲ. ನೇರ ತನ್ನ ಕೋಣೆಗೆ ನಡೆದರೆ, ಅಲ್ಲಿ ಶಾಂತ ಮಲಗಿರುವುದನ್ನು ನೋಡಿದ. ಲೀಲಾ ಆ ಕಡೆ ನೋಡಿ ಒಮ್ಮೆ ಛಳಿ ಬಂದವಳಂತೆ ನಡುಗಿದಳು. ರಾಜಣ್ಣ ಲೀಲಳ ಮೊದಲ ಮಾತಿಗೂ ಇದಕ್ಕೂ ಸಂಬಂಧವನ್ನು ಮನಸ್ಸಿನಲ್ಲಿಯೆ ಕಲ್ಪಿಸಿಕೊಂಡ. ಅವನ ಕಾಲಿನ ಬೂಟ್ಸಿನ ಸದ್ದಿಗೆ ಶಾಂತಳಿಗೆ ಮಂಪರದಿಂದ ಎಚ್ಚರವಾಯಿತು. ನರಳುತ್ತ ಎದ್ದು ಕುಳಿತು ಕೊಳ್ಳಲು ಯತ್ನಿಸಿದಳು. ಆದರೆ ಮುಖ ಕೆದರಿತ್ತು, ಕತ್ತು ನೋಯುತ್ತಿತ್ತು, ಹೊಟ್ಟೆಯಲ್ಲಿ ಸಂಕಟ ಉಕ್ಕಿತು. ಸುಸ್ತಿನಿಂದ ಅವಳಿಗೆ ಏಳಲಾಗಲಿಲ್ಲ. ಜ್ವರ ಬಂದವರಂತೆ ಕಣ್ಣು ಕೆಂಪುಹಳದಿಯಾಗಿತ್ತು. ಬಾಡಿದ ಮುಖ ಕಂಡು ರಾಜಣ್ಣನಿಗೆ ಮರುಕ ಉಕ್ಕಿಬಂತು.

" ರಾಜಣ್ಣ, ಯಾವಾಗ ಬಂದೆ ? " ಎಂದಳು ಕಷ್ಟದಿಂದ ಶಾಂತ, ಮತ್ತೆ ಏಳಲು ಪ್ರಯತ್ನಿಸಿ ಸಾಗದೆ.

" ಈಗತಾನೆ ಬಂದೆ. ಯಾಕೆ ಮೈಗೆ ಚೆನ್ನಾಗಿಲ್ಲವೆ? ಏನೂ ಏಳ ಬೇಕಾಗಿಲ್ಲ " ಎಂದು ಕುರ್ಚಿಯ ಮೇಲೆ ಕುಳಿತು ಬೂಟ್ಸನ್ನು ಬಿಚ್ಚುವುದರಲ್ಲಿ ತೊಡಗಿದ. ತೊಟ್ಟಿಲಲ್ಲಿ ಮಲಗಿದ್ದ ಅನಂತರಾಮುವನ್ನೊಮ್ಮೆ ನೋಡಿ, ಇನ್ನೂ ಎದ್ದಿಲ್ಲವೆಂದುಕೊಂಡು ಸುಮ್ಮನೆ ಕುಳಿತ.

" ಏನೂ ಇಲ್ಲ. ಏನೋ ಈವತ್ತು ಸುಸ್ತು " ಎಂದಳು ಶಾಂತ. ಹಾಗೆನ್ನು ತ್ತಿದ್ದಂತೆ ಅವಳ ಕಣ್ಣಿನಲ್ಲಿ ಮತ್ತೆ ನೀರು ಹರಿಯಲಾರಂಭಿಸಿತು. ಮೈಯೆಲ್ಲ

ನಡುಗಿತು. ಸುಸ್ತಿನಿಂದ ಒಂದು ನಿಟ್ಟುಸಿರು ಬಿಟ್ಟಳು.

ಲೀಲಾ ಒಳಗಿನಿಂದ ಕಾಫಿ ತಂದಳು. ಒಂದೇ ಲೋಟ ತಂದು ಗಂಡನಿಗೆ ಕೊಟ್ಟಳು. "ಶಾಂತಳಿಗೂ ತಂದುಕೊಡು. ಪಾಪ, ರಾತ್ರಿಯೆಲ್ಲ ನಿದ್ರೆ ಇಲ್ಲ ಅನ್ನುವ ಹಾಗೆ ಕಾಣುತ್ತೆ. ಏಳೋದಕ್ಕೆ ಕೂಡ ಆಗೊಲ್ಲ" ಎಂದು ಕಾಫಿಯ ಲೋಟವನ್ನು ಕೈಗೆತ್ತಿಕೊಂಡ.

"ತರತಿದ್ದೆ. ಆದರೆ ಶಾಂತ ಮುಖ ತೊಳೆಯದೆ ಕಾಫಿ ಕುಡಿಯೋದಿಲ್ಲ. ಅದಕ್ಕೋಸ್ಕರ ತರಲಿಲ್ಲ ಅಷ್ಟೆ" ಎಂದು ನೊಂದುಕೊಂಡು ಅಂದಳು ಲೀಲಾ.

"ಸರಿ. ಈಗ ನೋಡು, ಅವಳಿಗೆ ಏಳುವುದೆ ಕಷ್ಟವಾಗಿದೆ" ಎಂದ.

ಲೀಲಾ ಕಾಫಿ ತರಲು ಒಳಗೆ ಹೋದಳು, ಮನಸ್ಸಿನಲ್ಲಿ ಅಸಮಾಧಾನಪಟ್ಟುಕೊಂಡು. ಬರುವಾಗ ಜತೆಯಲ್ಲಿ ಸಾವಿತ್ರಮ್ಮನವರೂ ಬಂದರು.

"ರಾಜಣ್ಣ, ಹುಷಾರಾಗಿದೀಯ?" ಎಂದರು ಸಾವಿತ್ರಮ್ಮ.

"ಹೂಂ ಅಮ್ಮ. ನೋಡು, ಶಾಂತ ಹುಷಾರಾಗಿಲ್ಲ ಅಂತ ಕಾಣುತ್ತೆ. ಯಾವಾಗಿನಿಂದ ಹೀಗೆ? ನೀನು ನೋಡಿಕೊಳ್ಳಬೇಡವೆ?" ಎಂದ ರಾಜಣ್ಣ. ಶಾಂತಳ ಕಡೆ ತಿರುಗಿ "ಯಾವತ್ತು ಬಂದೆ, ಶಾಂತ? ಅಲ್ಲಿ ಭಾವ, ನಿನ್ನ ಅತ್ತೆ ಮಾವ—ಎಲ್ಲ ಸೌಖ್ಯ ತಾನೆ?" ಎಂದ.

"ಈವತ್ತಿಗೆ ಆರು ದಿನವಾಯ್ತು ನೋಡಪ್ಪ, ಅವಳು ಬಂದು. ನಿನ್ನೆ ರಾತ್ರಿ ಹೀಗೆ ಮಲಗಿಬಿಟ್ಟಳು. ನಿನ್ನೆವರೆಗೂ ರೂಮಿನಲ್ಲೆ ಸೇರಿಕೊಂಡಿರುತ್ತಿದ್ದಳು. ಏನೂ ಹೇಳತಾ ಇರಲಿಲ್ಲ. ಈಗ ಲೀಲಾ ನನಗೆ ಹೇಳಿದಾಗಲೆ ನನಗೂ ಗೊತ್ತಾದ್ದು. ಹೇಳದೆ ಇದ್ದರೆ ಅವಳ ಮೈಹುಷಾರು ನನಗೆ ಹೇಗಪ್ಪ ಗೊತ್ತಾಗಬೇಕು. ಜತೆಗೆ ಬಸುರಿ ಬೇರೆ" ಎಂದು ತಮ್ಮ ದುಃಖವನ್ನು ತೋಡಿಕೊಂಡರು ಸಾವಿತ್ರಮ್ಮ.

"ಹಾಲು ಬೇಕಾದರೆ ತಗೊಳ್ಳೆ. ಶಾಪಿಗೆ ಹೇಳಿಕಳಿಸ್ತೀನಿ, ಡಾಕ್ಟರು ಬಂದು ನೋಡಿಕೊಂಡು ಹೋಗಲಿ" ಎಂದು ಶಾಂತಳ ಕಡೆ ತಿರುಗಿದರು.

ಆದರೆ ಶಾಂತಳಿಗೆ ತಾಯಿಯ ಮುಖ ನೋಡುವುದಕ್ಕೆ ಕೂಡ ಬೇಸರ. ಅಂತೆಯೆ ಅವರ ಮಾತಿಗೆ ಉತ್ತರವನ್ನೆ ಕೊಡಲಿಲ್ಲ. ಕಷ್ಟದಿಂದ ಹಾಸಿಗೆಯ ದಿಂಬಿಗೆ ಒರಗಿಕೊಂಡು ಕುಳಿತು ಕಾಫಿ ಕುಡಿದಳು. ಸ್ವಲ್ಪ ಚೇತನ ಕೂಡಿ ಬಂದಂತಾಯಿತು. ಹಿಂದಿನ ರಾತ್ರಿಯ ಆಘಾತ ತನ್ನನ್ನು ಇಷ್ಟು ಹಿಂಡಿಹಾಕು

ವುದೆಂದು ಅವಳಂದುಕೊಂಡಿರಲಿಲ್ಲ. ಆದರೆ ಕಬ್ಬಿನ ರಸವನ್ನೆಲ್ಲ ಹೀರಿ ಸಿಪ್ಪೆ ಸಿವುಡನ್ನೆಸೆಯುವಂತೆ ರಾತ್ರಿಯ ಆತಂಕ ಅವಳ ಚೈತನ್ಯವನ್ನೆಲ್ಲ ಹಿಂಡಿಹಾಕಿ ಬಿಟ್ಟಿತ್ತು. ಈಗ ಬಿಸಿ ಕಾಫಿ ಸೇರಿದ ಮೇಲೆ ಮೈಗಷ್ಟು ಶಕ್ತಿ ಬಂದಂತಾಗಿತ್ತು. ಮೈ ಬೆಂಕಿಯಾಗಿತ್ತು. ಸುಸ್ತಿನಲ್ಲಿ ಏನೂ ಬೇಡವೆನಿಸಿಬಿಟ್ಟಿತ್ತು.

ಈ ಸಮಯದಲ್ಲಿ ಅಣ್ಣ ಅತ್ತಿಗೆ ಇಬ್ಬರೂ ಏಕಾಂತದಲ್ಲಿ ಮಾತನಾಡಿ ಕೊಳುವುದಕ್ಕಾಗಿ ಆತುರಪಡುವುದನ್ನೂ, ಆದರೆ ತನ್ನನ್ನು ಅಲ್ಲಿಂದ ಹೋಗೆಂದು ಹೇಳಲು ಒದ್ದಾಡುವುದನ್ನೂ ಶಾಂತ ಊಹಿಸಿದಳು. ಅವರು ಹಾಗೆ ಬಯಸು ವುದೂ ಸಹಜವೆ. ತಾನು ಹಾಗೆ ಅವರ ನಡುವೆ ಬರುವುದು ತಪ್ಪೆಂದುಕೊಂಡಳು. ಬೇಡಬೇಡವೆಂದರೂ ಎದ್ದು ಹೊರಕ್ಕೆ ಬಂದುಬಿಟ್ಟಳು. ಆದರೆ ಅವಳು ತಾನಾಗಿಯೆ ಹೊರಕ್ಕೆ ಬಂದುದರಿಂದ ಅವರ ಮನಸ್ಸಿಗೆ ಸಮಾಧಾನವೆ ಆಯಿತು. ಬಾಗಿಲನ್ನು ಸುಮ್ಮನೆ ಮುಂದಕ್ಕೆ ದೂಡಿದರು.

ಅಂದಿನಿಂದ ನಾಲ್ಕು ದಿನವಂತೂ ಶಾಂತಳಿಗೆ ನರಕವೆ ಆಯಿತು. ತಾನಾಗಿಯೆ ಹಜಾರಕ್ಕೆ ಬಂದುಬಿಟ್ಟಿದ್ದಳು. ಮೈ ಬೇರೆ ಬಿಗಡಾಯಿಸಿ ಕೊಂಡಿತ್ತು. ತಾಯಿಗೆ ಅವಳ ಹತ್ತಿರ ಬಂದು ಮಾತನಾಡಲು ಹೆದರಿಕೆ. ಹಾಗೂ ಹೀಗೂ ಒಂದೊಂದು ಮಾತಾಡಿದರೂ ಅದಕ್ಕೆ ಶಾಂತ ಉತ್ತರವನ್ನು ಕೊಡುತ್ತಿರಲಿಲ್ಲ. ಹಜಾರಕ್ಕೆ ಹೊರಗಿನದೆಲ್ಲ ಕಾಣುತ್ತಿತ್ತು. ಅಲ್ಲಿಯೆ ಶಾಂತ ಇರಬೇಕಾಯಿತು. ಅತ್ತಿಗೆ ಅಣ್ಣನಿಗೆ ಆ ರೂಮಾಯಿತು. ತಂದೆ ವಿಚಾರಿಸಿ ಕೊಳ್ಳಲು ಇಷ್ಟಪಟ್ಟರೂ ಅವರ ಕೆಲಸದಲ್ಲಿ ಅವರಿಗೆ ಪುರಸತ್ತು ಸಿಗುತ್ತಿರಲಿಲ್ಲ. ಇನ್ನು ಅತ್ತಿಗೆ—ಅಣ್ಣ !

೬

ನಾಲ್ಕು ದಿನದಲ್ಲಿಯೆ ಅಣ್ಣ ಅತ್ತಿಗೆ ಎಷ್ಟು ಬದಲಾಯಿಸಿಹೋದರು ಎಂದುಕೊಂಡಳು ಶಾಂತ. ಬಂದ ದಿನ ರಾಜಣ್ಣ ಎಷ್ಟೊಂದು ಆಸ್ಥೆಯಿಂದ, ಎಷ್ಟೊಂದು ಮಮತೆಯಿಂದ ತನ್ನ ಆರೋಗ್ಯದ ವಿಷಯವಾಗಿ ವಿಚಾರಿಸಿದ್ದ. ರೂಮಿನಿಂದ ಹೊರಕ್ಕೆ ಹೋದಾಗ ' ಬೇಡ ಶಾಂತ, ಮೈ ಹುಷಾರಿಲ್ಲ, ಹಜಾರ ದಲ್ಲಿ ಗಾಳಿ ತುಂಬ, ಇಲ್ಲೆ ಇರು ' ಎಂದು ಬಲವಂತಪಡಿಸಿದ. ಆದರೆ ಶಾಂತ ಹೊರಕ್ಕೆ ಬಂದುಬಿಟ್ಟಿದ್ದಳು. ಮತ್ತೆ ಮಧ್ಯಾಹ್ನ ಅಲ್ಲಿಯೆ ಹಾಸಿಗೆ ಹಾಸಿ

ಕೊಳ್ಳಲು ಹೋದಾಗ, 'ಶಾಂತ, ಮೈ ಚೆನ್ನಾಗಿಲ್ಲ ನಿನಗೆ. ರೂಮಿನಲ್ಲೆ ಮಲಗಿಕೊ' ಎಂದು ಉಪಚಾರ ಮಾಡಿದ. ತಾನು ರೈಲಿನಲ್ಲಿ ಬಂದಿದ್ದರೂ ತನಗೆ ಆಯಾಸವಾಗಿದ್ದರೂ ಅದನ್ನು ಲೆಕ್ಕಿಸದೆ ಡಾಕ್ಟರನ್ನು ಕರೆತರಲು ಶಾಪಿಗೆ ಹೋಗಿದ್ದ. ಅವರೇನೊ ಬಂದುಹೋದರು. ರಾಜಣ್ಣ ಅವರೊಂದಿಗೆ ಹೋಗಿ ಔಷಧಿ ತಂದುಕೊಟ್ಟ. ಸುಮ್ಮನೆ ಅವನಿಗೆ ತೊಂದರೆಯೆ ಹೊರತು ತನಗೆ ಆ ಔಷಧಿಯಿಂದ ಏನೂ ಪ್ರಯೋಜನವಿಲ್ಲವೆಂದು ಶಾಂತಳಿಗೆ ಗೊತ್ತಿತ್ತು.

"ಯಾಕೆ ರಾಜಣ್ಣ—ಆ ಔಷಧಿ ನನಗೆ ಬೇಕಾಗಿರಲಿಲ್ಲ. ಸುಮ್ಮನೆ ನಿನಗೆ ತೊಂದರೆ ಅಷ್ಟೆ" ಅಂದಳು ಶಾಂತ.

"ಏನು ತೊಂದರೆ ಬಿಡು, ಔಷಧಿ ತೆಗೆದುಕೊ" ಎಂದ ರಾಜಣ್ಣ.

ಊಟದ ಹೊತ್ತಿನಲ್ಲಿ ಅವಳ ಪಕ್ಕದಲ್ಲಿಯೆ ಕುಳಿತು ಊರಿನ ಸಮಾಚಾರವನ್ನೆಲ್ಲ ಕೇಳಿದ. ತನ್ನ ವಿಷಯವೆಲ್ಲ ಹೇಳಿದ. ತಂಗಿಯಲ್ಲಿ ತನ್ನ ಮಮತೆಯನ್ನು ತೋರಿಸಿದ. ಲೀಲಾ ಕೂಡ ಈ ತನಕ ಶಾಂತಳ ಆಪ್ತಳೆ ಆಗಿದ್ದಳು. ಶಾಂತಳಿಗೆ ಜತೆಯಾಗಿದ್ದಳು, ಆತ್ಮೀಯತೆ ತೋರಿಸಿದ್ದಳು. ಮಧ್ಯಾಹ್ನ ಟೀ ಕುಡಿಯುವ ಹೊತ್ತಿನಲ್ಲಿ ರೂಮಿನಲ್ಲಿ ಮಲಗಿದ್ದ ರಾಜಣ್ಣ ಹೊರಕ್ಕೆ ಬಂದು ಶಾಂತಳ ಹಾಸಿಗೆಯ ಪಕ್ಕದಲ್ಲೆ ಕುಳಿತು ಅವಳಿಗೆ ನಿದ್ರೆ ಬಂದಿತ್ತೆ ಏನು ಎಂದು ವಿಚಾರಿಸಿದ. ಟೀ ಕುಡಿಯುವಂತೆ ಅವಳಿಗೂ ಬಲವಂತ ಮಾಡಿದ. ಅವನ ಪ್ರೀತಿಯ ಬಲವಂತಕ್ಕೆ ಬಾಗಿ ಶಾಂತ ಟೀ ಕುಡಿದಳು. ಮಧ್ಯಾಹ್ನ ಕೊಂಚ ನಿದ್ರೆಯೂ ಬಂದಿತ್ತು. ಸ್ವಲ್ಪ ಆರಾಮ ಸಿಕ್ಕಿತ್ತು, ಮೈಗೆ ಮನಸ್ಸಿಗೆ ಎರಡಕ್ಕೂ. ಔಷಧಿಯನ್ನು ಬದಿಗಿಟ್ಟುಬಿಟ್ಟಿದ್ದಳು. ಆದ್ದರಿಂದ ಈಗ ಎದ್ದು ಓಡಾಡುವಷ್ಟು ಚೈತನ್ಯ ಬಂದಿತ್ತು. ಎದ್ದು ಕುಳಿತು ಅಣ್ಣನೊಂದಿಗೆ ಹರಟೆ ಕೊಚ್ಚಿದ್ದಳು. ಅವನ ಪ್ರೀತಿಯ ಆಸರೆಯೊಂದಿದ್ದುದರಿಂದ ಅವಳಿಗೆ ಒಂದು ಬಗೆಯ ಸಮಾಧಾನವಾಯಿತು. ಮನಸ್ಸಿನ ಬೇಗುದಿ ಕೊಂಚ ತಂಪಾಯಿತು.

ಆದರೆ ಸಂಜೆ ರಾಜಣ್ಣ ಲೀಲಳನ್ನೂ ಮಗುವನ್ನೂ ಕರೆದುಕೊಂಡು ಸಿನಿಮಾಕ್ಕೆ ಹೋಗಿಬಂದ. ಅವನು ಹೋಗುವಾಗಲೇನೊ ಸೌಜನ್ಯಕ್ಕೆ ಉಪಚಾರಕ್ಕೆ "ನೀನೂ ಬರುತ್ತೀಯಾ?" ಎಂದು ಕೇಳಿದ್ದ. ಆದರೆ ಶಾಂತ ಬರುವುದಿಲ್ಲವೆಂದೂ ಅವನಿಗೆ ಗೊತ್ತಿತ್ತು. ರಾತ್ರಿ ಅವರು ಸಿನಿಮಾದಿಂದ ಬಂದಾಗ ಶಾಂತಳೆ ಬಾಗಿಲು ತೆರೆದಳು. ರಾಮಸ್ವಾಮಿಯವರಿಗೆ ಯಾವುದೊ ಊಟಕ್ಕೆ

ಆಹ್ವಾನ ಬಂದಿದ್ದುದರಿಂದ ಅವರಿನ್ನೂ ಮನೆಗೆ ಬಂದಿರಲಿಲ್ಲ. ಸಾವಿತ್ರಮ್ಮ ನವರು ಮಲಗಿಕೊಂಡಿದ್ದರು. ಶಾಂತ ಬಾಗಿಲು ತೆರೆದೊಡನೆಯೆ "ಸಿನಿಮಾ ಚೆನ್ನಾಗಿತ್ತೆ, ರಾಜಣ್ಣ?" ಎಂದಳು. ರಾಜಣ್ಣ ಅಸಡ್ಡೆಯಿಂದ ಒಮ್ಮೆ "ಹೂಂ" ಎಂದುಬಿಟ್ಟು ರೂಮಿಗೆ ಹೊರಟುಹೋದ. ಲೀಲಾ ಕೂಡ ಮಗುವ ನ್ನೆತ್ತಿಕೊಂಡು ಸರಬರನೆ ರೂಮಿನೊಳಕ್ಕೆ ಹೊರಟುಹೋದಳು. ನಿಧಾನವಾಗಿ ನಡೆದರೆ ಇನ್ನೆಲ್ಲಿ ತನ್ನನ್ನು ಶಾಂತ ಮಾತನಾಡಿಸಿಬಿಡುವಳೊ, ಆಗ ತಾನೂ ಮಾತನಾಡಿನಬೇಕಾಗುತ್ತದೆ; ಅದನ್ನು ಹೇಗಾದರೂ ತಪ್ಪಿಸಿಕೊಳ್ಳಬೇಕೆನ್ನು ವಂತೆ ಲೀಲಾ ಅವಸರವಸರವಾಗಿ ರೂಮಿನೊಳಕ್ಕೆ ಸೇರಿಬಿಟ್ಟಿದ್ದಳು. ಶಾಂತಳಿಗೆ ಆಗ ಹೆಚ್ಚು ಮಾತು ಬೇಕಾಗಿಯೂ ಇರಲಿಲ್ಲ. ಅಲ್ಲದೆ ಅವರು ಸಿನಿಮಾದಿಂದ ಬಂದಿದಾರೆ, ಸುಸ್ತಾಗಿದಾರೆ ಎಂದುಕೊಂಡು ಬಂದು ಮಲಗಿಬಿಟ್ಟಳು. ಆದರೂ ರೂಮಿನಲ್ಲಿ ಅವರು ಗುಸಗುಸವೆಂದು ಮಾತಾಡಿಕೊಂಡುದರಲ್ಲಿ ಒಂದೆರಡು ಸಾರಿ ತನ್ನ ಹೆಸರು ಬಂತೆಂದು ಶಾಂತಳಿಗೆ ಅನ್ನಿಸಿತು. ಆದರೆ ಯಾವ ರೀತಿಯ ಶಂಕೆಯೂ ಇಲ್ಲದೆ ಮೆಲ್ಲನೆ ನಿದ್ರೆಹೋದಳು.

ಮರುದಿನ ಬೆಳಿಗ್ಗೆ ಯಾಕೋ ರಾಜಣ್ಣ ತನ್ನ ಬಗ್ಗೆ ತಣ್ಣಗಾದನೆಂದು ಅವಳಿಗೆ ಅನಿಸಿತು. ಅವನ ಆಸಕ್ತಿ ಯಾಕೋ ಇಳಿಯಿತೆಂದು ತೋರಿತು. ನೇರವಾಗಿ ಹೀಗೆಯೆ ಎಂದು ಹೇಳಲಾಗದಿದ್ದರೂ ಕೊಂಚ ಸೂಕ್ಷ್ಮ ಬದಲಾವಣೆ ಅವಳಿಗೆ ಕಾಣಿಸಿತು. ಅಣ್ಣ ನಮ್ಮವನಾದಾಗಲೆ ಅತ್ತಿಗೆ ನಮ್ಮವಳಾಗುವುದು ಕಷ್ಟ. ಅಣ್ಣನೆ ನಮ್ಮವನಲ್ಲದಿದ್ದರೆ ಅತ್ತಿಗೆಯ ವಿಷಯ ಹೇಳಬೇಕಾಗಿಯೆ ಇಲ್ಲ. ಲೀಲಳಲ್ಲಿ ಬದಲಾವಣೆ ದೊಡ್ಡದಾಗಿ ಎದ್ದುಕಾಣುತ್ತಿತ್ತು. ಬೆಳಿಗ್ಗೆ ಎದ್ದವನು ರೂಮಿನಿಂದ ಕಣ್ಣು ಹೊಸಕಿಕೊಳ್ಳುತ್ತ ಹೊರಕ್ಕೆ ಬಂದ ರಾಜಣ್ಣ ಶಾಂತಳ ಕಡೆ ಕೂಡ ನೋಡದೆ ಹಾಗೆಯೆ ಒಳಕ್ಕೆ ಹೊರಟುಹೋದ. ರಾತ್ರಿ ಯೆಲ್ಲ ಆ ದೊಡ್ಡ ಹಜಾರದಲ್ಲಿ ಮಲಗಿದ ಶಾಂತಳಿಗೆ ಅಲ್ಲಿನ ಥಂಡಿ ಗಾಳಿ ತಾಕಿತ್ತು. ಹಿಂದಿನ ರಾತ್ರಿಯ ಜ್ವರ, ಹಿಂದಿನ ದಿನದ ಸುಸ್ತು, ಮನಸ್ಸಿಗೆ ಬಂದೊದಗಿದ್ದ ಆಘಾತದ ಆತಂಕ ಇವುಗಳಿಂದ ಅವಳ ಮನಸ್ಸು ಸೋತಿತ್ತು. ಅದಕ್ಕೂ ಹೆಚ್ಚಾಗಿ ಮೈ ಸೋತಿತ್ತು. ರಾತ್ರಿ ಮಲಗಿದಾಗ ನಿದ್ರೆ ಬಂದಂತೆ ಆಯಿತು. ಆ ಹಜಾರ ವಿಶಾಲವಾಗಿತ್ತು. ಗಾಳಿ ತಣ್ಣಗೆ ಕೊರೆಯುತ್ತ ಒಳಕ್ಕೆ ನುಗ್ಗುತ್ತಲೆ ಇತ್ತು. ಮೊದಲು ನಿದ್ರೆ ಬಂದರೂ ರಾತ್ರಿ ಇದ್ದಕ್ಕಿದ್ದಂತೆ ಗಾಳಿಯ

ಕೊರೆತಕ್ಕೆ ಶಾಂತಳಿಗೆ ಎಚ್ಚರವಾಗಿ ಹೋಯಿತು. ಎಷ್ಟೇ ಪ್ರಯತ್ನಿಸಿದರೂ ಮತ್ತೆ ನಿದ್ರೆ ಬರಲಿಲ್ಲ. ಕಣ್ಣು ಮುಚ್ಚಿದಾಗಲೆಲ್ಲ ಅದೇ ಹಜಾರದಲ್ಲಿ ಶಂಕರಮ್ಮನವರು ನಿಂತ ಸಿಲುವಿನ ರೀತಿ ನೆನಪಾಗುತ್ತಿತ್ತು. ತಕ್ಷಣವೆ ಹುತ್ತದೊಳಗಿನಿಂದ ಎದ್ದ ಹಾವಿನಂತೆ ಆ ಮಾತುಗಳು ಆಳದಿಂದ ಪ್ರತಿಧ್ವನಿತವಾಗಲು ಆರಂಭವಾಯಿತು : ' ಗಂಡ ಬಿಟ್ಟವಳು ' ಎಂದು ತನ್ನನ್ನು ಶಂಕರಮ್ಮ ಅಂದುದು ಆಗ ಅವರ ಮುಖದಲ್ಲಿದ್ದ ಉನ್ಮಾದೋಲ್ಲಾಸ ಈಗ ಪಿಶಾಚಿಯ ರೂಪ ತಾಳಿದಂತಾಗಿ, ಭೂತಾಕಾರ ತಳೆದು ಶಾಂತಳನ್ನು ಗೋಳುಗುಟ್ಟಿತು. ಈಗ—ಇದಕ್ಕೂ ಮಿಗಿಲಾಗಿ—ತಾಯಿಯ ಆ ಮಾತು ' ಏನೋ ಯಾರಿಗೆ ಗೊತ್ತು.' ಅದು ಎದ್ದೆದ್ದು ಬಂದು ಸಿಡಿಗುಂಡಿನಂತೆ ಮನಸ್ಸಿನ ಕಿವಿಯಲ್ಲಿ ಸಿಡಿಯುತ್ತಿತ್ತು. ಶಾಂತ ಬಿಗಿಯಾಗಿ ಹೊದ್ದುಕೊಂಡು ಮಲಗಿದಳು. ಆದರೆ ಮೈ ಹಿತವಾಗಿ ಬೆಚ್ಚಗಾದರೂ, ಮನಸ್ಸಿನ ಕಾವು ಮಿತಿಮೀರಿದ್ದರಿಂದ ಮೈಗೂ ಚಳಿಯಾಗುವುದು ನಿಲ್ಲಲೆ ಇಲ್ಲ. ಎಷ್ಟೆಷ್ಟು ಪ್ರಯತ್ನಿಸಿದರೂ ನಿದ್ರೆ ಬಾರಲೆ ಇಲ್ಲ. ಹೀಗಾಗಿ ಬೆಳಗಾಗುವ ವೇಳೆಗೆ ಶಾಂತಳಿಗೆ ಮತ್ತೊಮ್ಮೆ ಸುಸ್ತಾಗಿತ್ತು. ಅಲ್ಲದೆ ಬಸುರಿ ಬೇರೆ! ಒಂದು ಒಂದೂವರೆ ತಿಂಗಳಾಗಿದ್ದಾಗಲೆ ಅವಳಿಗೆ ವಾಕರಿಕೆ, ವಾಂತಿ, ಸಂಕಟಗಳು ಆರಂಭವಾಗಿದ್ದವು. ಆಗ ಅತ್ತೆಯವರು ಅವಳಿಗಾಗಿ ಬಹಳ ಒದ್ದಾಡಿದರು. ಆದರೆ ಅದೆಲ್ಲ ಬೇಗನೆ ಕಳೆದುಹೋಯಿತು. ಎರಡು ತಿಂಗಳಾಗುವ ವೇಳೆಗೆ ಈ ವಾಕರಿಕೆ, ವಾಂತಿ, ಹೊಟ್ಟೆಯೊಳಗಿನ ಉಲ್ಬಣ, ಸಂಕಟ, ಕಲಕಾಟಗಳೆಲ್ಲ ನಿಂತುಹೋಗಿದ್ದುವು. ಆದರೆ ಈವತ್ತು ಶಾಂತಳಿಗೆ ಮತ್ತೆ ವಾಕರಿಕೆ ಆರಂಭವಾಗಿತ್ತು. ನಿದ್ರೆಯಿಲ್ಲದುದರಿಂದ ಪಿತ್ತ ಕೆರಳಿತೆಂದು ಮನಸ್ಸಿಗೆ ತನ್ನಷ್ಟಕ್ಕೆ ತಾನೆ ಸಮಾಧಾನ ಹೇಳಿಕೊಳ್ಳಲು ಪ್ರಯತ್ನಿಸಿದಳು. ಆದರೆ ಅದಲ್ಲವೆಂದು ಅವಳಿಗೂ ಗೊತ್ತು. ಇದ್ದಕ್ಕಿದ್ದಂತೆ ಶಾಂತಳಿಗೆ ವಾಂತಿಗೆ ಬಂತು. ಹಾಸಿಗೆಯಿಂದ ಎದ್ದು ಬಚ್ಚಲುಮನೆಗೆ ಹೋಗುವಷ್ಟು ವ್ಯವಧಾನ ಇರಲಿಲ್ಲ. ವಾಂತಿ ಗಂಟಲನ್ನು ಭೇದಿಸಿಕೊಂಡು ಗಳಕ್ಕನೆ ಮೂಗು ಬಾಯಿನಿಂದ ಹೊರಬಿತ್ತು. ಅದರ ರಭಸಕ್ಕೆ, ಖಾರಕ್ಕೆ ಕಣ್ಣಿನಿಂದ ನೀರು ಹರಿಯಿತು. ನಿದ್ರೆಯಿಲ್ಲದೆ ಸಣ್ಣಗಾದ ಮುಖ ನೋವಿನಲ್ಲಿ ಇನ್ನೂ ಸಣ್ಣದಾಯಿತು. ಹೊಟ್ಟೆಯಲ್ಲಿ ಕಲಕಾಟ ಜೋರಾಯಿತು. ಸುಸ್ತು, ಸಂಕಟ ಹೆಚ್ಚಿತು. ಆಗ ಅವಳ ಈ ಅವಸ್ಥೆಯಲ್ಲೂ ಶಾಂತಳಿಗೆ ಮನಸ್ಸಿನ ಹಟವಿದ್ದೇ ಇತ್ತು. ಯಾರನ್ನೂ

ಸಹಾಯಕ್ಕೆ ಕರೆಯಬಾರದೆನ್ನುವ ಛಲವಿತ್ತು. ಅಲ್ಲದೆ ಕರೆದರೂ ತಾಯಿಯನ್ನು ಕರೆಯಬೇಕು. ಆಗ ತಾಯಿ ಎದ್ದು ಬಚ್ಚಲುಮನೆಯ ಒಲೆ ಉರಿ ಸರಿಮಾಡಲು ಹೋಗಿದ್ದರು. ಬೆಳಗಾಗಲು ಇನ್ನೂ ಸ್ವಲ್ಪ ಹೊತ್ತಿತ್ತು. ತಾಯಿ ಎದ್ದಿದ್ದರೂ ಅವರನ್ನು ಕರೆಯಬಾರದೆಂದು ಶಾಂತಳ ಹಟ ಹೇಳಿತು. ಆದರೆ ಸಂಕಟ ಬಂದಾಗ ಮೊದಲು ತಾಯಿಯ ಹೆಸರೇ ಬಾಯಿಗೆ ಬರುವುದು. ವಾಂತಿ ಆಗುತ್ತಿದ್ದಂತೆ ಕೋಚ ಚೇತರಿಸಿಕೊಂಡು 'ಅಮ್ಮ' ಎಂದು ಶಾಂತ ನರಳಿದಳು. ತಕ್ಷಣವೆ ಸಾವಿತ್ರಮ್ಮ ಒಳಗಿನಿಂದ ಓಡಿಬಂದರು. ಮಗಳು ಪಡುತ್ತಿರುವ ಅವಸ್ಥೆ ಕಂಡು ಅವರ ಕರುಳು ಹಿಂಡಿತು. ತಾವು ಅಂದಿದ್ದ ಮಾತು, ಅದಕ್ಕಾಗಿ ಶಾಂತ ತಮ್ಮ ಮೇಲೆ ಹಾಕಿದ್ದ ಬಹಿಷ್ಕಾರವೆಲ್ಲ ಆಗ ಮರೆಯಿತು. ಬಂದವರೇ "ಏನಾಗುತ್ತೆಯೆ ಶಾಂತ, ಏನಾಗುತ್ತೆ" ಎಂದು ಗಾಬರಿಪಟ್ಟು ಅವಳನ್ನು ಹಿಡಿದುಕೊಂಡರು. ನಿಧಾನವಾಗಿ ಅವಳನ್ನು ಬಚ್ಚಲುಮನೆಗೆ ಕರೆದೊಯ್ದರು. ತಾವೇ ಹಂಡೆಯಿಂದ ಬಿಸಿನೀರು ತೆಗೆದುಕೊಟ್ಟರು. ಬೆನ್ನು ನೀವುತ್ತ ನಿಂತು ಕೊಂಡರು. ತಾಯಿಯ ಮಮತೆ ಕಂಡು ಶಾಂತಳಿಗೆ ಹೃದಯ ಮತ್ತೆ ಕರಗಿತು. ಏನೂ ಅರಿಯದವರು ನನ್ನ ತಾಯಿ. ತಿಳಿಯದೆ ಬಾಯಿಗೆ ಬಂದಂತೆ ಆಡಿಬಿಡು ತ್ತಾರೆ. ಅದನ್ನು ತಾನು ಹಾಗೆ ವಿಪರೀತವಾಗಿ ಭಾವಿಸಿಕೊಂಡುದು ತನ್ನ ತಪ್ಪೇ ವಿನಹ ತಾಯಿಯದಲ್ಲವೆಂದು ಶಾಂತಳಿಗೆ ಅನಿಸಿತು. ತಾಯಿಯಲ್ಲಿ ಮತ್ತೆ ಪ್ರೀತಿ ಮೂಡಿಬಂತು. ತಾಯಿ ಬೆನ್ನ ಮೇಲೆ ಸವರುತ್ತಿದ್ದುದು ಬಹಳ ಹಿತವಾಗಿತ್ತು. ಅದೇ ರೀತಿ ಅತ್ತೆಯ ಮನೆಯಲ್ಲಿ ಮೊದಲನೆಯ ಬಾರಿ ವಾಂತಿ ಯಾದಾಗ ತನ್ನ ಬೆನ್ನನ್ನು ತನ್ನ ಯಜಮಾನರು ಹಾಗೆಯೆ ಸವರಿದ್ದುದು ನೆನಪಾಗಿ ಮತ್ತೆ ನೋವು ಹೃದಯವನ್ನು ಹಿಂಡಿತು. ತಾಯಿಯ ಕೈಸವರಿನಲ್ಲಿ ಹಿತವಿತ್ತು—ನೋವೂ ಇತ್ತು. ತಣ್ಣೀರಿನ ಸೋನೆ ಮುಖದ ಮೇಲೆರಚಿದಂತೆ! ಬಿಸಿ ನೀರಿನ ಚೆಂಬನ್ನೆತ್ತಿಕೊಳ್ಳಲು ಕೂಡ ಶಾಂತಳಿಗೆ ತ್ರಾಣವಿರಲಿಲ್ಲ. ನಿಧಾನವಾಗಿ ಸಾವಿತ್ರಮ್ಮನವರೆ ಅವಳ ಕೈಗೆ ನೀರು ಹಾಕಿದರು. ಶಾಂತ ಬಲು ಕಷ್ಟದಿಂದ ಬಾಯಿ, ಮೂಗು ಮುಖವನ್ನೆಲ್ಲ ತೊಳೆದುಕೊಂಡಳು. ದೇವರ ದಯದಿಂದ ಸೀರೆ ರವಕೆಯ ಮೇಲೇನೂ ಬಿದ್ದಿರಲಿಲ್ಲ. ಅವಳು ಕೈಕಾಲು ತೊಳೆದುಕೊಂಡ ಮೇಲೆ ಸಾವಿತ್ರಮ್ಮನವರೇ ಅವಳನ್ನು ತಮ್ಮ ಮೈಗೆ ಆನಿಸಿಕೊಂಡು ನಿಧಾನ ವಾಗಿ ನಡೆಸಿಕೊಂಡು ಬಂದರು. ಮೊದಲು ಅವಳನ್ನು ಒಂದು ಪಕ್ಕದಲ್ಲಿ

ಕೂಡಿಸಿ, ಅವಳ ಹಾಸಿಗೆಯನ್ನು ಬೇರೆ ಪಕ್ಕಕ್ಕೆ—ಆ ವಾಂತಿಯ ಕಶ್ಮಲವು ಇದ್ದ ಕಡೆಯಿಂದ ಆ ಕಡೆಗೆ ಎಳೆದರು. ವಾಂತಿ ಮಾಡುವ ಮೊದಲು ಶಾಂತ ಹಾಸಿಗೆಯಿಂದ ಸ್ವಲ್ಪ ಈಚೆಗೆ ಕುಳಿತುದರಿಂದ ಹಾಸಿಗೆಗೆ ಅದು ತಾಕಿರಲಿಲ್ಲ. ಹಾಸಿಗೆಯನ್ನು ಬೇರೆ ಎಳೆದು ಅಲ್ಲಿಗೆ ಕರೆದುಕೊಂಡುಹೋಗಿ ಶಾಂತಳನ್ನು ಮಲಗಿಸಿದರು. " ಈಗ ಹೇಗಿದೆಯೇ ಶಾಂತ—ಕೊಂಚ ವಾಸಿಯೆ ? " ಎಂದು ಕಾತರದಿಂದ ಕೇಳಿದರು.

" ಹೂಂ—ಕೊಂಚ ವಾಸಿ " ಸುಸ್ತಿನ ದನಿಯಲ್ಲಿ ಶಾಂತ ಹೇಳಿದಳು.

" ಹೊಟ್ಟೆಯಲ್ಲಿನ್ನೂ ಬ ಳ ಬ ಳ ಅಂತಿದೆಯೇನೆ ? ಇಲ್ಲ, ಕೊಂಚ ವಾಸಿಯೊ ? " ಎಂದರು ಸಾವಿತ್ರಮ್ಮ ಮತ್ತೆ ಕಳವಳದ ದನಿಯಲ್ಲಿ.

" ಏನೂ ಇಲ್ಲ " ಕಷ್ಟದಿಂದ ಉಸಿರೆಳೆಯುತ್ತ ಶಾಂತ ಉತ್ತರಿಸಿದಳು.

" ಹಾಗೆಯೆ ಸುಧಾರಿಸಿಕೊ, ಬಂದೆ " ಎಂದು ಸಾವಿತ್ರಮ್ಮ ಒಳಕ್ಕೆ ಹೋಗಿ ಒಂದು ಸಣ್ಣ ಗಾಜಿನ ತಟ್ಟೆ ತಂದರು. ಅದನ್ನು ಅವಳ ದಿಂಬಿನ ಪಕ್ಕದಲ್ಲಿಟ್ಟು " ನೋಡು, ವಾಂತಿ ಬಂದರೆ—ಇಲ್ಲಿ ತಟ್ಟೆ ಇದೆ. ಹಾಗೆಯೆ ಕೊಂಚ ಹೊತ್ತು ಮಲಗಿಕೊ. ಮಗ್ಗುಲಾಗಬೇಡ, ಎಲ್ಲಿ—ತಾಳು, ನಾನೇ ಹೊದಿಸತೀನಿ " ಎಂದು ರಗ್ಗನ್ನು ಹೊದಿಸಿದರು. ಹಾಗೆಯೆ ಹಣೆಯ ಮೇಲೆ ಕೈ ಇಟ್ಟು " ಹೂಂ ! ತುಂಬಾ ಸುಡುತ್ತೆ " ಎಂದು ಗೊಣಗಿದರು. ಮೈತುಂಬ ಚೆನ್ನಾಗಿ ಹೊದಿಸಿದರು. ದಿಂಬನ್ನು ಸರಿಮಾಡಿ " ದಿಂಬಿನ ಎತ್ತರ ಸಾಕೊ, ಇನ್ನೊಂದು ದಿಂಬು ತಂದುಕೊಡಲೊ ? " ಎಂದರು. ಬೇಡವೆಂದು ಶಾಂತ ಹೇಳಲು ' ಸದ್ಯ, ಬೇಗ ಹುಷಾರಾದರೆ ಸಾಕಪ್ಪಾ ದೇವರೆ ' ಎಂದುಕೊಂಡರು. ಮತ್ತೊಮ್ಮೆ ಅವಳ ಮುಖ ನೋಡಿ, ಹಣೆ ಮುಟ್ಟಿ ನೋಡಿ " ತುಂಬಾ ಸುಡುತ್ತಾ ಇದೆ. ರಾತ್ರಿಯೆಲ್ಲ ನಿದ್ರೆ ಬೇರೆ ಕೆಟ್ಟಿದೀಯ. ಹೋಗಲಿ, ಸುಸ್ತು ಮಾಡಿಕೋಬೇಡ. ನಿರ್ಯೋಚನೆಯಾಗಿ ಮಲಗಿಕೊ. ನಾನೂ ದೇವರಿಗೊಂದು ತುಪ್ಪದ ದೀಪ ಹಚ್ಚಿಟ್ಟು, ಕಾಫಿ ತರತೀನಿ. ಬಿಸಿ ಬಿಸಿ ಕಾಫಿ ಕುಡಿದು ಮಲಗಿಕೊ. ಆಮೇಲೆ ರಾಜಣ್ಣ ಶಾಪಿಗೆ ಹೋಗಿ ಔಷಧಿ ತಂದುಕೊಡತಾನೆ " ಎಂದರು. ಮಗಳನ್ನು ಆ ಸ್ಥಿತಿಯಲ್ಲಿ ಬಿಟ್ಟು ಹೋಗಲು ಅವರಿಗೆ ಭಯ. ಆದರೂ ಹೋಗಬೇಕಾಗಿತ್ತು

ರಾಜಣ್ಣ ಎದ್ದು ರೂಮಿನಿಂದ ಹೊರಕ್ಕೆ ಬಂದಾಗ ಇಷ್ಟೆಲ್ಲ ಆಗಿ

ಹೋಗಿತ್ತು. ಶಾಂತಳ ವಾಂತಿಯನ್ನು ಸಾವಿತ್ರಮ್ಮನವರೆ ತೆಗೆದುಹಾಕಿದ್ದರು. ಅವಳಿಗೆ ಕಾಫಿ ಕುಡಿದಾಗಿತ್ತು. ಸೋತು ಮಲಗಿದ್ದ ಅವಳು ಸಂಕಟ ಪಡುತ್ತಿದ್ದಳು. ಆದರೆ ರಾಜಣ್ಣ ಅದನ್ನು ಗಮನಿಸದೆ ಹಾಗೆಯೆ ಒಳಕ್ಕೆ ಹೊರಟುಹೋದ. ಒಲೆಗೆ ಉರಿ ಹಾಕುತ್ತಿದ್ದ ಸಾವಿತ್ರಮ್ಮ ರಾಜಣ್ಣನಿಗೆ ಶಾಂತಳ ಸ್ಥಿತಿಯನ್ನು ವಿವರಿಸಿದರು : " ರಾತ್ರಿಯೆಲ್ಲ ನಿದ್ದೆ ಬಂತೊ ಇಲ್ಲವೊ. ಬೆಳಿಗ್ಗೆ ಇನ್ನೂ—ಬೆಳಗಿನ ಜಾವವಿರಬಹುದು, ಸುಸ್ತು ಸಂಕಟದಿಂದ ಕೂಗಿ ಕೊಂಡಳು. ಬಂದು ನೋಡಿದರೆ ಇಷ್ಟಗಲಕ್ಕೆ ವಾಂತಿ ಮಾಡಿಕೊಂಡಿದ್ದಾಳೆ. ಉಸಿರು ಸಿಕ್ಕಿಕೊಂಡಿದೆ. ಸದ್ಯ ನಾನು ಆ ಸಮಯಕ್ಕೆ ಬಂದದ್ದಕ್ಕಾಯಿತು. ಇಲ್ಲದಿದ್ದರೆ ಏನಾಗಿಹೋಗುತ್ತಿತ್ತೊ. ಚಳಿ ಜ್ವರ ಜೇರೆ ಬಂದುಬಿಟ್ಟಿದೆ. ದೇವರೇ ಕಾಪಾಡಬೇಕು " ಎಂದು ಸಾವಿತ್ರಮ್ಮ ರಾಜಣ್ಣನಿಗೆ ಹೇಳುತ್ತಿದ್ದುದು ಶಾಂತಳ ಕಿವಿಗೂ ಬೀಳುತ್ತಿತ್ತು. ರಾಜಣ್ಣ ಏನೂ ಅನ್ನದೆ " ಹೂಂ " ಎಂದು ಅಷ್ಟಕ್ಕೆ ಸುಮ್ಮನಾಗಿಬಿಟ್ಟ. ಸಾವಿತ್ರಮ್ಮನವರಿಗೆ ಈ ಉತ್ತರದ ಧಂಡಿ ತಾಗದಿದ್ದರೂ, ಜ್ವರದಲ್ಲಿ ಕಾದು ಸೂಕ್ಷ್ಮಗ್ರಾಹಿಯಾದ ಶಾಂತಳ ಮನಸ್ಸಿಗೆ ಇದು ತಾಕಿ ಜಲ್ಲೆನಿಸಿತು. ಅಣ್ಣನಿಂದ ಸಹಾನುಭೂತಿಯ ನಾಲ್ಕು ಮಾತು, ಆಸಕ್ತಿಗಳನ್ನು ನಿರೀಕ್ಷಿಸಿದ್ದವಳಿಗೆ ಇದ್ದಕ್ಕಿದ್ದಂತೆ ನಿರಾಶೆಯಾಯಿತು. ಇಷ್ಟೇನೆ ಎನಿಸಿಬಿಟ್ಟಿತು. ಆದರೂ ಅಣ್ಣನಿಗೆ ಮಾತಾಡಲು ಹವಣಿಲ್ಲವೊ ಏನೊ— ಹಲ್ಲುಜ್ಜುತ್ತಿರುವನೊ ಏನೊ ಎಂದು ತನ್ನನ್ನೆ ತಾನು ಮೋಸದಿಂದ ಸಮಾಧಾನಗೊಳಿಸಲು ಯತ್ನಿಸಿಕೊಂಡಳು. ಆದರೆ ಅವಳ ಮನಸ್ಸು ಈ ವಂಚನೆಯ ಸಮಾಧಾನಕ್ಕೆ ಒಪ್ಪಲಿಲ್ಲ. ಮತ್ತೆ ಶಾಂತಳಿಗೆ ತಾಯಿಯ ಮಾತು ಕೇಳಿಸಿತು : " ಅವಳ ಮೈ ಏನು ಕೆಟ್ಟಿದೆಯೊ ಏನೊ, ಬಸುರಿ ಜೇರೆ. ಅದಕ್ಕೇ ಈ ವಾಂತಿ, ವಾಕರಿಕೆ ಎಲ್ಲ. ಡಾಕ್ಟರಿಗಾದರೂ ತೋರಿಸಬೇಕು. ಅಲ್ಲಿ ಅವಳ ಅತ್ತೆಯ ಮನೆಯಲ್ಲಿ ಹೇಗೆ ನೋಡಿಕೊಳ್ಳುತ್ತಿದ್ದರೊ ? ಬರುವ ದಿನವಂತೂ ಎಷ್ಟೋ ದಿನ ಊಟವಿಲ್ಲದಿದ್ದವಳ ಹಾಗೆ ಕಂದಿಹೋಗಿದ್ದಳು. ಅತ್ತೆಯ ಮನೆಯವರನ್ನು ಏನಾದರೂ ಅನ್ನಲು ಹೋದರೆ ನಮ್ಮ ಮೇಲೆ ಹುಲಿಯ ಹಾಗೆ ಬೀಳುತ್ತಾಳೆ. ಏನೂ ಮಾತಾಡುವ ಹಾಗೆಯೆ ಇಲ್ಲ. ಅಂತೂ ಚೆನ್ನಾಗಿ ಅಂಕೆಯಲ್ಲಿಟ್ಟಿದ್ದಾರೆ ಅವರು. ಹೇಗೊ ಹೋಗಲಿ, ಅವರು ಹೇಳಿಯೆ ಬಿಟ್ಟರು. ಅವಳ ಯಜಮಾನರು ಬೇರೆ ಮನೆ ಮಾಡಿ ಅವಳನ್ನು

ಕರೆದುಕೊಂಡು ಹೋದರೆ ಕಳಿಸುವುದು, ಇಲ್ಲದಿದ್ದರೆ ಇಲ್ಲ ಅಂತ."

ಹಳೆಯ ಕತೆಯೆಲ್ಲ ತಿರುಗಿ ಆರಂಭವಾಯಿತಲ್ಲಾ ಎಂದು ಶಾಂತಳಿಗೆ ಬೇಸರವಾಯಿತು. ಆದರೆ ರಾಜಣ್ಣ ಏನು ಹೇಳುವನೊ ಎಂದು ಕುತೂಹಲ ಕೆರಳಿತ್ತು. ಆದರೆ ಅವನು ಏನೂ ಆಡಲಿಲ್ಲ. ಅದರಿಂದ ಅವನಿಗೆ ಈ ವಿಚಾರ ಬೇಕಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಆದರೆ ಸಾವಿತ್ರಮ್ಮನವರಿಗೆ ಅದು ಹೇಗೆ ತಾನೆ ಗೊತ್ತಾಗಬೇಕು. ಮಾತು ಅಲ್ಲಿಗೆ ನಿಲ್ಲಿಸಿ ಸುಮ್ಮನಾಗಿದ್ದರೆ ಆಗುತ್ತಿತ್ತು. ಆದರೆ ಗೊಣಗುವ ಸ್ವಭಾವ ಸುಮ್ಮನೆ ಬಿಡಲಿಲ್ಲ. ರಾಜಣ್ಣ ಬಾಯಿ ತೊಳೆಯು ತ್ತಿದ್ದ ಗಳಗಳ ಸದ್ದು ಕೇಳಿಸಿತು. ಸಾವಿತ್ರಮ್ಮನವರು ಮತ್ತೆ ಆರಂಭಿಸಿದರು :

"ಅಲ್ಲಿಂದ ಬಂದಷ್ಟು ದಿವಸದಿಂದ ಮನಸ್ಸಿಗೇನೊ ಹಚ್ಚಿಕೊಂಡು ಕೊರಗತಾನೆ ಇದ್ದಾಳೆ. ಸರಿಯಾಗಿ ಊಟ ಮಾಡೋದಿಲ್ಲ. ಒಂದು ಮಾತಿಲ್ಲ ಕತೆಯಿಲ್ಲ. ನಗನಗತಾ ಇರತಿದ್ದವಳು—ಈಗ ಯಾವಾಗಲೂ ಸಪ್ಪೆ ಮುಖ ಹಾಕಿಕೊಂಡಿರತಾಳೆ. ಏನಾದರೂ ಮಾತಾಡಿದರೆ ಸುಮ್ಮನೆ ಇದ್ದರೂ ಇದ್ದಳೆ —ಇಲ್ಲದಿದ್ದರೆ ಮುಖ ಸಿಂಡರಿಸಿಕೊಳ್ಳುತ್ತಾಳೆ. ಏನು ಮಾಡೋದೊ ನನಗಂತೂ ತಿಳಿಯೋದಿಲ್ಲ. ಆ ದೇವರೆ ಕಾಪಾಡಬೇಕು. ನನ್ನ ಕರುಳು ತಡೆಯೋದಿಲ್ಲ. ಬಸುರಿ ಬೇರೆ ಅವಳು. ಹಸಿ ಮೈಗೆ ಈ ಕೊರಗು ಹತ್ತಿಸಿ ಕೊಂಡರೆ ತಡೆಯುತ್ತೆಯೆ ? ಏನಾದರೂ ಅನಾಹುತ ಆದರೆ ನನಗೆ ತಾನೆ ಕೆಟ್ಟ ಹೆಸರು. ಮಗಳು ಬಸುರಿಯಾದವಳನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ ಅಂತ ನನ್ನನ್ನ ತಾನೆ ಜನ ಅಂತಾರೆ."

ರಾಜಣ್ಣ ಈಗ ಮಾತಾಡಿದ. ಅವನ ದನಿಯನ್ನು ಕೇಳಿದೊಡನೆ ಶಾಂತಳ ಹೃದಯ ನಿಂತಂತಾಯಿತು, ತಕ್ಷಣ ವೇಗವಾಗಿ ಹೊಡೆದುಕೊಳ್ಳಲು ಆರಂಭಿಸಿತು. ಇದು ತನ್ನಣ್ಣ ರಾಜಣ್ಣನೆ ಎಂದು ಅವಳಿಗೆ ಅನುಮಾನ ವಾಯಿತು. ನಿನ್ನೆಯ ದಿನ ಅಷ್ಟೊಂದು ಹಿತವಾಗಿ ಅಂತಃಕರಣದಿಂದ ಮಾತ ನಾಡಿದ ರಾಜಣ್ಣ ಈಗ ಈ ಮಾತಾಡುತ್ತಿರುವನೆಂದರೆ ನಂಬುವುದೆ ಕಷ್ಟ ವಾಗಿತ್ತು. ರಾಜಣ್ಣನ ದನಿಯಲ್ಲಿ ಯಾವ ಬಗೆಯ ಅನುಕಂಪವೂ ಇರಲಿಲ್ಲ, ಮೃದುತೆಯೂ ಕಾಣಲಿಲ್ಲ.

"ನಿನ್ನನ್ನು ಅಂತಾರೆ ಅಂತ ನಿನ್ನ ತಪ್ಪೇನು? ಇಷ್ಟಕ್ಕೂ ನಿನ್ನನ್ನ ಯಾಕೆ ಅಂತಾರೆ. ಗಂಡನ ಮನೇಲಿ ಜಗಳ ಆಡಿಕೊಂಡು ಬಾ ಅಂತ ಯಾರು

ಹೇಳಿದ್ದರು ಅವಳಿಗೆ" ಎಂದುಬಿಟ್ಟ.

"ನೋಡಪ್ಪ, ನಾನೂ ಅಷ್ಟು ದಿನದಿಂದ ಗಿಣೀನ ಕೇಳೊ ಹಾಗೆ ಕೇಳಿದೆ. ಇದ್ದಕ್ಕಿದ್ದ ಹಾಗೆ ಬಂದುಬಿಟ್ಟೆಯಲ್ಲ—ಏನು ಸಮಾಚಾರ ಅಂತ. ಸುಮ್ಮನೆ ಕೊರಗು ಹತ್ತಿಸಿಕೊಂಡು ಕೃಶವಾಗತಿದಾಳಲ್ಲ, ಅಯ್ಯೊ ಪಾಪ, ಅಂತ ಕೇಳಿದ್ದಕ್ಕೆ ನನ್ನ ಮೇಲೆ ತಿರುಗಿಬಿದ್ದಳು. ಅವಳಿಗೆ ನಾವೇ ಕೆಟ್ಟವರು. ಅತ್ತೆ ಮನೆಯ ಮಾತೆತ್ತಲೇ ಕೂಡದಂತೆ. ಏನು ಮಾಡಲಿ ಹೇಳು, ಮೊನ್ನೆಯ ದಿನ ಏನೋ ಮಾತು ಬಂತು, ಊರವರೆಲ್ಲ ಹೀಗೆ ಬಂದದ್ದಕ್ಕೆ ಆಡಿಕೋತಿದಾರೆ."

"ನನಗೆ ಗೊತ್ತು. ಲೀಲಾ ಎಲ್ಲಾ ಹೇಳಿದಳು. ಊರವರು ಆಡಿ ಕೊಳ್ಳದೆ ಇನ್ನೇನು ಮಾಡತಾರೆ, ಹೇಳು. ಧಿಡೀರಂತ ಹಾಗೆ ಬಂದು, ಯಾರ ಹತ್ತಿರವೂ ಏನೂ ಮಾತಾಡದೆ ಏನೋ ಗುಟ್ಟಿರುವ ಹಾಗೆ ಆಡಿದರೆ ಆಡಿಕೊಳ್ಳದೆ ಇನ್ನೇನು ಮಾಡತಾರೆ?" ಎಂದ ರಾಜಣ್ಣ.

ಶಾಂತಳಿಗೆ ಈ ಪೆಟ್ಟಿನಿಂದ ಹೃದಯ ಕುದಿಯಿತು. ಕಣ್ಣಿನಲ್ಲಿ ಕೆಂಪು ಕಾರಿತು. ಆದರೆ ಏಳುವಂತಿರಲಿಲ್ಲ, ಮಾತಾಡುವಂತಿರಲಿಲ್ಲ. ಅಣ್ಣ ನಿನ್ನೆ ತನ್ನ ಅಣ್ಣನಾಗಿದ್ದ, ಈಗ ತನ್ನವನಲ್ಲ ಅವನು. ಬೇರೆ ಯಾವನೊ ಬಂದು ತನ್ನ ಜೀವನವನ್ನು ಕಾದ ಕಬ್ಬಿಣದ ತುಂಡಿನಿಂದ ಬೆದಕುತ್ತಿದಾನೆ. ಬೇಗನೆ ಅವನಿಂದ ತಪ್ಪಿಸಿಕೊಳ್ಳಬೇಕು ಎಂದಷ್ಟೆ ಅವಳಿಗೆ ಅನಿಸಿತು. ಜ್ವಾಲಾಮುಖಿ ಯಾವಾಗ ಸ್ಫೋಟವಾಗುವುದೊ ಗೊತ್ತಿರಲಿಲ್ಲ. ರಾಜಣ್ಣನ ದನಿಯಲ್ಲಿ ಕಠೋರತೆ ಇಲ್ಲದಿದ್ದರೂ, ಮೃದುತೆಯೂ ಇರಲಿಲ್ಲ. ಆದರೆ ಶಾಂತಳ ಕಿವಿಗೆ ಮಾತ್ರ ಆದರಲ್ಲಿ ಕಠೋರತೆ ತುಂಬಿತ್ತು.

"ಗಂಡ ಬಿಟ್ಟವಳು ಅಂತ ಊರವರೆಲ್ಲ ಅಂದರೆ ಹೇಗೆ ತಾನೆ ಕೇಳಿ ಕೊಂಡಿರೋವಕ್ಕಾಗುತ್ತೊ. ಏನೊ ಅವಳೂ ಬಂದುಬಿಟ್ಟಳು. ಕೊರಗತಾನೆ ಇದ್ದಾಳೆ. ಈಗಂತೂ ಮೈ ಕೆಟ್ಟಿದೆ. ಹೇಗೊ ಆ ಮೈ ಸರಿಹೋದರೆ ಸಾಕು. ಆಮೇಲೆ ಅವರ ಮನೆಗೆ ಅವಳನ್ನು ಕಳಿಸಿಬಿಟ್ಟರೆ ಸಾಕು" ಎಂದರು ಸಾವಿತ್ರಮ್ಮ.

"ಏನೋಮ್ಮ, ಅವಳು ಹಾಗೆ ಬಂದದ್ದು ಸರಿಯಿಲ್ಲ ಅಂತ ನನಗೆ ಅನಿಸುತ್ತೆ. ಜಗಳ ಆಡಿಕೊಂಡು ಬಂದುಬಿಟ್ಟಳಲ್ಲ—ಈಗ ನೋಡು, ಎಲ್ಲರೂ ಅಂತಾರೆ. ಲೀಲಾ ಎಲ್ಲ ಹೇಳಿದಳು. ಈಗ ಲೀಲಾ, ನಾನು, ನೀನು—

ಯಾರೂ ಮುಖ ಎತ್ತಿಕೊಂಡು ತಿರುಗೊ ಹಾಗಿಲ್ಲ. ಯಾರ ಕರ್ಮಕ್ಕೆ ಯಾರಾರು ಅನುಭವಿಸಬೇಕು, ನೋಡು" ಎಂದ ರಾಜಣ್ಣ.

"ಏನೋಪ್ಪ, ಹೇಗಾದರೂ ಆಗಲಿ. ಅವಳ ಹತ್ತಿರ ನೀನು ಈ ಮಾತಿಗೆಲ್ಲ ಹೋಗಬೇಡ. ಮೊದಲೆ ಕೊರಗತಾ ಇದಾಳೆ. ನಾನು ನಾಲಗೆ ತಪ್ಪಿ, ಏನು ಮಾಡಿಕೊಂಡಿದಾಳೊ ಅಂದದ್ದಕ್ಕೇ ಇಷ್ಟೆಲ್ಲ ಹಗರಣವಾಯಿತು. ಅವಳಿಗೂ ಮೈಗೆ ಚೆನ್ನಾಗಿಲ್ಲ. ನೀನೆ ಆಗಲಿ, ಲೀಲಾನೆ ಆಗಲಿ, ಈ ಮಾತೆತ್ತಬೇಡಿ" ಎಂದು ಸಾವಿತ್ರಮ್ಮ ಎಚ್ಚರಿಸಿದರು.

"ಸರಿ—ನಾನು ಈ ಮಾತಾಡೋಕೆ ಹೋಗತೀನೆ? ನನಗೆ ಯಾಕೆ ಬೇಕಾಗಿದೆ ಇವೆಲ್ಲ. ಏನೊ ಎರಡು ದಿವಸ ಇಲ್ಲಿ ಹಾಯಾಗಿರೋಣ ಅಂತ ಬಂದೆ. ಲೀಲಾನೂ ಹಾಗೇ ಅಂದುಕೊಂಡಳು. ಆದರೆ ಅದು ಸಾಧ್ಯವಿಲ್ಲ, ಅಷ್ಟೆ. ಆಗಲಿ."

"ಇವತ್ತು ಔಷಧಿ ತರಬೇಕು ಅವಳಿಗೆ, ಡಾಕ್ಟರಿಗೆ ಹೇಳಬೇಕು, ಅಂತ ಕಾಣುತ್ತೆ" ಎಂದರು ಸಾವಿತ್ರಮ್ಮ.

"ನನಗೆ ಪುರಸತ್ತಿಲ್ಲ. ನಾನು ಯಾರ ಯಾರ ಮನೆಗೊ ಹೋಗಬೇಕು. ಬೇಕಾದರೆ ಗಾಡಿ ಮಾಡಿಕೊಂಡು ಅವಳು ವಾಪಿಗೆ ಹೋಗಿಬರಲಿ" ಎಂದು ರಾಜಣ್ಣ ಬಚ್ಚಲುಮನೆಯಿಂದ ಹೊರಬಿದ್ದ. ಕೈಯಲ್ಲಿದ್ದ ಟವಲಿನಿಂದ ಮುಖ ಒರಸಿಕೊಳ್ಳುತ್ತಿದ್ದವನು ಶಾಂತ ಮಲಗಿದ್ದ ಕಡೆಗೊಮ್ಮೆ ನೋಡಿದ.

ಶಾಂತ ಗೋಡೆಯ ಕಡೆ ಮುಖ ಮಾಡಿಕೊಂಡು ಮಲಗಿದ್ದಳು. ಎಚ್ಚರವಾಗಿರುವಳೊ ನಿದ್ರೆಹೋಗಿರುವಳೊ ತಿಳಿಯಲಿಲ್ಲ. ತಮ್ಮ ಮಾತುಗಳನ್ನೇನಾದರೂ ಕೇಳಿಬಿಟ್ಟಿರುವಳೊ ಏನೊ ಎಂದು ಒಂದು ಘಳಿಗೆ ಅವನಿಗೆ ಅನುಮಾನವಾಯಿತು, ಗಾಬರಿಯೂ ಆಯಿತು. ಕೇಳಿದ್ದರೆ ತಾನೆ ಏನು? ನನಗೇನು ನಷ್ಟವೆಂದು ಮತ್ತೆ ತಾನಾಗಿಯೆ ಸಮಾಧಾನ ಹೇಳಿಕೊಂಡು ಸುಮ್ಮನಾದ. ಆದರೂ ತಂಗಿಯ ಬಗ್ಗೆ ಮರುಕ ಮನಸ್ಸಿನಲ್ಲಿ ಚಿಮ್ಮಿತು. ಪಾಪ! ಎಷ್ಟು ಸಂಕಟಪಡುತ್ತಿದಾಳೊ ಎಂದು ಹೃದಯ ಮಿಡಿಯಿತು. ತನ್ನ ರೂಮಿನ ಕಡೆ ಕಾಲಿಟ್ಟಿದ್ದವನು ಶಾಂತಳ ಹಾಸಿಗೆಯ ಹತ್ತಿರಕ್ಕೆ ಬಂದ. ನಿನ್ನಿನಂತೆ ಹಾಸಿಗೆಯ ಪಕ್ಕದಲ್ಲಿ ಕುಳಿತುಕೊಳ್ಳಲಿಲ್ಲ. ನಿನ್ನೆಯ ಹಾಗೆ 'ಇಲ್ಲಿ ಮಲಗಿಕೊಂಡರೆ ಥಂಡಿ ಗಾಳಿ. ರೂಮಿನಲ್ಲಿ ಮಲಗಿಕೊ ಎಂದೂ ಹೇಳಲಿಲ್ಲ. ಹೇಳಬೇಕೆಂದೂ

ಎನಿಸಲಿಲ್ಲ. ಆದರೂ ಹಾಸಿಗೆಯ ಪಕ್ಕದಲ್ಲಿ ನಿಂತು ನೋಡಿದ. ಶಾಂತಳ ಕಣ್ಣಿನಲ್ಲಿ ನೀರು ತುಂಬಿತ್ತು. ತಾನಾಡಿದ ಮಾತೆಲ್ಲವನ್ನೂ ಅವಳು ಕೇಳಿಸಿಕೊಂಡಿದ್ದಾಳೆ, ತಾನು ಮಾತಾಡಿದುದು ತಪ್ಪು, ಎನಿಸಿತು. ತಂಗಿಯ ಅಳು ನೋಡಿ ಹೃದಯ ಮಿಡಿಯಿತು. ತಾನು ಮಾಡಿದುದು ತಪ್ಪು ಎನ್ನುವ ಭಾವನೆ ತುಂಬಿ ಪಶ್ಚಾತ್ತಾಪ ಬಂದಿತ್ತು. ತಂಗಿ ಇಷ್ಟೊಂದು ಕೊರಗುತ್ತಿದಾಳೆ. ತಾನು ಅವಳನ್ನೇ ಅಂದುಬಿಟ್ಟೆನಲ್ಲ ಎಂಬ ದುಃಖವೂ ಬಂತು. ಶಾಂತಳ ಮುಖದಲ್ಲಿ ಕಣ್ಣೀರಿನ ತೇವವಿನ್ನೂ ಇತ್ತು. ನಿಸ್ಸಹಾಯಳಾಗಿ, ಕೃಶವಾಗಿ ಮಲಗಿದ್ದ ಅವಳಲ್ಲಿ ಅವನಿಗೆ ಮತ್ತೆ ಸಹಾನುಭೂತಿ, ಮಮತೆ ಬಂದಿತು.

"ಶಾಂತ, ಹೇಗಿದೆ ಈಗ?" ಎಂದ ಮೃದುವಾಗಿ.

ರಾಜಣ್ಣ ಕಠೋರವಾಗಿ ಮಾತಾಡಿದ್ದರೆ ಅದನ್ನು ತಡೆದುಕೊಳ್ಳಲು ಶಾಂತಳಿಗೆ ಆಗುತ್ತಿತ್ತು. ಆದರೆ ಈ ಮೃದುವಾದ ಮಾತಿನಿಂದ ಅವಳ ಹೃದಯ ಬಿರಿಯಿತು. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ರಾಜಣ್ಣನಿಗೂ ಏನು ಮಾಡಬೇಕೊ ತೋಚಲಿಲ್ಲ. ಹೇಗೆ ಸಮಾಧಾನ ಹೇಳಬೇಕೊ ತಿಳಿಯಲಿಲ್ಲ. ಏನೂ ತಿಳಿಯದವನಂತೆ ತಬ್ಬಿಬ್ಬಾಗಿ ನಿಂತಿದ್ದ. ಬಿಕ್ಕಿ ಬಿಕ್ಕಿ ಅಳುತ್ತಿದ್ದ ಅವಳ ದುಃಖ ಅವನ ಹೃದಯವನ್ನು ಕಲಕಿತು. ಮೆಲ್ಲನೆ ಅವಳನ್ನು ಸಮಾಧಾನಗೊಳಿಸಲು ಯತ್ನಿಸಿದ.

"ಅಳಬೇಡ ಶಾಂತ. ಮೈ ಬೇರೆ ಚೆನ್ನಾಗಿಲ್ಲ, ಅಳಬೇಡ" ಎಂದ.

"ನಾನು ಹೇಗಿದ್ದು ಯಾರಿಗೆ ಬೇಕಾಗಿದೆ. ನಾನು ಇದ್ದರೆಷ್ಟೊ ಸತ್ತರೂ ಅಷ್ಟೆ" ಎಂದಳು ಶಾಂತ ಅಳುವಿನ ಮಧ್ಯೆ.

"ಛೂ! ಹಾಗೆಲ್ಲ ಅನ್ನಬಾರದು. ಮೈ ಹುಷಾರಾಗಿ ನೋಡಿಕೊಳ್ಳಬೇಡವೆ!" ಎಂದ ರಾಜಣ್ಣನಿಗೆ ಮುಂದೇನು ಹೇಳಬೇಕೊ ತೋಚಲಿಲ್ಲ. ತಾನು ತಾಯಿಯೊಂದಿಗೆ ಈಗ ತಾನೆ ಆಡಿಕೊಂಡ ಮಾತಿನ ವಿಚಾರವನ್ನೆತ್ತಲು ಬಾಯಿ ಬಾರದು. ಮನಸ್ಸೂ ಹಿಂದೆಗೆಯುತ್ತಿತ್ತು. ಅರ್ಧ ಮಾತಿನಲ್ಲಿ ನಿಲ್ಲಿಸಿ ಹಾಗೆಯೆ ಹೊರಟು ಹೋಗುವುದೂ ಅಸಾಧ್ಯವಾಗಿತ್ತು. ಏನು ಹೇಳಲೂ ತೋಚದೆ, ಏನು ಮಾಡಲೂ ತೋರದೆ ರಾಜಣ್ಣ ತಾಕಲಾಡಿದ. ಶಾಂತಳ ಕಣ್ಣೀರು ಒಂದೆ ಸಮನೆ ಹರಿಯುತ್ತಿತ್ತು. ರಾಜಣ್ಣನಿಗೆ ಮತ್ತೆ ಮಾತನಾಡಲು ಅದೊಂದು ಆಸರೆಯಾಯಿತು.

"ಶಾಂತ, ಸುಮ್ಮನೆ ಅತ್ತು ಅತ್ತು ಸುಸ್ತು ಮಾಡಿಕೊಳ್ಳಬೇಡ. ಮೈ ಮೊದಲೇ ಕೆಟ್ಟಿದೆ. ಈಗ ಆಯಾಸಪಡಿಸಿಬಿಟ್ಟರೆ ಬಹಳ ಕಷ್ಟ. ಗಾಡಿ ಮಾಡಿ ಕೊಂಡು ಶಾಪಿಗೆ ಹೋಗಿಬಿಟ್ಟು ಬಾ. ನಾನೇ ಹೋಗುತ್ತಿದ್ದೆ. ಆದರೆ ನನಗೆ ಬೇರೆ ಇನ್ನೇನೊ ಕೆಲಸಗಳಿವೆ. ಆದ್ದರಿಂದ ನನಗೆ ಪುರಸತ್ತಿಲ್ಲ" ಎಂದ. ತನ್ನ ತಾಯಿಯೊಂದಿಗೆ ಆಡಿದ ಮಾತಿಗೆ ಇದು ಕ್ಷಮಾಪಣೆ ಬೇಡುವಂತಿತ್ತು, ಅವನ ದನಿ. ಈಗ ಆಡಿದ ಮಾತು ಮೃದುವಾಗಿತ್ತು, ತೇಲಿಸಿ ಆಡಿದಂತಿತ್ತು. ಶಾಂತಳ ಮನಸ್ಸಿಗೆ ಹಿತವಾಗುವಂತಿತ್ತು. ಆದರೆ ಅವಳ ಮನಸ್ಸಿಗೆ ಅದು ಹಿತವಾಗಲಿಲ್ಲ. ಶಾಪಿಗೆ ಹೋಗಿ ಬಾ ಎಂದು ಅವನಂದುದರ ಹಿನ್ನೆಲೆಗೆ ತಾಯಿ ಯೊಂದಿಗೆ ಅವನಂದುದೆಲ್ಲ ನೆನಪಾಗಿ ಶಾಂತಳಿಗೆ ಮತ್ತೆ ಮನಸ್ಸು ಕಹಿ ಯಾಯಿತು. ಕಹಿ ಕಣ್ಣೀರಾಯಿತು. ರಾಜಣ್ಣನಿಗೆ ಈಗೇನು ಮಾಡಬೇಕೊ ತೋಚದಾಯಿತು. ಲೀಲಾ ಅತ್ತಾಗ ರಮಿಸಿ, ಸೋತು ಸುಮ್ಮನಾಗಿಸುತ್ತಿದ್ದ. ಅವಳು ಕೇಳಿದ ಹಟ ಪೂರೈಸುತ್ತಿದ್ದ. ಆದರೆ ತಂಗಿಯ ಕಣ್ಣೀರನ್ನು, ದುಃಖ ವನ್ನು ಹೇಗೆ ತಡೆಯಬೇಕೊ ತಿಳಿಯದಾಯಿತು. ಅವನ ಮನಸ್ಸು ಇಬ್ಬಗೆಯ ಸಂಕಟಕ್ಕೆ ಸಿಕ್ಕಿಕೊಂಡಿತ್ತು. ಈ ಸಂದಿಗ್ಧದಿಂದ ಹೇಗೆತಾನೆ ತಪ್ಪಿಸಿಕೊಳ್ಳುವುದೊ ತಿಳಿಯದೆ ಒದ್ದಾಡುತ್ತಿದ್ದ.

ಈ ಪರಿಸ್ಥಿತಿಯಿಂದ ಅವನನ್ನು ಉಳಿಸಿದವಳು ಲೀಲಾ. ರಾಜಣ್ಣ ಏಳುವ ಕೊಂಚ ಮೊದಲೆ ಎದ್ದು ಬಚ್ಚಲುಮನೆಯಲ್ಲಿ ಮುಖ ತೊಳೆದು ಅಡಿಗೆಮನೆಗೆ ಹೋಗಿದ್ದಳು ಲೀಲಾ. ಈ ತನಕ ಶಾಂತಳನ್ನು ಮಾತನಾಡಿಸುವುದಿರಲಿ, ಶಾಂತಳ ಕಡೆಗೆ ಕೂಡ ತಿರುಗಿ ನೋಡಿರಲಿಲ್ಲ. ಈಗ ಒಳಗಿನಿಂದ ಒಂದು ಲೋಟದಲ್ಲಿ ಕಾಫಿ ತೆಗೆದುಕೊಂಡು ಬಂದಳು, ಗಂಡನಿಗೆ ಕೊಡಲು. ನೇರವಾಗಿ ತನ್ನ ಗಂಡನ ಬಳಿಗೆ ಬಂದು "ಕಾಫಿ ತೆಗೆದುಕೊಳ್ಳಿ" ಎಂದಳು. ಶಾಂತಳ ಪಕ್ಕದಲ್ಲಿ ರಾಜಣ್ಣ ನಿಂತಿದ್ದುದರಿಂದ ವಿಧಿಯಿಲ್ಲದೆ ಶಾಂತಳನ್ನು ಮಾತನಾಡಿಸ ಬೇಕಾಯಿತು. ಹಾಗೆ ಮಾತನಾಡಿಸುವುದು ತನಗೆ ಬೇಕಿಲ್ಲವೆಂಬುದನ್ನು ದನಿಯಲ್ಲಿ ಸ್ಪಷ್ಟವಾಗಿಯೆ ತೋರಿಸಿದಳು. ಶಾಂತಳ ರಕ್ತ ಆ ದನಿಯಲ್ಲಿನ ಬೇಕಿಲ್ಲತನದಿಂದ ಗಡ್ಡೆಯಾಯಿತು. ರಾಜಣ್ಣ ನಿನ್ನೆಯ ದಿನ ಲೀಲಾ ಕಾಫಿ ತಂದುಕೊಟ್ಟಾಗ ಶಾಂತಳಿಗೂ ತಂದುಕೊಡುವಂತೆ ಹೇಳಿದ್ದ. ಆದರೆ ಈಗ ಅವನ ಬಾಯಿಂದ ಆ ಮಾತು ಬರಲಿಲ್ಲ. ಹೆಂಡತಿ ಕೊಟ್ಟ ಕಾಫಿಯ ಲೋಟ

ಬಿಸಿಯಾಗಿತ್ತು. ಹಾಗೆಯೆ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತು, ಅವರ ಊರುಗೈ ಮೇಲೆ ಲೋಟವನ್ನಿಟ್ಟುಕೊಂಡ. ಹೆಂಡತಿ ಬಂದೊಡನೆ ಅವನ ಮಾತಿನ ಸೊಗ ಬದಲಾಯಿತು. ಏನೊ ಒಂದು ಬಗೆಯ ಬಿಗು ಬಂದಂತಾಯಿತು. ತಾನು ದೊಡ್ಡವನು ಎಂಬುದೂ, ಅದನ್ನು ತೋರಿಸಿಕೊಳ್ಳಬೇಕೆಂಬುದೂ ಎದ್ದು ಕಾಣುತ್ತಿತ್ತು. ಈ ಸ್ವಲ್ಪ ಬದಲಾವಣೆ ಶಾಂತಳ ಕಿವಿಗೆ ಚುರುಕಾಗಿಯೆ ಬಿತ್ತು. ಅವಳಿಗೆ ಮನಸ್ಸಿನಲ್ಲಿಯೆ ನಗು ಬಂತು. ಅಣ್ಣ ಇಷ್ಟೇನೆ—ಅತ್ತಿಗೆಯ ಮುಂದೆ ಒಣಕಲು ಜಂಬ ತೋರಿಸುವಷ್ಟು ಅವಳಿಗೆ ದಾಸನೆ ಎಂದು ಅವಳ ಮನಸ್ಸಿಗೆ ಹೀನಾಯವಾಯಿತು. ತಕ್ಷಣ ತನ್ನ ಯಜಮಾನರೆಂದೂ ಹೀಗಲ್ಲ. ತಾನು ಎದುರಿಗಿರುವಾಗ ಒಂದು ರೀತಿ, ಹಿಂದಿರುವಾಗ ಇನ್ನೊಂದು ರೀತಿಯೆಂಬುದು ಅವರಲ್ಲಿರಲೇ ಇಲ್ಲ. ಯಾವಾಗಲೂ ಒಂದೇ ಸಹಜವಾದ, ಸರಳವಾದ, ನೇರ ವಾದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಯಾವಾಗಲೂ ಶಾಂತವಾಗಿ ಹೊಳೆಯುವ ಅವರ ಆ ಕಣ್ಣುಗಳ ಆಳದಲ್ಲಿ ಎಷ್ಟೊಂದು ಪ್ರೀತಿ, ನಯ ತುಂಬಿತ್ತು. ಮಾತಿಲ್ಲದಿದ್ದರೂ ಮೌನದಲ್ಲಿಯೆ ಮಾತಿಗಿಂತ ಪ್ರಭಾವ ಬೀರುವ ಅವರ ರೀತಿಯನ್ನು ಮತ್ತೆಲ್ಲೂ ಶಾಂತ ಕಂಡಿರಲಿಲ್ಲ. ತನ್ನಲ್ಲಿ ಅವರಿಗೆ ತುಂಬಾ ಪ್ರೀತಿ, ಪ್ರಾಣಕ್ಕೆ ಪ್ರಾಣ. ಆದರೆ ಆ ಪ್ರೀತಿ ಮಾತಿನ ಮಿತಿಯಲ್ಲಿ ಅಳವಾಗುವುದಲ್ಲ. ಅಂತೆಯೆ ಎಂದೂ ಅವರು ಅದನ್ನು ಆಡಿತೋರಿದವರಲ್ಲ. ಅಷ್ಟೇ ಅಲ್ಲ. ತಾವು ಯಾವುದು ಸರಿಯೆಂದುಕೊಳ್ಳುತ್ತಿದ್ದರೊ ಅದನ್ನು ಸಹಜ ವಾಗಿಯೆ ಅವಳಿಗೆ ಹೇಳಿ ಮಾಡಿಬಿಡುತ್ತಿದ್ದರು. ಅವರು ಹೇಳುವ ಸರಳ ರೀತಿಗೆ ಶಾಂತಳ ಮನಸ್ಸು ಮಾರುಹೋಗಿ ಅದೇ ಸರಿಯೆಂದು ಒಪ್ಪಿಕೊಳ್ಳು ತ್ತಿತ್ತು. ತಪ್ಪಾಗಿದ್ದರೆ ಅಷ್ಟೇ ಸಹಜವಾಗಿ, ಆ ತಪ್ಪನ್ನು ಅವರು ಒಪ್ಪಿಕೊಳ್ಳು ತ್ತಿದ್ದರು. ಇಲ್ಲದ ಹೆಡಸು, ಒಣಕಲು ಅಭಿಮಾನ, ಒಡಕು ಜಂಬಗಳು ಯಾವುವೂ ಅವರಲ್ಲಿರಲಿಲ್ಲ. ಶಾಂತಳಿಗೆ ಯಾವತ್ತೂ ಅಂತಹ ಭಾವನೆ ಬಂದಿರ ಲಿಲ್ಲ. ಅವರು ತನಗೆ ದಾಸರೆಂದಾಗಲಿ, ತಾನು ಅವರ ಸೊತ್ತೆಂದಾಗಲಿ ಅವಳಿಗೆ ಯಾವತ್ತೂ ಅನಿಸುವಂತೆ ಅವರು ನಡೆದುಕೊಂಡಿರಲಿಲ್ಲ. ಮದುವೆಯ ದಿನ ಬೆಂಕಿಯ ಸಾಕ್ಷಿಯಾಗಿ ಮಾತು ಕೊಟ್ಟಂತೆ, ಎಲ್ಲದರಲ್ಲಿಯೂ ಅವಳು ಪಾಲುಗಾತಿ ಸಮಾನ ಎನ್ನುವಂತೆ ಇತ್ತು ಅವರ ರೀತಿ, ಮಾತು. ಆದರೆ ಇಲ್ಲಿ ರಾಜಣ್ಣನ ಬಗೆ ನೋಡಿದರೆ ಲೀಲಳಿಗೆ ಅವನು ಹೆದರುವಂತಿತ್ತು. ಅವಳು

ಆಡಿಸಿದಂತೆ ಆಡುವ ತಿರುಗುಬುಗುರಿಯಾದವನು, ನಾನಾಗಿಯೇ ಹೀಗೆ ತಿರುಗುತ್ತಿದೇನೆ ಚಾಟಿಯುದೇನೂ ಇಲ್ಲವೆಂದು ಆಟ ಹೂಡಿದಂತಿತ್ತು.

"ನೋಡು ಶಾಂತ, ನಾನಾಗಲೇ ಹೇಳಿದೆನಲ್ಲ. ಸುಮ್ಮನೆ ಹೀಗೆ ಕೊರಗಿ ಕೊರಗಿ ಮೈ ಕೆಡಿಸಿಕೊಳ್ಳುವುದರಿಂದ ಪ್ರಯೋಜನವಿಲ್ಲ. ನೀನು ಮನಸ್ಸಿಗೆ ಸಮಾಧಾನ ತಂದುಕೊಳ್ಳಬೇಕು. ಆದುದೆಲ್ಲ ಆಗಿಹೋಯಿತು. ಹೋಗಲಿ, ನಾಲ್ಕು ದಿನ ಹಾಯಾಗಿ ಇಲ್ಲಿರು. ಅಣ್ಣ ಹೇಳುವಂತೆ ನಿನ್ನ ಯಜಮಾನರು ಬೇರೆ ಮನೆ ಮಾಡಿಕೊಂಡು ಹೋದಾಗ ಹೋಗು. ಅಲ್ಲಿಯ ತನಕ ನಿಶ್ಚಿಂತೆಯಾಗಿ ಇಲ್ಲಿ ಇದ್ದುಬಿಡು" ಎಂದ ರಾಜಣ್ಣ.

ಈ ವಿಚಾರವಾಗಿ ಇದೇ ಅವನು ಮೊದಲ ಬಾರಿ ಮಾತಾಡಿದ್ದುದು. ಆದರೂ 'ನಾನಾಗಲೆ ಹೇಳಿದೆನಲ್ಲ' ಎಂದು ಹೆಂಡತಿಯನ್ನು ಮೆಚ್ಚಿಸಲು ಸೇರಿಸಿದ್ದ. ಈ ಮಾತಿನ ಗತ್ತನ್ನು ಶಾಂತ ಅರ್ಥ ಮಾಡಿಕೊಂಡರೂ ಮಾತಿನ ಸರಣಿ ಅವಳಿಗೆ ಅಷ್ಟಾಗಿ ಸರಿ ಕಾಣಲಿಲ್ಲ. ಆದರೂ ಸುಮ್ಮನಿದ್ದಳು.

"ನಾನು ಹೇಳುವುದೂ ಅದೆ, ಅಂದರೆ. ಯಾರೋ ಏನೋ ಅಂದರು ಅಂತ ಸುಮ್ಮನೆ ಕೊರಗತಾ ಕೂತರೆ ಆಯಿತೆ? ಅಪವಾದಕ್ಕೇನು—ನೂರು ನಾಲಗೆಯಿಂದ ಬೇಗ ಹರಡುತ್ತೆ. ಅದಕ್ಕೆಲ್ಲ ನಾವು ಬೆಲೆ ಕೊಟ್ಟರೆ ಆಗುತ್ತೇನು" ಎಂದಳು ಲೀಲಾ.

ತನ್ನ ಅತ್ತಿಗೆಯ ಮಾತು ಎಷ್ಟು ಸುಳ್ಳೆಂಬುದು ಅವಳ ಮೊನ್ನೆಯ ನಡತೆಗೂ ಈಗಿನ ಮಾತಿಗೂ ಇದ್ದ ವ್ಯತ್ಯಾಸದಲ್ಲೆ ಶಾಂತಳಿಗೆ ಗೊತ್ತಾಯಿತು. ಸುಮ್ಮನೆ ಯಾಕೆ ಮಾತಾಡಬೇಕೆಂದು ಸುಮ್ಮನಾದಳು. ರಾಜಣ್ಣ ಹೆಂಡತಿಯ ಮಾತಿಗೆ ಪುಷ್ಟಿ ಕೊಟ್ಟು ಮಾತಾಡಿದ:

"ಇಲ್ಲಿ ಕೇಳು, ಶಾಂತ. ಜನಕ್ಕೆ ಬೇರೆ ಏನೂ ಕೆಲಸ ಇಲ್ಲ. ನೂರು ಜನ ನೂರು ರೀತಿ ಆಡಿಕೊಳ್ಳುತ್ತಾರೆ. ಅಷ್ಟೆ ಅಲ್ಲ, ಈ ಅಪವಾದಗಳು ಮೂರು ಕಾಗೆ ವಾಂತಿ ಮಾಡಿಕೊಳ್ಳುವ ಕತೆಯ ಹಾಗೆ, ಇದ್ದದ್ದು ಇಲ್ಲದ್ದೆಲ್ಲ ಸೇರಿಸಿಕೊಂಡು ಏನೇನೊ ಆಗಿಹೋಗುತ್ತೆ. ಆ ಶಂಕರಮ್ಮ ಒಂದು ಮಾತನಾಡಿದರು ಅಂತ ನೀನು ಇಷ್ಟೆಲ್ಲ ಅತ್ತು ಕೊರಗಿದರೆ ಆಯಿತು. ಮನೆ ಅಂದ ಮೇಲೆ ಮಾತೇಳುತ್ತೆ. ಸ್ವಲ್ಪ ಬಿರುಸಾಗಿ ಮಾತೆದ್ದರೆ ಜಗಳವೂ ಆಗುತ್ತೆ. ಈಗ ನೀನು ಜಗಳವಾಡಿಕೊಂಡು ಬಂದಿದೀಯ. ನಾಳೆ ಸರಿಹೋಗುತ್ತೆ, ಸಮಾಧಾನವಾಗುತ್ತೆ. ನಿನ್ನ ಗಂಡನೇ ಬಂದು ಕರೆದುಕೊಂಡು ಹೋಗತಾನೆ" ಎಂದ ರಾಜಣ್ಣ.

ತಾನು ಅವನಿಗೆ ಈ ಗುಟ್ಟನ್ನು ಹೇಳಿಬಿಟ್ಟೆನಲ್ಲಾ, ಈಗ ಶಾಂತಳಿಗೆ ಗೊತ್ತಾಗಿಹೋಯಿತಲ್ಲ ಎಂದು ಲೀಲಾ ತುಟಿ ಕಚ್ಚಿಕೊಂಡಳು. ಆ ಮಾತೆತ್ತ ದಿರಲಿ ಎಂದು ಗಂಡ ಆ ಮಾತಾಡಲು ಆರಂಭಿಸಿದಾಗ ಅವನನ್ನೆ ದುರದುರನೆ ನೋಡಿದಳು. ಆದರೆ ಅವನಿಗೆ ಅದರ ಪರವೆ ಇಲ್ಲದೆ ಹೋಯಿತು. ಈಗೇನು ಮಾಡಬೇಕೊ ತೋಚದೆ ಲೀಲಾ ಕೈಕೈ ಹಿಸುಕಿಕೊಂಡಳು. ಶಾಂತಳ ಕಡೆ ತಿರುಗಿ ಒಣ ನಗೆ ನಗಲು ಯತ್ನಿಸಿದಳು. ಅವಳ ಈ ಹುಸಿ ಯತ್ನದಿಂದ ಶಾಂತಳಿಗೆ ಅವಳ ಬಗ್ಗೆ ನಿರಾದರ ಮೂಡಲು ಕಾರಣವಾಯಿತು. ಲೀಲಾ ಬಹಳ ಪ್ರಯಾಸದಿಂದ ತನ್ನ ಮೇಲಿನಿಂದ ತಪ್ಪನ್ನು ಕಳಚಿಕೊಳ್ಳಲು ಯತ್ನಿಸಿದಳು.

"ಯಾಕೆ ನೀನು ಹಾಗೆ ಬಂದಿರಬಹುದು ಅಂತ ಅವರು ಯೋಚಿಸಿದರು? ಕೊನೆಗೆ ಎಲ್ಲೋ ಯಜಮಾನರ ಹತ್ತಿರ ಜಗಳವಾಡಿಕೊಂಡು ಬಂದಿದಾಳೆ ಅಂತ ಕಾಣುತ್ತೆ ಅಂತ ಅವರೇ ಊಹಿಸಿದರು. ನಾನೇನೊ ಹಾಗಿರಲಾರದು ಅಂತಲೆ ಹೇಳಿದೆ. ಆದರೆ ಅವರು ಅದೇ ಇರಬೇಕು ಅಂತ ತೀರ್ಮಾನಿಸಿ ಬಿಟ್ಟರು. ಅಲ್ಲದೆ ನಿಮ್ಮ ತಾಯಿ ಬೇರೆ ಹೇಳುತ್ತಿದ್ದರು, ನಿಮ್ಮತ್ತೆಯ ಮನೆಯಲ್ಲಿ ಸುಖವಿಲ್ಲ ಅಂತ. ಅದರಿಂದ—" ಅವಳ ಮಾತಿನಿಂದ ಶಾಂತಳ ಮನಸ್ಸು ಇನ್ನೂ ಖಾರವಾಯಿತು. ಅತ್ತೆಯ ಮನೆಯಲ್ಲಿ ಜಗಳವಾಡಿಕೊಂಡು ಬಂದೆನೆಂದು ಲೀಲಳಿಗೆ ತಾನು ಹೇಳಿದುದುದು ತಪ್ಪಾಯಿತೆಂದು ಈಗ ಅವಳಿಗೆ ಗೊತ್ತಾಯಿತು. ಲೀಲಾ ತನಗೆ ಸಹಾನುಭೂತಿ ತೋರಿದಳೆಂದು ಯಾವುದೋ ದುರ್ಬಲ ಗಳಿಗೆಯಲ್ಲಿ ತನ್ನ ಗುಟ್ಟನ್ನು ಬಿಟ್ಟುಕೊಟ್ಟಾಗಿತ್ತು. ಆದರೆ ಅದನ್ನು ಲೀಲಾ ತನ್ನ ಕೈಚಳಕದಿಂದ ಬೇರೆ ಬಗೆಯಾಗಿ ರೂಪಿಸಿಬಿಟ್ಟಿದ್ದಳು. ರಾಜಣ್ಣ ಕೂಡ ಅದನ್ನೇ ಕೇಳಿ ನಂಬಿದ್ದ! ಅತ್ತೆಯ ಮನೆಯಿಂದ ಜಗಳವಾಡಿ ಕೊಂಡು ಬಂದಿದ್ದೇನೆಂದು ತಾನು ಹೇಳಿದುದನ್ನು ಯಜಮಾನರ ಕೈಯಲ್ಲಿ ಜಗಳವಾಡಿದೆನೆಂದು ಲೀಲಾ ತಿರುಗಿಸಿಬಿಟ್ಟಿದ್ದಳು. ಶಾಂತಳಿಗೆ ಮನಸ್ಸು ಕಹಿಯಾಯಿತು. ಕರುಣೆಯಿಂದ ಕೊರಳು ಕೊಯ್ಯುವ ಹಿತವಂತೆ ತನ್ನ ಅತ್ತಿಗೆ ಲೀಲಾ, ಎನಿಸಿ ಶಾಂತಳ ಮನಸ್ಸು ಬಿಗಡಾಯಿಸಿಕೊಂಡಿತು. ಬಾಯಿಗೆ ತಕ್ಷಣವೆ ಬಂದ ಮಾತನ್ನು ಹಾಗೆಯೆ ಅದುಮಿಬಿಟ್ಟಳು. ಹುಂ, ಏನಾದರೂ ತಿಳಿದುಕೊಳ್ಳಲಿ, ಏನಾದರೂ ಅಂದುಕೊಳ್ಳಲಿ ಎಂದುಕೊಂಡಳು.

"ಹೋಗಲಿ ಬಿಡು, ಶಾಂತ. ಈಗ ಯಾಕೆ, ಆ ಮಾತೆಲ್ಲ. ನಿನ್ನ ಮೈ ಹುಷಾರಾಗಿ ನೋಡಿಕೊ. ಈಗ ಹೋಗಿ ಔಷಧಿ ತೆಗೆದುಕೊ. ಗಾಡಿಯಲ್ಲಿ

ಶಾಪಿಗೆ ಹೋಗಿ ಬನ್ನಿ. ಡಾಕ್ಟರಿಗೆ ತೋರಿಸಿ ಅವರೇನು ಹೇಳುವರೊ ಕೇಳು. ಔಷಧಿ ತೆಗೆದುಕೊ. ಗಾಡಿಗೆ ದುಡ್ಡು ಕೊಡಲೇನು ?" ಎಂದು ರಾಜಣ್ಣ ಜೇಬಿಗೆ ಕೈ ಹಾಕಿದ.

ಇವನ ದೊಡ್ಡಸ್ತಿಕೆ ಇವನಿಗೇ ಇರಲಿ, ಎನಿಸಿತು ಶಾಂತಳಿಗೆ. ಅಂತೆಯೆ ತಕ್ಷಣ "ಏನೂ ಬೇಡ. ನನ್ನ ಹತ್ತಿರ ಗಾಡಿಗೆ ಕೊಡಲು ದುಡ್ಡಿದೆ" ಎಂದು ಬಿಟ್ಟಳು. ಲೀಲಳ ಮುಖ ಈ ಮಾತಿನಿಂದ ಕಪ್ಪುಗಟ್ಟಿತು. ರಾಜಣ್ಣ ಎದ್ದು ನಿಂತು "ಸರಿ, ಹಾಗಾದರೆ" ಎಂದು ರೂಮಿನೊಳಕ್ಕೆ ಹೋದ. ಲೀಲಾ ಬೇರೆ ಮಾತಿಲ್ಲದೆ ಸರಬರನೆ ರೂಮಿಗೆ ಹೊರಟುಹೋದಳು.

ರಾಜಣ್ಣ ಹೋದ ಮೇಲೆ ಶಾಂತ ಆಸ್ಪತ್ರೆಗೆಂದು ಹೊರಟಳು. ಒಬ್ಬಳೆ ಹೋಗುವುದು ಸರಿಯಲ್ಲವೆಂದು ಲೀಲಳನ್ನೂ ಜತೆಗೆ ಕರೆದಳು. ಏನೋ ನೆವ ಹೇಳಿ ತಪ್ಪಿಸಿಕೊಳ್ಳಲು ಲೀಲಾ ಯತ್ನಿಸಿ ಕೊನೆಗೆ ತಾನು ಬರುವುದಿಲ್ಲವೆಂದು ಬಿಟ್ಟಳು. ಅತ್ತೆಯವರು ಹೇಳಿದ ಮಾತನ್ನೂ ಕೇಳಲಿಲ್ಲ. ತನ್ನ ರೂಮಿನೊಳಗೆ ಸೇರಿಕೊಂಡು ಅನಂತರಾಮುವನ್ನು ಆಡಿಸುತ್ತ ಕುಳಿತುಬಿಟ್ಟಳು. ಅವಳನ್ನು ಕರೆಯಲೆಂದು ಶಾಂತ ಮತ್ತೆ ರೂಮಿನ ಬಾಗಿಲಿಗೆ ಬಂದಾಗ ಮಗು ಶಾಂತ ಳನ್ನು ಕಂಡು ಅವಳ ಹತ್ತಿರ ಬರಲು "ತಾತ್ತ, ತಾತ್ತ" ಎನ್ನುತ್ತ ಎದ್ದು ನಿಂತಿತು. ಆದರೆ ಲೀಲಾ ಬಿಗಿಯಾಗಿ ಹಿಡಿದು ಕೂಡಿಸಿಕೊಂಡಳು, ಅದು ಹಟ ಮಾಡಲು ಯತ್ನಿಸಿದಾಗ, ಅವಳ ಕೈಗಳನ್ನು ಕಿತ್ತೆಸೆದು ಶಾಂತಳ ಹತ್ತಿರಕ್ಕೆ ಹೋಗಲು ಯತ್ನಿಸಿದಾಗ ಫಟೀರನೆ ಎರಡೇಟು ಕೊಟ್ಟಳು. ಮಗು ಜೋರಾಗಿ ಅಳುತ್ತ ಕಣ್ಣೀರು ಹಾಕಲಾರಂಭಿಸಿತು. ಶಾಂತಳಿಗೆ ಇದನ್ನು ನೋಡಿ ಸಹಿಸ ಲಾಗಲಿಲ್ಲ. "ಅತ್ತಿಗೆ, ಆಡಿಕೊಂಡಿದ್ದ ಮಗುವನ್ನು ಯಾಕೆ ಹೊಡೆದು ಅಳಿಸುತ್ತಿ. ಕೊಡು ಇಲ್ಲಿ" ಎಂದು ಮುಂದೆ ಬಂದಳು. ಅವಳ ಬಳಿಗೆ ಬರುವವನಂತೆ ಅನಂತರಾಮುವೂ ಅಳುತ್ತ ಕೈ ಚಾಚಿದ. ಆದರೆ ಅವಳ ಹತ್ತಿರ ಹೋದರೇ ಕೆಟ್ಟುಹೋಗುವನೋ ಎನ್ನುವಂತೆ ಲೀಲಾ ಅವನನ್ನು ಭದ್ರವಾಗಿ ಹಿಡಿದು ತೊಡೆಯ ಮೇಲೆ ಹಾಕಿಕೊಂಡಳು. "ಬಿದ್ದುಗೊಳ್ಳೊ, ಇರಲಿ, ಅಳತಾನೆ" ಎಂದು ಗದರಿಸಿಕೊಂಡಳು. ಶಾಂತಳಿಗೆ ತನ್ನದೆ ತಪ್ಪೆನಿಸಿ ಕರುಳು ಕಿತ್ತು ಕೈಗೆ ಕೊಟ್ಟಂತಾಯಿತು. ಹೊಸಲು ದಾಟಿ ಹಿಂದಕ್ಕೆ ಹೋಗುತ್ತಿದ್ದಂತೆ "ತಾಯಿ ಗಿಂತ ಹೆಚ್ಚು ಗೊತ್ತು ಇವಳಿಗೆ" ಎಂದು ಲೀಲಾ ಗೊಣಗಿದಂತಾಯಿತು. ಮಗುವೇನೊ ತನಗೆ ಒಗ್ಗಿಕೊಂಡಿತ್ತು, ತನ್ನ ಬಳಿಗೆ ಬರಲು ಯತ್ನಿ

ಸಿತು. ಅದಕ್ಕೆ ಹಾಗೆ ಹೊಡೆಯಬೇಕೆ ?—ತನ್ನ ಹತ್ತಿರಕ್ಕೆ ಅದನ್ನು ಬಿಡಬಾರದೆಂದು ಲೀಲಳ ಇಷ್ಟ. ಹಾಗೆಯೆ ತನ್ನ ಜತೆಯಲ್ಲಿ ಬರಲು ಕೂಡ ಅವಳಿಗೆ ಅವಮಾನ. ತಾನು ಅವಳ ದೃಷ್ಟಿಯಲ್ಲಿ ಅಷ್ಟು ನಿಕೃಷ್ಟಳಾದೆನಲ್ಲ ಎಂದು ಶಾಂತಳಿಗೆ ಅವಮಾನವೂ ಆಯಿತು, ದುಃಖವೂ ಆಯಿತು. ತನಗೆ ಮೈ ಚೆನ್ನಾಗಿಲ್ಲ. ಅಣ್ಣ ಕೂಡ ಹೇಳಿದ್ದ 'ಗಾಡಿಯಲ್ಲಿ ಹೋಗಿ' ಎಂದು. ಆದರೆ ಅತ್ತಿಗೆ ಬರಲು ನಿರಾಕರಿಸಿ ತನಗೆ ಅವಮಾನ ಮಾಡಿದಳು. ತಾನು ಆಡಿದ ಒಂದು ಮಾತಿಗೆ ಬೇರೆ ಬಣ್ಣ ಕೊಟ್ಟು ಅದನ್ನು ತನ್ನ ಅಣ್ಣನ ಕೈಯಲ್ಲಿ ಹೇಳಿದ್ದಳು. ಅವನೂ ಅವಳು ಹೇಳಿದಂತೆ ಕುಣಿಯುವವನು. ಅಂತೆಯೆ ಹಾಗೆ ಆಡಿದ್ದ. ಎಲ್ಲಾ ತನ್ನ ಕರ್ಮ! ಎಂತಹ ಸ್ವರ್ಗ ಬಿಟ್ಟು ಯಾವ ನರಕಕ್ಕೆ ಬಂದು ಸೇರಿದೆನೆಂದು ಶಾಂತಳಿಗೆ ಆಗ ತೋರಿಕೆಯಾಯಿತು.

ಅಂದು ಆರಂಭವಾದ ಹಿಂಸೆ—ಒಳಹಿಂಸೆ—ನಾಲ್ಕು ದಿನವೂ ನಡೆದಿತ್ತು. ಅದರ ಯಾತನೆ—ದೊಡ್ಡ ಸುತ್ತಿಗೆಯ ಪೆಟ್ಟಲ್ಲ. ನೂರು ಕಡೆ ಸಣ್ಣ ಸಣ್ಣ ಸೂಜಿಯ ಮೊನೆಗಳನ್ನು ಚುಚ್ಚಿ ಹಿಂದೆಳೆದಂತಾಗಿತ್ತು ಶಾಂತಳಿಗೆ. ಸಣ್ಣ ಸಣ್ಣ ಮಾತಿಗೆಲ್ಲ ಅತ್ತಿಗೆ ಲೀಲಾ ಶಾಂತಳ ಮೇಲೆ ಸಿಡುಗುಟ್ಟುತ್ತಿದ್ದಳು. ರಾಜಣ್ಣ ಆಗ ಸುಮ್ಮನಿರುತ್ತಿದ್ದ. ಇಲ್ಲದೆ ಹೋದರೆ ಲೀಲಳ ಪರವಾಗಿಯೆ ಮಾತನಾಡುತ್ತಿದ್ದ. ಶಾಂತಳ ಬಳಿಗೆ ಆ ಮಗು ಬಂದರೆ ಅದಕ್ಕೆ ಸೋಂಕಾದೀತೊ ಎನ್ನುವಂತೆ ಅನಂತರಾಮುವನ್ನು ಅವಳಿಂದ ದೂರವಾಗಿಟ್ಟರು. ಅದನ್ನು ಕಾಪಾಡಲು ಸರ್ವ ಪ್ರಯತ್ನವನ್ನೂ ನಡೆಸಿದರು. ಶಾಂತಳ ಹತ್ತಿರ ಹೋಗಲು ಅದು ಯತ್ನಿಸಿದಾಗಲೆಲ್ಲ ಏಟು ಬೀಳುತ್ತಿತ್ತು ಮಗುವಿಗೆ. ಆ ಏಟುಗಳೆಲ್ಲ ತನಗೇ ಬಿದ್ದುವೇನೊ ಎನ್ನುವಂತಾಗುತ್ತಿತ್ತು ಶಾಂತಳಿಗೆ. ಅಕಸ್ಮಾತ್ತಾಗಿ ಅವರಿಬ್ಬರ ಕಣ್ಣು ತಪ್ಪಿ ಅನಂತರಾಮು ಶಾಂತಳ ತೊಡೆಯೇರಿದರೆ ತಕ್ಷಣವೆ ಯಾರಾದರೊಬ್ಬರು ಕಂಡೊಡನೆ ಅವಳಿಂದ ಅದನ್ನು ಕಿತ್ತುಕೊಳ್ಳುತ್ತಿದ್ದರು. "ಇಲ್ಲಿ ನೀನು ಯಾವಾಗಲೂ ಎತ್ತಿಕೊಂಡು ಮುದ್ದಾಡಿ ಅಭ್ಯಾಸ ಮಾಡಿಬಿಟ್ಟರೆ ಅಲ್ಲಿ ನಮಗೆ ಕಷ್ಟವಾಗುತ್ತೆ" ಎಂದು ಅವಳ ಹತ್ತಿರ ಹೇಳುತ್ತಿದ್ದರು. ರೂಮಿನೊಳಗೆ ಅವನಿಗೆ ಏಟು ಕೊಡುತ್ತ "ಹೋಗಬೇಡ ಅಂದರೂ ಅವಳ ಹತ್ತಿರ ಹೋಗತೀಯಾ" ಎಂದು ಗದರಿಸಿಕೊಳ್ಳುತ್ತಿದ್ದರು. ಇಷ್ಟಾದರೂ ಅನಂತರಾಮುವಿಗೆ ಶಾಂತಳ ಮೇಲೆಯೆ ವಾಂಛಲ್ಯ. ಶಾಂತಳಿಗೂ

ಆ ಮಗು ತನಗಾಗಿ ಎಷ್ಟೊಂದು ಒದ್ದಾಡಿಕೊಳ್ಳುತ್ತೆ ಎಂದು ಕರುಳು ತುಡಿಯು ತ್ತಿತ್ತು. ಹೇಗೊ ಕಳ್ಳ ತಪ್ಪಿಸಿಕೊಂಡು "ಕತ್ತೆ, ಅತ್ತೆ" ಅಂತ ದೊಡ್ಡದಾಗಿ ಬಾಯಿ ಬಿಟ್ಟುಕೊಂಡು ಪುಟ್ಟಪುಟ್ಟದಾಗಿ ತಪ್ಪು ಹೆಜ್ಜೆ ಹಾಕಿ ಓಡಿ ಬಂದು ಕತ್ತನ್ನು ಬಿಗಿಯಾಗಿ ಕೈಗಳಲ್ಲಿ ಅಪ್ಪಿಕೊಳ್ಳುತ್ತಿದ್ದ. ಆಗ ಕರುಳು ಕೊಯ್ಯು ವಂತಹ ಸುಖವಾಗುತ್ತಿತ್ತು ಶಾಂತಳಿಗೆ. ಏನೊ ಹಾಯೆನಿಸಿದರೂ ಹೇಳಿಕೊಳ್ಳ ಲಾರದಂತಹ ವೇದನೆಯೂ ಆಗುತ್ತಿತ್ತು. ಮಗು 'ಅತ್ತೆ, ಕತ್ತೆ' ಎನ್ನುತ್ತ 'ಮುಮು' ಎನ್ನುತ್ತಿದ್ದ. ಮುತ್ತು ಎಷ್ಟು ಕೊಟ್ಟರೂ ಅವನಿಗೆ ಸಾಲದು. ಇನ್ನೂ ಇನ್ನೂ ಕೆನ್ನೆ ತೋರಿಸುತ್ತಿದ್ದ. ಕೊನೆಗೆ ತನ್ನ ಪ್ರೀತಿ ತೋರಿಸಲು ತಾನೂ ಶಾಂತಳ ಕೆನ್ನೆಗೆ ಬಾಯಿಟ್ಟು ಚೆನ್ನಾಗಿ ಎಂಜಲು ಮಾಡಿಬಿಡುತ್ತಿದ್ದ. "ಥೂ ತುಂಟಮರಿ. ಮುತ್ತು ಕೊಡತೀನೀಂತ ಎಂಜಲು ಮಾಡಿಬಿಟ್ಟೆಯಲ್ಲೊ. ಹೋಗು, ನಿನ್ನ ಮುದ್ದಾಟವೂ ಬೇಡ, ನಿನ್ನ ಮುತ್ತೂ ಬೇಡ" ಎಂದು ಶಾಂತ ಮುದ್ದಾಡುತ್ತಿದ್ದಳು. ಮತ್ತೆ ಕೆನ್ನೆಗೆ ಬಾಯಿಟ್ಟು ಹಲ್ಲೂರಿ, ತನಗೆ ಹಲ್ಲು ಬಂದಿದೆಯೆಂದು ತೋರಿಸಿ ನಗುತ್ತಿದ್ದ ಮಗುವಿನ ಆಟ ಶಾಂತಳಿಗೆ ಬೇಸಿಗೆ ಯಲ್ಲಿ ಇದ್ದಕ್ಕಿದ್ದಂತೆ ಬೀಸಿದ ತುಳಿಗಾಳಿಯಂತೆ ಹಿತವಾಗುತ್ತಿತ್ತು. "ಕಚ್ಚಿ ಬಿಟ್ಟೆಯಲ್ಲೊ, ಕಳ್ಳ ಮರಿ" ಎನ್ನುತ್ತ ತಬ್ಬಿಕೊಂಡು ಮುದ್ದಿಡುತ್ತಿದ್ದಳು. ಅವಳ ಈ ಮುದ್ದಾಟ ಅನಂತರಾಮುವಿಗೆ ಹಿತವಾಗಿತ್ತು, ಬೇಕಾಗಿತ್ತು. ಅಂತೆಯೆ ಹೇಗೊ ಅವಳ ಬಳಿಗೆ ಓಡಿಬರುತ್ತಿದ್ದ. ಆದರೆ ಅವಳ ಈ ಮುದ್ದಾಟ ನೋಡಿ ಲೀಲಳಿಗೆ ಸಹಿಸುತ್ತಿರಲಿಲ್ಲವೇನೊ. ಅನಂತುವನ್ನು ಅವಳು ಶಾಂತಳ ಹತ್ತಿರದಿಂದ ಹೇಗಾದರೂ ತಪ್ಪಿಸುತ್ತಿದ್ದಳು. ರಾಜಣ್ಣ ಬಂದ ಮೂರನೆ ದಿನವೆ ಒಂದು ಸಣ್ಣ ಘಟನೆ ನಡೆದುಹೋಯಿತು. ಅದರಿಂದ ಶಾಂತಳ ಹೃದಯ ಮತ್ತೂ ಕಹಿಯಾಯಿತು. ಮಗುವಿಗೆ ತನ್ನಿಂದ ಅನ್ಯಾಯವಾಗಿ ಏಟು ಬಿದ್ದಿ ತಲ್ಲ ಎಂದು ಅವಳಿಗೆ ಬಹಳ ದುಃಖವೂ ಆಯಿತು.

ಹಿಂದಿನ ದಿನ ಗಾಡಿಯಲ್ಲಿ ಶಾಂತ ಒಬ್ಬಳೆ ಆಸ್ಪತ್ರೆಗೆ ಹೋಗಿ ಬಂದಿದ್ದಳು. ಲೀಲಾ ತಾನು ಬರುವುದಿಲ್ಲವೆಂದು ಹೇಳಿ ರೂಮಿನೊಳಕ್ಕೆ ಹೊರಟು ಹೋಗಿದ್ದಳು. ಶಾಂತ ಬೇರೆ ಸೀರೆ ಉಟ್ಟುಕೊಂಡು ಹೊರಟದ್ದುದನ್ನು ನೋಡಿದ ಅನಂತರಾಮು 'ಬೊಬ್ಬ, ಬೊಬ್ಬ' ಎಂದು ಕುಣಿದಾಡಿದ್ದ. ಆದರೆ ಲೀಲಾ ರೂಮಿನೊಳಕ್ಕೆ ಹೋದಾಗ ಬೇಕಿಲ್ಲದಿದ್ದರೂ, ಅವನು ಹಟ ಮಾಡಿ

ದರೂ ಬಿಡವೆ ಅವನನ್ನು ಒಳಕ್ಕೆ ಎತ್ತಿಕೊಂಡು ಹೊರಟುಹೋಗಿದ್ದಳು. ಶಾಂತ ಳೊಂದಿಗೆ ಹೋಗುವೆನೆಂದು ಅವನು ಹಟ ಮಾಡಿದಾಗ " ಸಂಜೆಗೆ ಬೇರೆ ಗಾಡಿ ಬರುತ್ತೆ ಕಣೊ—ನಾನು ನಿನ್ನನ್ನು ಬೊಬ್ಬ ಕರಕೊಂಡು ಹೋಗ್ತೀನಿ " ಅಂತ ಲೀಲಾ ಸಮಾಧಾನ ಹೇಳಿ ಪೆಟ್ಟಿಗೆಯಿಂದ ಒಂದು ಚಾಕಲೇಟನ್ನು ತೆಗೆದು ಕೊಟ್ಟಿದ್ದಳು. ಅವನಿಗೆಂದು ಪೆಟ್ಟಿಗೆಯಲ್ಲಿ ಡಬ್ಬಿಯ ತುಂಬ ಚಾಕಲೇಟು ತುಂಬಿಟ್ಟಿದ್ದು ತನಗಿಷ್ಟ ಬಂದಾಗಲೆಲ್ಲ ತಿನ್ನಿಸುತ್ತಿದ್ದಳು. ಆಗೇನೊ ಅವನು ಆ ಮಾತಿನಿಂದ ಸಮಾಧಾನಗೊಂಡು ಸುಮ್ಮನಾದ. ಶಾಂತ ಒಬ್ಬಳೆ ಆಸ್ಪತ್ರೆಗೆ ಹೋಗಿದ್ದಳು. ಅದೂ ಒಂದು ನರಕಯಾತನೆ ಆಯಿತು ಅವಳಿಗೆ. ಎಲ್ಲರೂ ತನ್ನನ್ನೆ ದಿಟ್ಟಿಸುತ್ತಿರುವರು. ಪಿಸು ಮಾತಾಡಿಕೊಳ್ಳಲು ಹವಣು ಕಾಯುತ್ತಿ ರುವರೆಂದು ಅವಳ ಹೃದಯ ಡವಡವನೆ ಹೊಡೆದುಕೊಳ್ಳುತ್ತಿತ್ತು. ಅವಳ ಬೀದಿಯವಳೆ, ಅವಳ ಓರಗೆಯವಳೆ ಭಾಗೀರಥಿ ಗಂಟಲು ನೋವೆಂದು ಬಂದಿ ದ್ದವಳು ಇವಳನ್ನು ಕಂಡೊಡನೆಯೆ ಮುಖ ಸಿಂಡರಿಸಿಕೊಂಡು ಗೋಣು ಮುರಿದಿದ್ದಳು. ಪಕ್ಕದಲ್ಲಿ ಇವಳು ಕುಳಿತಾಗ ತನಗೆಲ್ಲಿ ಸೋಕಿ ಹೋಗಿ ತಾನೆಲ್ಲಿ ಅಪವಿತ್ರಗೊಂಡೇನೊ ಎಂದು ಪಕ್ಕಕ್ಕೆ ಸರಿದುದೂ ಅಲ್ಲದೆ ಸೀರೆಯನ್ನು ಮೈಗಂಟುವಂತೆ ಎಳೆದುಕೊಂಡಿದ್ದಳು. ಅದನ್ನು ಕಂಡ ಶಾಂತಳಿಗೆ ಮನಸ್ಸು ಪೂರ್ತಿ ಕಲಕಿತ್ತು. ಮನೆಯಿಂದ ಹೊರಡುವಾಗ ಲೀಲಾ ಹಾಗೆ ತನ್ನನ್ನು ಧಿಕ್ಕರಿಸಿದುದು, ಇಲ್ಲಿಯ ತಿರಸ್ಕಾರ—ಎರಡೂ ಸೇರಿ ಅವಳ ಹೃದಯವನ್ನು ಹಣ್ಣು ಮಾಡಲಾರಂಭಿಸಿದವು. ಯಾರೂ ತನ್ನ ಜತೆ ಬರಲಿಲ್ಲ, ಇಲ್ಲಿ ಯಾರೂ ಜತೆಗೆ ಸೇರಲು ಸಿದ್ಧರಾಗಿಲ್ಲ. ತಾನೆಂತಹ ಮಣ್ಣು ತಿನ್ನುವ ಕೆಲಸ ಮಾಡಿದೆ ನೆಂಬುದು ಈಗ ಮನಸ್ಸಿಗೆ ಅರಿವಾಗುತ್ತ ಬಂತು. ಅಲ್ಲಿ ತನ್ನ ಯಜಮಾನರ ಮನೆಯಲ್ಲಿದ್ದಾಗ ಒಮ್ಮೆಯೂ ಹೀಗಾಗಿರಲಿಲ್ಲ. ಹಿಂದೆ ಕೂಡ ತನ್ನ ತಾಯಿಯ ಮನೆಯಲ್ಲಿ ಹೀಗಾಗಿರಲಿಲ್ಲ. ತನ್ನ ಬೀದಿಯವರು ಕೂಡ ವಿಶ್ವಾಸದಿಂದ ತನ್ನೊಂದಿಗೆ ನಲಿದಾಡಿದ್ದರು. ಈ ಭಾಗೀರಥಿಯೆ ತನ್ನ ಗಂಡನ ಮನೆ ಮಾತ ನ್ನೆಲ್ಲ ಹೇಳಿಕೊಂಡು ಅತ್ತಿದ್ದಳು. ಆದರೆ ಅಂದು ತನ್ನ ಸಹಾನುಭೂತಿ, ವಿಶ್ವಾಸ ಬಯಸಿ ಪಡೆದ ಭಾಗೀರಥಿ ಇಂದು ತನ್ನನ್ನೆ ಧಿಕ್ಕಾರ ಮಾಡುತ್ತಿದ್ದಾಳೆ. ಅವಳ ತಪ್ಪಲ್ಲ—ತನ್ನದೇ ತಪ್ಪು. ತಾನು ಗಂಡನ ಮನೆಯಿಂದ ಹೀಗೆ ಬಂದುದರಿಂದ ತಾನೆ ಇದೆಲ್ಲ ಎಂದು ಶಾಂತಳಿಗೆ ಅನಿಸಿತು. ಮತ್ತೆ ಮರುಕಳಿಸಿದ ದುಃಖದಲ್ಲಿ

ಕಾಗದ ಬರಲಿಲ್ಲವೆನ್ನುವ ದುಃಖವೂ ಬೆರೆಯಿತು. ಆದರೆ ತಾನೂ ಕಾಗದ ಹಾಕ ಲಿಲ್ಲ, ಹಾಕಬೇಕಾಗಿತ್ತು, ಹಾಕಬಹುದಾಗಿತ್ತು. ಇಷ್ಟಕ್ಕೂ ಸೀನುವೊಬ್ಬನ ಹತ್ತಿರ ತಾನೆ ತನ್ನ ಹಗರಣ, ಅತ್ತೆಗಾದರೂ ಕಾಗದ ಹಾಕಬೇಕಾಗಿತ್ತು; ಇಲ್ಲವೆ ತನ್ನ ಯಜಮಾನರಿಗಾಗಲಿ ಕಾಗದ ಬರೆಯಬೇಕಾಗಿತ್ತು. ಅವರು ಮೇಲೆ ತೋರಿಸಿಕೊಳ್ಳದಿದ್ದರೂ ತನಗಾಗಿ ಬಹಳ ತವಕಪಡುತ್ತಿರುವರೆಂಬುದು ಗೊತ್ತು. ಕಾಗದ ಹಾಕದುದು ಅಪರಾಧವಾಯಿತು ಎಂದುಕೊಂಡಳು. ಉಮ್ಮಳಿಸಿಬಂದ ದುಃಖವನ್ನು ಅಲ್ಲಿ ಎಲ್ಲರೆದುರಿಗೂ ತೋರಿಸುವುದು ಸರಿಯಲ್ಲ ಎಂದು ಮನಸ್ಸು ಹೇಳಿ, ಕಣ್ಣೀರನ್ನು ತಡೆಯಿತು. ಇಲ್ಲದಿದ್ದರೆ ದುರ್ಬಲ ಹೃದಯ ಕಣ್ಣಿನಲ್ಲಿ ಕೋಡಿಯನ್ನೆ ಕರೆಸಿಬಿಡುತ್ತಿತ್ತು. ಅಷ್ಟರಲ್ಲಿ ಡಾಕ್ಟರು ಭಾಗೀರಥಿಯನ್ನು ಒಳಕ್ಕೆ ಕರೆದರು. ಮಾತನಾಡಿಸುತ್ತ "ಏನಮ್ಮ, ನಿನ್ನ ಯಜಮಾನರು ಯಾವಾಗ ಬರುತ್ತಾರೆ ?" ಎಂದುದು ಶಾಂತಳಿಗೆ ಕೇಳಿಸಿತು. ಗೊಗ್ಗರ ದನಿಯಲ್ಲಿ ಭಾಗೀರಥಿ "ಈ ಶನಿವಾರ ಬರುತೀನಿ ಅಂತ ಈವತ್ತು ಕಾಗದ ಬರೆದಿದಾರೆ" ಎಂದಳು. ಹೊರಕ್ಕೆ ಬಂದು ತಾತ್ಸಾರದಿಂದ ಶಾಂತಳ ಕಡೆ ನೋಡಿ ಸಿಡಸಿಡನೆ ನಡೆದುಕೊಂಡು ಹೊರಟುಹೋದಳು. ಶಾಂತಳಿಗೆ ಹೃದಯಕ್ಕೆ ಬೆಂಕಿಯಿಟ್ಟಂತಾಯಿತು. ಡಾಕ್ಟರು ಅವಳನ್ನು ಎರಡು ಮೂರು ಬಾರಿ ಕರೆದಾಗಲೆ ಅವಳಿಗೆ ಎಚ್ಚರ. ತನಗೆ ಕಾಗದ ಬರಲಿಲ್ಲ ಎಂದು ಅವಳ ಹೃದಯ ತುಡಿಯುತ್ತಿತ್ತು. ಡಾಕ್ಟರು ಅವಳನ್ನು ಪರೀಕ್ಷಿಸಿ "ನೋಡಮ್ಮ ಶಾಂತ, ನಾನು ಒಂದು ಮಾತು ಹೇಳತೀನಿ, ಏನೂ ತಿಳಕೊಳ್ಳದಿದ್ದರೆ" ಎಂದು ಆರಂಭಿಸಿದರು. ಅವರು ಇನ್ನೇನು ಹೇಳಿಬಿಡುವರೊ ಎಂದು ಶಾಂತಳಿಗೆ ಗಾಬರಿ ಆಯಿತು. ಆದರೆ ಎಂತೆಂತಹ ಮಾತನ್ನೊ ಕೇಳಿದ್ದಳು, ಜೀರ್ಣಿಸಿ ಕೊಂಡಿದ್ದೇನೆಂದುಕೊಂಡಳು. ಇವರು ಉಳಿದವರಂದುದಕ್ಕಿಂತ ಹೆಚ್ಚಾಗಿ ಏನು ತಾನೆ ಅಂದಾರು—ನೋಡೋಣ ಎಂದುಕೊಂಡಳು. ಅಲ್ಲದೆ, ಡಾಕ್ಟರು ಬಹಳ ಒಳ್ಳೆಯವರು, ಶಾಂತಳನ್ನು ಚಿಕ್ಕಂದಿನಿಂದ ಎತ್ತಿ ಆಡಿಸಿದವರು. ಅವರು ಏನಾದರೂ ಕೆಟ್ಟುದನ್ನುವುದು ಸಾಧ್ಯವೆ ಇಲ್ಲ. ಆದರೆ ಈಗ ತನ್ನ ಸ್ಥಿತಿ ಚೆನ್ನಾಗಿಲ್ಲ. ಪ್ರಾಣಿ ಹಳ್ಳಕ್ಕೆ ಬಿದ್ದರೆ ಸಾವಿರ ಕಾಗೆಗಳು ಸೇರಿಕೊಂಡು ಕುಕ್ಕುವಂತೆ ಒಬ್ಬರು ಯಾರಾದರೂ ದುರವಸ್ಥೆಗೆ ಸಿಕ್ಕಿಕೊಂಡರೆ ಸಾವಿರ ಜನ ಹಿಂಸೆಕೊಡುತ್ತಾರೆ. ಸಹಿಸುವ ತ್ರಾಣವೊಂದಿರಬೇಕು, ಅಷ್ಟೆ ! ತನ್ನ ಸ್ಥಿತಿ ಈಗ

ಹಾಗೆ ಆಗಿದೆ. ಯಾರೇನು ಮಾಡಬಲ್ಲರು. ಡಾಕ್ಟರು ಕೂಡ ಏನಾದರೂ ಅನ್ನುವ ರೇನೊ–ಅನ್ನಲಿ ಎಂದು ಮನಸ್ಸನ್ನು ದೃಢಪಡಿಸಿಕೊಳ್ಳಲು ಯತ್ನಿಸಿದಳು. ಅವರ ಪ್ರಶ್ನೆಗೇನೂ ಉತ್ತರವನ್ನು ಕೊಡದೆ ಸುಮ್ಮನೆ ತಲೆ ತಗ್ಗಿಸಿ ಕುಳಿತಳು. ಡಾಕ್ಟರು ಮತ್ತೆ ಮೃದುವಾದ ದನಿಯಲ್ಲಿ ತಲೆಗೂದಲನ್ನು ನೇವರಿಸುವ ತಾಯಿಯ ಮೃದುತೆಯನ್ನು ದನಿಗೆ ಕೂಡಿಸಿಕೊಂಡು "ನಿನ್ನನ್ನು ಹುಟ್ಟಿದಾಗಿನಿಂದ ಬಲ್ಲೆ ನಾನು. ಚಿಕ್ಕ ಮಗುವಾಗಿದ್ದಾಗ ನಾನೇ ನಿನಗೆ ಸಿಹಿ ಔಷಧಿ ಕೊಟ್ಟಿದ್ದು, ಎಲ್ಲಾ ಅನ್ನು. ನಿಮ್ಮ ತಂದೆಗಿಂತಲೂ ನಾನು ಹೆಚ್ಚು ಅಂದುಕೊ. ನಿನಗೆ ಕಾಯಿಲೆ ಬಂದು ಟೈಫಾಯಿಡಿನಲ್ಲಿ ಮಲಗಿದ್ದಾಗ ನನ್ನ ಮಗಳನ್ನು ನೋಡಿ ಕೊಂಡ ಹಾಗೆ ನಿನ್ನ ನೋಡಿಕೊಂಡೆ. ನಿನ್ನನ್ನ ಉಳಿಸುವುದಕ್ಕೆ ನಾನು ಮಾಡಿದ ಯತ್ನ ಆ ದೇವರಿಗೇ ಗೊತ್ತು. ಅದರಿಂದ ನಿನಗೆ ಈ ಮಾತನ್ನು ಹೇಳಿದರೂ ನೀನೇನೂ ತಿಳಕೊಳ್ಳೋಲ್ಲ ಅಂತ ನನಗೆ ಗೊತ್ತು" ಎಂದರು ಡಾಕ್ಟರು. ಅವರ ಚಿಕ್ಕ ಮಗಳು—ಶಾಂತಳ ವಯಸ್ಸಿನವಳು ಚಿಕ್ಕಂದಿ ನಲ್ಲಿ ತೀರಿಹೋಗಿದ್ದಳು. ಶಾಂತಳೂ ಅವಳೂ ಆಟದಲ್ಲಿ, ಶಾಲೆಯಲ್ಲಿ ಜತಿಗಾತಿಯರಾಗಿದ್ದರು. ಅವಳ ಅಕ್ಕ ಸರಸಿ ಕೂಡ ಶಾಂತಳಿಗೆ ಬಹಳ ಹೊಂದಿಕೊಂಡಿದ್ದಳು. ಮದುವೆಯ ಕಾಲದಲ್ಲಿ ಕೂಡ ಡಾಕ್ಟರು ತಮ್ಮ ಮಗಳ ಮದುವೆಯೆ ಎನ್ನುವಷ್ಟು ಉತ್ಸಾಹದಿಂದ ಓಡಾಡಿದ್ದರು. ಸರಸಿ ಕೂಡ ಈ ಮದುವೆಗೋಸ್ಕರ ತನ್ನ ಗಂಡನ ಮನೆಯಿಂದ ಬಂದಿದ್ದಳು. ಅಂತಹ ಆತ್ಮೀಯತೆ ಡಾಕ್ಟರದ್ದು. ಎಲ್ಲ ನೆನಪಾಯಿತು ಶಾಂತಳಿಗೆ. ಡಾಕ್ಟರು ಒಂದು ಗಳಿಗೆ ಸುಮ್ಮನಿದ್ದರು. ಮತ್ತೆ ಮಾತನಾಡಲಾರಂಭಿಸಿದರು: "ನೋಡು ಶಾಂತ, ನೀನು ಬೇರೆಯಲ್ಲ, ನಮ್ಮ ಸರಸಿ ಬೇರೆಯಲ್ಲ. ಹೆಣ್ಣು ಮಕ್ಕಳು ಸುಖವಾಗಿರಲಿ ಅಂತಲೆ ನಾವು ಅವರಿಗೆ ಮದುವೆ ಮಾಡಿ ನಮ್ಮಿಂದ ದೂರವಾದರೂ ಆ ಸಂಕಟವನ್ನು ಸಹಿಸಿಕೊಂಡು, ಗಂಡನ ಮನೆಗೆ ಕಳುಹಿಸು ವುದು. ಅಲ್ಲಿ ನೀವು ಸುಖವಾಗಿರಬೇಕು, ಸಂತೋಷವಾಗಿರಬೇಕು. ನಿಮ್ಮ ಗಂಡಂದಿರಿಗೆ ಅಚ್ಚುಮೆಚ್ಚಾಗಿ ಚೊಕ್ಕಸಂಸಾರ ನಡೆಸಿಕೊಂಡಿರಬೇಕು ಎಂಬುದೆ ನಮ್ಮ ಆಸೆ. ಒಂದೊಂದು ಸಾರಿ ಹಾಗೆ ಆಗುವುದಿಲ್ಲ. ಅದನ್ನು ನಾವು ಅತಿಯಾಗಿ ಮನಸ್ಸಿಗೆ ಹಚ್ಚಿಕೊಳ್ಳುತ್ತೇವೆ. ನಿಮ್ಮ ಸುಖಕ್ಕಾಗಿ ನಾವು ಮಾಡಿದ್ದೆಲ್ಲ ನೀರಿನ ಹೋಮವಾದರೆ ನಮಗೆ ನಿಮಗಿಂತಲೂ ದುಃಖ ಹೆಚ್ಚು. ಅದನ್ನು ನಿವಾರಿಸಲು

ನಾವೂ ಯತ್ನಿಸಬೇಕು. ನೀವೂ ಯತ್ನಿಸಬೇಕು. ಸುಮ್ಮನೆ ಮನಸ್ಸಿನಲ್ಲಿ ಹಚ್ಚಿ ಕೊಂಡು ಕೊರಗಿದರೆ ಏನೂ ಪ್ರಯೋಜನವಿಲ್ಲ. ಇಷ್ಟೆಲ್ಲ ಯಾಕೆ ಹೇಳಿದೆನೆಂದರೆ ನೋಡು, ನೀನು ಗರ್ಭಿಣಿ. ನಿನ್ನ ಮನಸ್ಸಿಗೇನೊ ಹಚ್ಚಿಕೊಂಡಿದೀಯ. ಅದು ನಿನ್ನನ್ನು ಕೊರೆಯುತ್ತಿದೆ. ಮೈ, ಮನಸ್ಸು ಎರಡನ್ನೂ ಈ ಕೊರಗು ಕತ್ತರಿಸಿ ಹಾಕಿಬಿಡುತ್ತದೆ. ಇದರಿಂದ ನಿನ್ನ ಮೈಯಷ್ಟೇ ಅಲ್ಲ, ನಿನ್ನ ಹೊಟ್ಟೆಯಲ್ಲಿರು ವುದಕ್ಕೂ ಕೂಡ ಕೆಡಕು. ನಿನಗೆ ಯಾಕೆ ಹೀಗೆ, ಏನು ಎಂದು ನಾನು ಕೇಳುವು ದಿಲ್ಲ. ಆದರೆ ನಿಮ್ಮ ತಂದೆಯ ಸಮಾನ ನಾನು, ಆದ್ದರಿಂದ ಹೇಳುತ್ತೇನೆ. ಹುಷಾರಾಗಿರಬೇಕು. ಮನಸ್ಸಿನ ಆತಂಕ ಬಿಡಬೇಕು. ಇಲ್ಲದಿದ್ದರೆ ಬಹಳ ಕಷ್ಟ ವಾಗುತ್ತದೆ. ಹೋಗಲಿ, ಈ ಟಾನಿಕ್ಕು ಕೊಡುತ್ತೇನೆ ತೆಗೆದುಕೊ. ಆದರೆ ಮುಖ್ಯ ನಿನ್ನ ಮನಸ್ಸು ಕೊರಗುವುದನ್ನು ಬಿಟ್ಟರೆ ಮಾತ್ರ ನಿನ್ನ ಈ ಆರೋಗ್ಯ ಸರಿ ಹೋಗುತ್ತೆ" ಎಂದರು. ಬೆವರಿನಿಂದ ತೊಯ್ದು ಹಣೆಯನ್ನು ಕರವಸ್ತ್ರದಿಂದ ಒರಸಿಕೊಂಡರು. ಹಾಕಿದ್ದ ಕನ್ನಡಕದ ಗಾಜಿಗೆ ಕೂಡ ಪರೆಗಟ್ಟಿದಂತೆ ಆಗಿದ್ದುದನ್ನು ಶಾಂತ ಕಂಡಳು. ಡಾಕ್ಟರು ಅದನ್ನು ತೆಗೆದು ಕರವಸ್ತ್ರದಿಂದ ಕಣ್ಣೊರಸಿಕೊಂಡಾಗ, ಕಳ್ಳತನದಲ್ಲಿ ಶಾಂತ ಸೆರಗಿನಿಂದ ಕಣ್ಣೊರಸಿಕೊಂಡಳು. ಹೊರಗಿನಿಂದ ಯಾರೊ 'ಡಾಕ್ಟರ್' ಎಂದು ಕೂಗಿಬಿಟ್ಟುದರಿಂದ ಮಾತು ಅಲ್ಲಿಗೆ ಮುಗಿಯಿತು. ಶಾಂತ ಹೊರಡಲು ಸಿದ್ಧವಾಗಲು "ಶಾಂತ, ಸರಸಿ ಈವತ್ತು ಸಂಜೆಗೆ ಬರುತ್ತಾಳೆ, ಬಾಣಂತನಕ್ಕೆ. ಅವಳಿಗೂ ಎಂಟು ತಿಂಗಳಾಗಿದೆ. ನಾಳೆ ಬೆಳಿಗ್ಗೆ ನಮ್ಮ ಮನೆಗೇ ಬಂದುಬಿಡು. ಅವಳನ್ನು ನೋಡಿ ಬಹಳ ದಿನವಾಯಿತು—ಎರಡು ವರ್ಷವೇ ಆಗಿರಬೇಕು" ಎಂದರು. "ಹೂಂ" ಎಂದು ಶಾಂತ ಮನೆಗೆ ಹೊರಟಳು.

ಹಿಂದಿರುಗಿ ಮನೆಗೆ ಬರುವಾಗ ದಾರಿಯಲ್ಲಿದ್ದ ಅಂಗಡಿಯಲ್ಲಿ ನಾಲ್ಕು ಚಾಕಲೇಟು ತೆಗೆದುಕೊಂಡಳು ಅನಂತರಾಮುನಿಗೆಂದು. ಕೊಳ್ಳುವಾಗ ಅವಳ ಮನಸ್ಸಿನಲ್ಲಿ ಮಗುವಿನ ಮುದ್ದಾದ ಮುಖ ಮಾತ್ರ ಕಾಣಿಸಿಕೊಂಡಿತು. ತನಗೂ ಅನಂತರಾಮುವಿನಂತಹ ಮಗುವೊಂದಾದರೆ ಸಾಕೆನ್ನುವ ಒಂದು ಸುಪ್ತ ಆಸೆಯೂ ಮನಸ್ಸಿಗೆ ಹರ್ಷ ಕೊಟ್ಟಿತು. ಮನೆಗೆ ಬಂದೊಡನೆಯೆ ಎದುರಿಗೆ ಅಂಗಳದಲ್ಲಿ ಆಡುತ್ತಿದ್ದ ಅನಂತರಾಮುವನ್ನು ಕಂಡಳು. ಬಚ್ಚಲುಮನೆಯಲ್ಲಿ ಲೀಲಾ ಮೈ ತೊಳೆದುಕೊಳ್ಳುತ್ತಿದ್ದಳು. ಆದ್ದರಿಂದ ಮಗು ಹಜಾರದಲ್ಲಿ

ಹಾಯಾಗಿ ಆಡಿಕೊಳ್ಳುತ್ತಿತ್ತು. ಶಾಂತಳ ನೆರಳು ಬಾಗಿಲ ಬಳಿ ಬಿದ್ದೊಡನೆ ಮುಖ ಹಿಗ್ಗಿಸಿ "ಕತ್ತೆ, ಅತ್ತೆ" ಎನ್ನುತ್ತ ಎದ್ದು ಓಡಿಬರಲು ಯತ್ನಿಸಿದ. ಹೆಜ್ಜೆ ಇಡಲು ಮುಂದೆ ಕಾಲಿಟ್ಟಾಗ ಆಟದ ಸಾಮಾನು ಕಾಲಿಗೆ ಚುಚ್ಚಿದರೂ ಲಕ್ಷ್ಯ ಮಾಡದೆ ಮುಂದಕ್ಕೆ ಓಡಿ ಬಂದು ಶಾಂತಳನ್ನು ತಬ್ಬಿಕೊಂಡ. "ಮು-ಮು-" ಎಂದು ಅವಳ ಕೆನ್ನೆ ಕಚ್ಚಿದ. ಶಾಂತಳ ಹೃದಯಕ್ಕೆ ಇದೆಲ್ಲ ಬಹಳ ಹಿತವಾಯಿತು. ಅವನ ಪುಟ್ಟ ಕೈಗಳ ಅಪ್ಪುಗೆಯಿಂದ ಮೈ ಪುಲಕಗೊಂಡು ಮನಸ್ಸು ಅರಳಿತು. ಲಟಲಟನೆ ಮುತ್ತಿಟ್ಟಳು. "ತುಂಟ ಮರಿ, ಕೆನ್ನೆ ಕಚ್ಚಿಬಿಟ್ಟೆಯಲ್ಲೊ, ಫಟಿಂಗ" ಎಂದಳು ಮುದ್ದಾಡುತ್ತ. ಅವಳ ಈ ಮಾತು ಮೈ ತೊಳೆದುಕೊಳ್ಳುತ್ತಿದ್ದ ಲೀಲಳಿಗೆ ಕೇಳಿಸಿರಬೇಕು. ನೀರು ಸುರಿಯುವ ಶಬ್ದ ಇದ್ದಕ್ಕಿದ್ದಂತೆ ನಿಂತುಹೋಯಿತು. ಶಾಂತ ಅದನ್ನು ಗಮನಿಸಲಿಲ್ಲ. ತೊಡೆಯ ಮೇಲೆ ಅನಂತುವನ್ನು ಕೂಡಿಸಿಕೊಂಡಿದ್ದಳು. ಅವನು ಅವಳ ಕತ್ತಿನ ಸುತ್ತ ತನ್ನ ಪುಟ್ಟ ಕೈಗಳನ್ನು ಬಳಸಲು ಯತ್ನಿಸುತ್ತಿದ್ದ. ಆ ನೇವರಿಕೆ ಕೂಡ ಶಾಂತಳಿಗೆ ಅಮೃತಸ್ಪರ್ಶವಾಯಿತು. ತನ್ನ ಮಗುವೂ ಹೀಗೆಯೆ—ಎಂದು ಕನಸು ಕಟ್ಟಿತು ಅವಳ ಕಲ್ಪನೆ. ತಾನು ತಂದಿದ್ದ ಚಾಕಲೇಟನ್ನು ತೆಗೆದು ಅನಂತುವಿನ ಕೈಯಲ್ಲಿಟ್ಟಳು. "ಒಂದೆ ಒಂದು ಮುತ್ತು ಕೊಟ್ಟರೆ ಚಾಕಲೇಟು" ಎಂದಳು. ಅನಂತು ಬಿಗಿಯಾಗಿ ತಬ್ಬಿ ಕೆನ್ನೆಯನ್ನೆಲ್ಲ ಒದ್ದೆಮಾಡಿಬಿಟ್ಟ. "ಥೂ! ತುಂಟ, ಫಟಿಂಗ" ಎನ್ನುತ್ತ ಶಾಂತ ಚಾಕಲೇಟನ್ನು ಕಾಗದ ಕಿತ್ತು ಕೊಟ್ಟಳು. ಅದನ್ನು ಬಾಯಿಗೆ ಹಾಕಿಕೊಂಡು ಅಗಿಯುತ್ತ ಇನ್ನೊಂದಕ್ಕಾಗಿ ಕೈ ನೀಡಿದ. ಶಾಂತ ಅದನ್ನೂ ಬಿಡಿಸಿಕೊಟ್ಟಳು. ಮತ್ತೆ ಹಾಗೆಯೆ ಅದನ್ನೂ ಬಾಯಿಗೆ ತುರುಕಿಕೊಂಡು ತಿರುಗಿ ಕೈ ನೀಡಿದ. "ಎಲ್ಲಾ ಒಟ್ಟಿಗೆ ತಿನ್ನಬೇಕೇನೊ, ಮರಿ. ನಿನಗೇ ಕಣೊ—ನಾನು ತಿನ್ನುವುದಿಲ್ಲ" ಎಂದು ಮೂರನೆಯುದನ್ನು ಅವನ ಕೈಗೆ ಶಾಂತ ಕೊಡುವ ವೇಳೆಗೆ ಲೀಲಾ ಬಚ್ಚಲ ಮನೆಯಿಂದ ಹೊರಕ್ಕೆ ಬಂದಳು. ಬಂದವಳೇ ಭೂತಬಡಿದವಳಂತೆ, ತನ್ನ ಮಗುವಿಗೇನೊ ಆಗಿಹೋದವಳಂತೆ ಗಾಬರಿಗಣ್ಣಿನಿಂದೊಮ್ಮೆ ಆ ಕಡೆ ನೋಡಿ ಅವಸರವಸರದಿಂದ ಮುಂದೆ ಬಂದಳು. ಮಗುವನ್ನೆತ್ತಿಕೊಂಡು, ತಿನ್ನುತ್ತಿದ್ದುದ್ದನ್ನು ಬಾಯಿಗೆ ಕೈ ಹಾಕಿ ಹೊರಕ್ಕೆ ತೆಗೆದು ಎಸೆದಳು. "ಹಾಳು ಮೂಳು ತಿಂದರೆ ಮೈ ಏನಾಗಬೇಕು, ಮಗುವಿನದು!" ಎಂದು ಗೊಣಗುತ್ತ

ಕೈಯಲ್ಲಿದ್ದುದನ್ನು ಕಿತ್ತು ಶಾಂತಳ ಮುಂದೆ ಎಸೆದಳು. ಮಗು ಜೋರಾಗಿ ಅಳಲಾರಂಭಿಸಿದ. "ಚಾಕ, ಚಾಕ" ಎಂದು ಶಾಂತಳ ಕಡೆಗೆ ತಿರುಗಲು ಯತ್ನಿಸಿದ. ಪಟಪಟನೆ ನಾಲ್ಕು ಏಟು ಕೊಟ್ಟು ರೂಮಿಗೆ ಎಳೆದುಕೊಂಡು ಹೋದಳು ಲೀಲಾ. ಶಾಂತಳೊಂದಿಗೆ ಒಂದು ಮಾತೂ ಆಡಲಿಲ್ಲ. ಶಾಂತಳ ಮನಸ್ಸು ತುಂಬಿ ಬಂದು ಕಣ್ಣಿನಲ್ಲಿ ಹರಿಯಿತು.

ಹಿಂದಿನ ದಿನ ಇಷ್ಟೆಲ್ಲ ಹಗರಣವಾಗಿತ್ತು. ಶಾಂತಳ ಮನಸ್ಸಿಗೆ ಬಹಳ ನೋವಾಗಿತ್ತು. ತನ್ನಿಂದಾಗಿ ಆ ಮಗುವಿಗೆ ಸುಮ್ಮನೆ ಏಟು ಬಿತ್ತಲ್ಲ, ತಾನು ಅದಕ್ಕೆ ದಂಡಿಸಲು ಕಾರಣವಾದೆನಲ್ಲ ಎಂದು ತನ್ನನ್ನು ತಾನೆ ನಿಂದಿಸಿಕೊಂಡಿದ್ದಳು. ಇನ್ನು ಆದರ ತಂಟೆಗೆ ಹೋಗದಿದ್ದರೆ ಸರಿ, ಆಗಲಾದರೂ ಲೀಲಾ ಸುಮ್ಮನಿರುವಳೆಂದುಕೊಂಡಳು. ಆದರೆ ಮಗುವಿಗೆ ಇದೆಲ್ಲ ಹೇಗೆ ತಿಳಿಯಬೇಕು ? ಅನಂತುವಿಗೆ ಶಾಂತಳಲ್ಲಿ ಎಲ್ಲಿಲ್ಲದ ವಾತ್ಸಲ್ಯ. ಏಟು ಬಿದ್ದರೂ ಅವಳ ಬಳಿಗೆ ಬರಬೇಕೆಂದು ಒದ್ದಾಡುತ್ತಿದ್ದ. ಈ ದಿನವೂ ಹಾಗೆಯೆ ಆಯಿತು. ಸರಸಿಯನ್ನು ನೋಡಿ ಮಾತನಾಡಿಸಿಕೊಂಡುಬರಲು, ಶಾಂತ ಡಾಕ್ಟರ್ ಮನೆಗೆ ಹೊರಟಿದ್ದಳು. ಅವಳು ಸೀರೆ ಉಡುತ್ತಿದ್ದುದನ್ನು ಕಂಡು ಅನಂತರಾಮು "ಬೊಬ್ಬ, ಬೊಬ್ಬ" ಎಂದು ಹಿಗ್ಗುತ್ತಿದ್ದ. ಮಗುವಿನ ಈ ಸಂತೋಷ ಶಾಂತಳಿಗೆ ಕರುಳು ಕಡೆಯಿತು. ಆದರೆ ಅವನನ್ನು ಕರೆದುಕೊಂಡು ಹೋಗುವಂತಿರಲಿಲ್ಲ. ಬಾರೆಂದು ಕರೆದರೂ ಸಾಕು, ಲೀಲಾ ಬಿರುಸಾಗಿ ಎಗರಿಬೀಳುತ್ತಿದ್ದಳು. ಆದರೆ ಶಾಂತಳಿಗೂ ಅನಂತುವಿನ ಮೇಲಿನ ವಾತ್ಸಲ್ಯ. ಇಷ್ಟೊಂದು ಹಿಗ್ಗಿನಿಂದ ಬೊಬ್ಬ ಹೋಗಲು ಕುಣಿಯುತ್ತಿದಾನೆ, ಕರೆದುಕೊಂಡು ಹೋಗಲೆ ಎಂದುಕೊಂಡಳು. ಆದರೆ ತನ್ನ ಈ ಬಯಕೆಯನ್ನು ಪ್ರಕಟಿಸಿದರೆ ಮಗುವಿಗೆಲ್ಲಿ ಏಟು ಬೀಳುವುದೊ ಎಂದು ಸುಮ್ಮನಾದಳು. ಆದರೆ ಅವನು ಬಿಡಬೇಕಲ್ಲ. ಹಟ ಮಾಡಿಕೊಂಡು ರೂಮಿನಿಂದ ಓಡಿಬಂದು ಶಾಂತಳ ತೆಕ್ಕೆಗೆ ಬಿದ್ದ. ಶಾಂತ ಅವನನ್ನೆತ್ತಿಕೊಂಡಳು. ಲೀಲಾಗೆ ಈಗ ಏನು ಮಾಡಬೇಕೊ ತಿಳಿಯಲಿಲ್ಲ. ಮಗು ಹೊರಗೆ ಬಂದೊಡನೆಯೆ ತಾನೂ ಹೊರಕ್ಕೆ ಬಂದಿದ್ದಳು. ಈಗ ಶಾಂತ ಎತ್ತಿಕೊಂಡುಬಿಟ್ಟಿದ್ದಾಳೆ. ಅವನು ಕೂಡ ಅವಳನ್ನು ಭದ್ರವಾಗಿ ತಬ್ಬಿಕೊಂಡು 'ಬೊಬ್ಬ, ಬೊಬ್ಬ' ಎನ್ನುತ್ತಿದ್ದಾನೆ. ಲೀಲಾ ಹತ್ತಿರ ಬಂದು "ಬಾರೋ, ನಾನು ಕರಕೊಂಡು ಹೋಗ್ತೀನಿ, ಬೊಬ್ಬ" ಎಂದು ಕೈನೀಡಿದಳು.

ಅನಂತರಾಮು ಅವಳ ಕಡೆ ಮುಖ ಕೂಡ ತಿರುಗಿಸಲಿಲ್ಲ. ಶಾಂತಳನ್ನೇ ಇನ್ನೂ ಭದ್ರವಾಗಿ ಅಪ್ಪಿಕೊಂಡು 'ಊಂ ಊಂ' ಎಂದು ಮುಲುಗುಟ್ಟಿದ. ಲೀಲಳಿಗೆ ಸಹನೆ ಮೀರಿತು. "ಬಾ ಅಂದರೆ ಬರಬೇಕು. ಶಾಂತಳ ಹತ್ತಿರ ನಿನಗೇನು ಕಿರೀಟ ಕೆತ್ತುವುದು" ಎನ್ನುತ್ತ ಅವನ ಬೆನ್ನಿನ ಮೇಲೊಂದು ಹಾಕಿದಳು. ಎತ್ತಿಕೊಳ್ಳಲೆಂದು ಜಗ್ಗಿದಳು. ಆದರೆ ಅನಂತರಾಮು ಅಳುತ್ತಲೆ ಶಾಂತಳನ್ನು ಇನ್ನೂ ಬಿಗಿಯಾಗಿ ಅಪ್ಪಿಕೊಂಡ. "ಬೇಡ ಸುಮ್ಮನಿರು, ನನ್ನ ಚಿನ್ನ, ಸುಮ್ಮನಿರೊ" ಎಂದು ಶಾಂತ ಸಮಾಧಾನ ಹೇಳಿದಳು. ಅನಂತರಾಮು ಆ ಕಡೆ ತಿರುಗಿ "ಅಮ್ಮ, ಅತ್ತ" ಎಂದು ತಾಯಿಯನ್ನು ಹೊಡೆಯುವಂತೆ ಕೈಬೀಸಿದ. ಶಾಂತಳಿಗೆ ನಗು ಬಂತು. ಲೀಲಾ ತಕ್ಷಣವೆ "ಇದನ್ನೇ ಕಲಿಸಿ ಕೊಡು: ತಾಯಿಯನ್ನು ಬಯ್ಯಲಿ, ತಾಯಿಯನ್ನು ಹೊಡೆಯಲಿ. ಅವನನ್ನು ನನ್ನಿಂದ ದೂರಮಾಡಿಬಿಟ್ಟರೆ ನಿನಗೆ ತೃಪ್ತಿ" ಎಂದುಬಿಟ್ಟಳು ಆಕ್ರೋಶದಲ್ಲಿ. ಈ ಮಾತು ಸಾಕಾಯಿತು, ಶಾಂತಳಿಗೆ. ಅವಳಿಗೂ ಸಹನೆ ಮೀರಿತ್ತು. ಆದರೆ ಈ ಆಘಾತವನ್ನೂ ಸಹಿಸಿಕೊಂಡು "ಅತ್ತಿಗೆ, ನಿನ್ನ ಮಗುವನ್ನು ನಾನೇನೂ ದೂರಮಾಡಿಲ್ಲ. ನೀನೆ ಅದನ್ನು ಯಾವಾಗಲೂ ನನ್ನ ಹತ್ತಿರದಿಂದ ದೂರವಾಗಿಟ್ಟಿದೀಯೆ. ಏನೋ ಆಡಿಕೊಳ್ತುತ್ತೆ, ನಗುತ್ತ ಹತ್ತಿರ ಬರುತ್ತೆ. ಬೀದಿಗೆ ಹೋಗಬೇಕೆಂದು ಅದಕ್ಕೂ ಆಸೆ. ಆದರೆ ನನ್ನ ಹತ್ತಿರ ಬಂದರೆ ಅದು ಕೆಟ್ಟಿತೆನ್ನುವ ಹಾಗೆ ಆಡುತ್ತಿ. ನಿನ್ನೆ ನಾನು ಚಾಕಲೇಟು ತಂದುಕೊಟ್ಟದ್ದಕ್ಕೆ ಹಾಳು ಮೂಳು ಅಂತ ಕಿತ್ತೆಸೆದೆ. ಒಳಗೆ ಆಮೇಲೆ ನೀನೇ ಚಾಕಲೇಟು ತಿನ್ನಿಸಿದೆ. ನಿನ್ನ ಮಗು, ನೀನು ಹೇಗೆ ಬೇಕಾದರೂ ಮಾಡಬಹುದು. ಆದರೆ ನನ್ನ ಹತ್ತಿರ ಬಂದರೆ ಯಾಕೆ ಹಾಗಾಡುತ್ತಿ?" ಎಂದಳು. ಅವಳ ದನಿಯಲ್ಲಿ ನೊಂದ ಭಾವವಿತ್ತು. ಲೀಲಾ ಈಗಲೂ ಶಾಂತ ತನ್ನ ಕೈಯಲ್ಲೆ ಮಗುವನ್ನಿಟ್ಟು ಕೊಂಡುದನ್ನು ನೋಡಿದಳು. ಇಷ್ಟಾದರೂ ಮಗುವನ್ನು ಕೆಳಕ್ಕಿಳಿಸಲಿಲ್ಲವಲ್ಲ ಎಂದು ಇನ್ನೂ ಉರಿಯಿತು ಮನಸ್ಸು. ಅಲ್ಲದೆ, ತನ್ನ ಮಗುವನ್ನು ತಾನು ಹೇಗೆ ಬೇಕಾದರೂ ನೋಡಿಕೊಳ್ಳುತ್ತೇನೆ, ಇವಳಿಗೇನು ಎನ್ನುವ ತಾತ್ಸಾರವೂ ಸೇರಿತು. ಬಿರುಸಾಗಿಯೇ "ಹೌದಮ್ಮ, ನಾವು ಕೆಟ್ಟವರು. ನಮಗೆ ಮಕ್ಕಳನ್ನು ಸಾಕುವುದೂ ಗೊತ್ತಿಲ್ಲ. ಆದರೆ ಏನೊ ನಮಗೆ ತಿಳಿದ ಹಾಗೆ ನಾವೂ ನೋಡಿ ಕೋತೇವೆ" ಎಂದಳು, ಕೊಂಕಿಸಿದ ಕತ್ತನ್ನು ಹಾಗೂ ಹೀಗೂ ಓಲಾಡಿಸಿ.

" ಹಾಗಲ್ಲ, ಅತ್ತಿಗೆ. ನಿನ್ನ ಮಗು ನಿನಗೆ ನೋಡಿಕೊಳ್ಳಲು ಬರುವುದಿಲ್ಲವೆ? ಆದರೆ ನನ್ನ ಬಳಿಗೆ ಬಂದಾಗಲೆಲ್ಲ—"

ಇನ್ನೂ ಅವಳು ಮುಗಿಸುವುದರಲ್ಲೆ ಲೀಲಾ ಬಾಯಿ ಹಾಕಿ " ನಿನ್ನ ಹತ್ತಿರಕ್ಕೆ ಮಗುವನ್ನು ಬಿಡಬೇಡ ಎಂದು ನಿಮ್ಮಣ್ಣನೆ ಹೇಳಿದ್ದಾರೆ" ಎಂದುಬಿಟ್ಟಳು. ಶಾಂತಳಿಗೆ ಇದಕ್ಕಿಂತ ಹೆಚ್ಚಿನ ಅನಿರೀಕ್ಷಿತ ಆಘಾತ ಬೇಕಿರಲಿಲ್ಲ. ದಿಕ್ಕುಗೆಟ್ಟಂತಾಯಿತು. ರಾಜಣ್ಣನೂ ಹೀಗೆ ಹೇಳಿದನೆ—ತನ್ನದೆಂತಹ ಜನ್ಮ ಎನಿಸಿತು. ಮಾತಿಲ್ಲದೆ ಅನಂತರಾಮುವನ್ನು ಕೆಳಕ್ಕಿಳಿಸಿದಳು. ಅವನು ಬಿಡಲೊಲ್ಲ. ಹಟ ಮಾಡಿದ. ಆದರೂ ಶಾಂತ ಬಿಗಿಯಾಗಿ ಅವನ ಕೈಗಳ ಹಿಡಿತ ಕಿತ್ತಳು. ಇದ್ದಕ್ಕಿದ್ದಂತೆ ಅನಂತರಾಮು ಅಳುತ್ತ ಕೆಮ್ಮಿದ. ಲೀಲಾ ತಕ್ಷಣ ಅವನನ್ನೆತ್ತಿಕೊಂಡು " ಕಾಯಿಲೆಯವರ ಹತ್ತಿರ ಹೋಗಬೇಡ ಅಂದರೆ ಕೇಳತೀಯಾ. ನನಗೇನು, ನಿನಗೂ ಏನಾದರೂ ರೋಗ ಬಂದು ಹಾಳಾಗಿಹೋಗು" ಎಂದಳು. ಸಿಡುಗುಟ್ಟುತ್ತ ಮಗುವನ್ನೆತ್ತಿಕೊಂಡು ರೂಮಿಗೆ ಹೊರಟುಹೋದಳು. ಶಾಂತಳ ಮನಸ್ಸು ಕುದಿಯಿತು. ಆದರೆ ಈಗ ಆ ಕುದಿ ಕಾರುವಂತಹುದಲ್ಲ. ಮಾವಿನ ಕಾಯಿ ಮಾಗುತ್ತ ಮಾಗುತ್ತ ಹುಳಿ ಒಗರು ಮಾಯವಾಗುವಂತೆ ಮನಸ್ಸು ಮಾಗುತ್ತ ಅದರ ಅಸಹನೆ, ಗಾರು ಮಾಯವಾಗುತ್ತಿತ್ತು. ತಲೆ ತಗ್ಗಿಸಿಕೊಂಡು ಡಾಕ್ಟರ ಮನೆಗೆ ಹೊರಟುಬಿಟ್ಟಳು. ಅವಳ ಕಣ್ಣೀರಿನಿಂದ, ಅನಂತರಾಮುವಿನ ಅಳುವಿನಿಂದ ಸೆರಗು ತೊಯ್ದುಹೋಗಿತ್ತು.

೭

ಶಾಂತ ಡಾಕ್ಟರ ಮನೆಗೆ ಹೋಗುವ ದಾರಿಯಲ್ಲಿ ಬಹಳ ಯೋಚನೆ ಅವಳನ್ನು ಕಾಡಿತು. ತಾನೆಂತಹ ಸುಟ್ಟ ಅದೃಷ್ಟದವಳು, ತನ್ನಿಂದಾಗಿ ಹೀಗೆ ಆ ಮಗುವಿಗೆ ಸುಮ್ಮನೆ ಏಟು ಬಿತ್ತಲ್ಲ. ಆದರೆ ತನಗೆ ಬಿದ್ದ ಪೆಟ್ಟು! ತಾನು ಆ ಮಗುವನ್ನು ತಾಯಿಯಿಂದ ದೂರವಿಡಲು ಯತ್ನಿಸಿದೆನೆಂಬ ಆರೋಪ! ಮಗು ತನಗೆ ಅಷ್ಟು ಹೊಂದಿಕೊಂಡುದು ತನ್ನ ತಪ್ಪೆ! ರಾಜಣ್ಣ ಕೂಡ ತನಗೆ ವಿರೋಧಿಯಾದನೆ! ತನ್ನ ಹತ್ತಿರಕ್ಕೆ ಮಗುವನ್ನು ಬಿಡಬೇಡವೆಂದು ಶಾಂತಳಿಗೆ ಅವನು ಹೇಳಿಹೋಗಿರುವನೆಂದಮೇಲೆ ತನ್ನ ಮೇಲೆ ಎಂತಹ ಭಾವನೆಯಿರಬೇಕು ಅವನಿಗೆ. ನಿನ್ನಿನ ರಾತ್ರಿ ಅವನು ಊರಿಗೆ ಹೊರಟುಹೋದ. ಎರಡು

ಮೂರು ದಿನ ಬಿಟ್ಟು ಮತ್ತೆ ಬರುವುದಾಗಿ ಲೀಲಳಿಗೂ, ತನ್ನ ತಾಯಿಗೂ ಹೇಳಿದ. ಆದರೆ ಶಾಂತಳಿಗೇನೂ ಹೇಳುವ ಗೋಜಿಗೆ ಹೋಗಿರಲಿಲ್ಲ. ಇಷ್ಟಕ್ಕೂ ತನಗೇಕೆ ಅವನು ಹೇಳಬೇಕೆನಿಸಿತು. ಶಾಂತಳಿಗೆ ತಾನು ಆ ಮನೆಯಲ್ಲಿ ಏನು ? ತನಗೆ ಇಲ್ಲಿ ಯಾವುದೂ ಜಾಗವಿಲ್ಲವೆಂದು ಈಗೀಗ ಖಚಿತವಾಗಿತ್ತು. ತಂದೆಯ ಮುಖ ಕಾಣುವುದೂ ಕಷ್ಟವಾಗಿತ್ತು. ತಾಯಿಯಂತೂ ಗೋಣಗಿನ ಮುಟ್ಟೆ. ಅಣ್ಣ ಅತ್ತಿಗೆ ತನಗೆ ಹೊರಗಿನವರಾದರು. ಅಂದಮೇಲೆ ತಾನೇ ಹೊರಗಿನವ ಳೆಂಬ ಭಾವನೆ ಚೆನ್ನಾಗಿ ಬೇರೂರಿತು. ಹಿಂದೆಂದೂ ಈ ಮನೆ ಬೇರೆಯದೆಂದಾ ಗಲಿ, ತಾನು ಈ ಮನೆಗೆ ಹೊರತಾದವಳೆಂದಾಗಲಿ ಅವಳಿಗೆ ಅನಿಸಿರಲಿಲ್ಲ. ಆದರೆ ಈ ಸಾರಿ ಕ್ಷಣಕ್ಷಣಕ್ಕೂ ಆ ಭಾವನೆ ತೀವ್ರವಾಗಿ ಮನಸ್ಸಿನ ಮೇಲೆ ಒತ್ತುತ್ತಿತ್ತು. ಬೆಣಚುಕಲ್ಲಿನ ಹಾಸುರಸ್ತೆಯ ಮೇಲೆ ನಡೆದಾಗ ಒಂದೊಂದು ಹೆಜ್ಜೆಗೂ ಕಲ್ಲು ಒತ್ತಿ ಕಾಲಿಗೆ ನೋವು ತೋರುವಂತೆ ಒಂದೊಂದು ಘಳಿಗೆ ಯಲ್ಲೂ ಶಾಂತಳಿಗೆ ಈ ಮನೆಯಿಂದ ತಾನು ಹೊರತಾದವಳು, ತಾನಿಲ್ಲಿ ಬೇಕಿಲ್ಲದವಳೆಂಬ ಭಾವನೆ ಬಂದಿತ್ತು. ಈ ಭಾವನೆ ಉಳಿದವರ ರೀತಿನೀತಿ ಯಲ್ಲಿ ಕಂಡಿತ್ತು. ತಾಯಿ ಸಾವಿತ್ರಮ್ಮನವರಿಗೇನೊ ತನ್ನಲ್ಲಿ ತುಂಬ ಪ್ರೀತಿ. ಆದರೆ ಅವರ ಪ್ರೀತಿ, ಅವರ ಅತಿ ಅಂತಃಕರಣವೆ ತನ್ನ ಸುಖಕ್ಕೆ ಮುಳುವಾಯಿ ತೆಂದು ಶಾಂತಳಿಗೆ ಗೊತ್ತು. ತಂದೆಯಂತೂ ಹಿಡಿದ ಹಟ ಬಿಡದವರು. ಅವರಂತೆಯೆ ತಾನೂ ಹಟ ಕಲಿತು ಹೀಗಾದುದು. ತಾನು ಹಟ ಮಾಡದೆ ಹೋಗಿದ್ದರೆ, ಬರಿಯ ಒಂದು ಕೆಣಕುಮಾತಿಗೆ ಕೆರಳದಿದ್ದಿದ್ದರೆ ಹೀಗಾಗು ತ್ತಿರಲೆ ಇಲ್ಲ. ತಾನು ಹಾಗೆ ಮಾಡಿದುದು ಶುದ್ಧ ತಪ್ಪು. ಈಗ ಇಲ್ಲಿ ಬಂದು ಸಿಕ್ಕಿಹಾಕಿಕೊಂಡಿದೇನೆ. ಹೇಳದೆ ಕೇಳದೆ ಹೊರಡುವಂತೆಯೂ ಇಲ್ಲ, ಇಲ್ಲಿದ್ದು ಬದುಕುವಂತೆಯೂ ಇಲ್ಲ. ಅಡಿಕೆ ಕತ್ತರಿಗೆ ಸಿಕ್ಕಿಕೊಂಡಂತೆ ಇಕ್ಕಟ್ಟಿಗೆ ಸಿಕ್ಕಿ ನರಳುವ ತನ್ನ ಹಾಳು ಸ್ಥಿತಿಗೆ ತಾನೇ ಕಾರಣ. ಹಾಗೆ ಹೇಳದೆ ಕೇಳದೆ ಬಂದುದ ರಿಂದ ಇಷ್ಟೆಲ್ಲ ಬಂದುದು. ತಾನೂ ಎಲ್ಲರಂತೆ ಗಂಡನ ಮನೆಯಿಂದ ನಗೆಮುಖ ತಂದುಕೊಂಡು ಬಂದಿದ್ದರೆ ಭಾಗೀರಥಿಯಂತೆ, ಸರಸಿಯಂತೆ ಬಾಣಂತನಕ್ಕೆಂದು ಬಂದಿದ್ದರೆ ತನಗೂ ಗೌರವವಿರುತ್ತಿತ್ತು. ವಿಶ್ವಾಸ, ಪ್ರೀತಿ ಎಲ್ಲವೂ ಸಿಗುತ್ತಿತ್ತು. ಆದರೆ ತಾನು ಬಂದುದು ಹೀಗೆ—ಇದರಿಂದ ಉಳಿದವರಿಗೂ ತನ್ನ ಬಗ್ಗೆ ಮಾತನಾಡಲು ಅವಕಾಶವಾಗಿತ್ತು. ಮಾತು—ಮೋಟಾರು ಬಂಡಿಯಂತೆ

ಧೂಳೆಬ್ಬಿಸಿಬಿಡುತ್ತದೆ. ಧೂಳು ದಿಕ್ಕುದಿಕ್ಕನ್ನು ಮುಚ್ಚಿಬಿಡುವಂತೆ, ಮೋಟಾರು ಕೂಡ ಮುಚ್ಚಿಹೋಗುತ್ತದೆ. ಅಂತೆಯೆ ಒಂದು ಮಾತು ಅಪವಾದದ ಧೂಳನ್ನೆಬ್ಬಿಸಿ ತಾನು ಮರೆಯಾಗುತ್ತದೆ. ಆ ಅಪವಾದ ಮಾತ್ರ ಆಕಾಶಕ್ಕೂ ನೆಲಕ್ಕೂ ನಡುವೆ ಸುಂಟರಗಾಳಿಯಂತೆ ನಿಂತುಬಿಡುತ್ತದೆ. ಅಂತಹ ಮಾತು ಬರಲು ಅವಕಾಶವನ್ನೆ ಕೊಡಬಾರದಾಗಿತ್ತು. ಆದರೆ ಈಗ ತಾನು ಧಿಗ್ಗನೆ ಬಂದುದೆ ಕಾರಣವಾಗಿತ್ತು, ಊಹಾಪೋಹಕ್ಕೆ. ಕೆಟ್ಟ ನೀರಿಗೆ ಬೆರೆತ ಒಳ್ಳೆಯದೂ ಕೆಟ್ಟದಾಗುವಂತೆ ಮೊದಲೆ ಅಸಹನೆಯ ಜನಕ್ಕೆ ಊಹಾಪೋಹ, ತಾನು ಬಂದ ರೀತಿ—ಎಲ್ಲವೂ ಸೇರಿ, ಜತೆಗೆ ತನ್ನ ಮೌನವೂ ಬೆರೆತು ತನಗೆ ಆ ನಾರು ಬಡಿಯಲಾರಂಭಿಸಿತು—ಅಷ್ಟೊಂದು ಕೆಟ್ಟಿತ್ತು ಅವರ ಮನಸ್ಸು. ತನ್ನ ಅತ್ತಿಗೆ, ಅಣ್ಣ ಇಬ್ಬರೂ ತನ್ನವರೆನಿಸಿಕೊಂಡವರು ಕೂಡ ತನ್ನ ಒಳ್ಳೆಯತನವನ್ನು ತಮ್ಮ ಕೆಟ್ಟ ನಡೆಗೆ ಬೆರಸಿ ತನ್ನನ್ನು ದಂಡಿಸಿದರಲ್ಲ—ಇಷ್ಟೇ ಪ್ರಪಂಚವೆಲ್ಲ! ಅದಕ್ಕೇ ಪುರಂದರದಾಸರು ಹೇಳಿದುದು 'ಯಾರಿಗೆ ಯಾರುಂಟು ಎರವಿನ ಸಂಸಾರ, ನೀರ ಮೇಲಣ ಗುಳ್ಳೆ ನಿಜವಲ್ಲ' ಅಂತ, ಎಂದುಕೊಂಡಳು ಶಾಂತ. ಲೀಲಾ ಹೀಗಾಡಿಬಿಟ್ಟಳು. ಇನ್ನು ಮನೆಯಲ್ಲಿ ತಾನಿರುವುದು ಬಹಳ ಕಷ್ಟವೆನಿಸಿತು ಶಾಂತಳಿಗೆ. ಜತೆಗೆ ತಾಯಿ ಏನೂ ಮಾಡಲಾರದ ನಿಸ್ಸಹಾಯೆ. ರಾಜಣ್ಣನೆ ಹಾಗೆ ಹೇಳಿದನೆಂದಮೇಲೆ ತನ್ನ ತಾಯಿ ಏನು ತಾನೆ ಮಾಡಿಯಾಳು? ಈಗ ಮೂರು ದಿನವೊ ನಾಲ್ಕು ದಿನವೊ ಊರಿನಲ್ಲಿರುವುದಿಲ್ಲ ಅವನು. ಬಂದಮೇಲೆ ಏನು ಗತಿ! ಹೇಗೆ ತಾನೆ ಏಗುವುದು ತಾನು. ಕೊಟ್ಟಿಗೆಯಲ್ಲಿ ಹಾಯಾಗಿ ಮೇಯುತ್ತಿದ್ದ ಹಸು ಇದ್ದಕ್ಕಿದ್ದಂತೆ ತಾನಾಗಿಯೆ ಹಗ್ಗ ಕಿತ್ತುಕೊಂಡು ಓಡಿಬಂದು ಮಾರಿಯ ಮನೆ ಸೇರಿದಂತಾಗಿತ್ತು, ತನ್ನ ಪರಿಸ್ಥಿತಿ. ಈಗೇನು ಮಾಡಲೆಂದು ಬಹಳ ಯೋಚನೆಯಾಯಿತು ಶಾಂತಳಿಗೆ. ಇದರೊಂದಿಗೆ ಇಷ್ಟು ದಿನವೂ ಮೇಲೇಳದಿದ್ದ ಭಾವನೆಗಳೂ ಮೆಲ್ಲನೆ ಕಲಕಲಾರಂಭಿಸಿದವು. ಅನಂತುವನ್ನೆತ್ತಿಕೊಂಡಾಗ ಆಗುತ್ತಿದ್ದ ಆನಂದ, ಹಾಯಿಯೆಲ್ಲ ತನ್ನ ಯಜಮಾನರ ಸಾನ್ನಿಧ್ಯವನ್ನು ನೆನಪಿಗೆ ತರುತ್ತಿದ್ದವು. ಅವರನ್ನು ಮತ್ತೆ ನೋಡಬೇಕು, ಅವರೊಂದಿಗೆ ಇರಬೇಕು, ಅವರ ನಯವಾದ ಜೇನಿನಂತಹ ಮಾತುಗಳನ್ನು ಸವಿಯಬೇಕು, ಅವರ ನೇವರಿಕೆ ತನಗೆ ಬೇಕೆಂಬ ಹಂಬಲ ತೀವ್ರವಾಗಿ ಹೃದಯದಲ್ಲಿ ಏಳುತ್ತಿತ್ತು. ನಾದಿನಿ ವಸಂತುವಿನ

ಜತೆಯಂತೂ ಈಗ ಬಯಕೆಯೆ ಆಗಿಹೋಯಿತು. ನಾದಿನಿಯ ಪುಟ್ಟ ಪುಟ್ಟ ಪ್ರೀತಿಯ ಮಾತುಗಳಿಗಾಗಿ ಕಿವಿ ಹಾತೊರೆಯುತ್ತಿತ್ತು. ಹೃದಯ ಬಿಕ್ಕೋ ಎನಿಸಿತು. ಅತ್ತೆಯವರ ಪ್ರೀತಿ, ವಾತ್ಸಲ್ಯಗಳು ತನ್ನನ್ನು ಹೇಗೆ ಕಾಪಿಟ್ಟವು ತನಗೆ ರಕ್ಷೆಯಾಗಿತ್ತೆಂಬುದನ್ನು ಈಗ ಅವಳು ಮನಗಂಡಳು. ಮತ್ತೆ ಮನಸ್ಸು ಹಾತೊರೆಯಿತು. ಪಂಜರದಲ್ಲಿ ಸಿಕ್ಕಿದ ಹಕ್ಕಿ ಹಾರಾಡಲು ಹವಣಿಸುವಂತೆ ಅವಳ ಹೃದಯ ಇಲ್ಲಿಂದ ತಪ್ಪಿಸಿಕೊಂಡು ಅಲ್ಲಿಗೆ ಪೊರಟುಹೋದರೆ ಸಾಕೆಂದು ತಹತಹಿಸಿ ಹಂಬಲಿಸಿತು. ತಾನು ಅಲ್ಲಿಂದ ಹಾಗೆ ಬಂದುದು ತಪ್ಪೆನ್ನುವ ಭಾವನೆ ಮೊದಲೇ ಇದ್ದರೂ ಅವಳ ಅಭಿಮಾನ ಹಟದ ಪರವಾಗಿ ವಾದಿಸಿತ್ತು. ಆದರೆ ಶಂಕರಮ್ಮನ ದಾಳಿ, ತಾಯಿಯ ಮಾತಿನ ಅನಿರೀಕ್ಷಿತ ಆಘಾತ, ರಾಜಣ್ಣ ಲೀಲಾ ಇವರ ಅಸಾಧು ನಡತೆ, ಭಾಗೀರಥಿ ತೋರಿದ ತಾತ್ಸಾರ ಎಲ್ಲ ಅವಳ ಅಭಿಮಾನವನ್ನು ಹಣ್ಣು ಮಾಡಿದ್ದವು. ಡಾಕ್ಟರು ಆಡಿದ ಕರುಳಿನ ಮಾತು ಅವಳ ಈ ಸುಪ್ತಚೇತನವನ್ನು ಎಬ್ಬಿಸಿತ್ತು, ಈಗ ತನ್ನವರ ಮನೆಯ ಕಡೆಗೆ ಮನಸ್ಸು ವಾಲಿತ್ತು. ಆದರೆ ಇದ್ದುದಿದ್ದಂತೆ, ಅಕಾರಣವಾಗಿ ಹೊರಡುವುದೂ ಸಾಧ್ಯವಿಲ್ಲ. ಆಮೇಲೆ ಆಡುವ ಬಾಯಿಗಳಿಗೆ ಮತ್ತೆರಡು ನಾಲಗೆ ತಂದುಕೊಟ್ಟಂತಾಗುತ್ತದೆ ಎಂದುಕೊಂಡಳು.

ಇದರ ಜತೆಗೆ ಇನ್ನೊಂದು ಚಿಂತೆ ಬಂದು ಉಳಿದೆಲ್ಲವನ್ನೂ ಆ ಗಳಿಗೆ ಹಿಂದೂಡಿತು. ಅದು ಸರಸಿಯದು. ಸರಸಿಯೇನೊ ತನ್ನ ಹಳೆಯ ಸ್ನೇಹಿತೆ. ಚಿಕ್ಕಂದಿನಿಂದ ಜತೆಯಲ್ಲಿ ಬೆಳೆದು ಆಡಿದವರು. ಸರಸಿಯ ತಂಗಿ ಶಾಂತಳ ಜತೆಯವಳು. ಸರಸಿ ಶಾಂತಳಿಗಿಂತಲೂ ಎರಡು ವರ್ಷ ದೊಡ್ಡವಳಿರಬಹುದು. ಅವಳ ತಂಗಿ ಟೈಫಾಯಿಡ್‌ನಲ್ಲಿ ಸತ್ತುಹೋಗಿದ್ದಳು, ಚಿಕ್ಕತನದಲ್ಲೆ. ಅದಾದ ಹದಿನೈದು ದಿನಕ್ಕೆ ಶಾಂತಳಿಗೂ ಟೈಫಾಯಿಡ್ ಬಂದು ಡಾಕ್ಟರು ಬಹಳ ಕಷ್ಟದಿಂದ ಅವಳನ್ನು ಬದುಕಿಸಿದ್ದರು. ಎಂದೂ ಸರಸಿ ಕೇಡಿಗತನದ ಮಾತಾಗಲಿ ಕುಹಕಿಯ ಮಾತಾಗಲಿ ಆಡಿರಲಿಲ್ಲ. ಶಾಂತಳಿಗೆ ಮದುವೆಯಾದಾಗ ಸರಸಿ ಅದಕ್ಕಾಗಿ ಗಂಡನ ಮನೆಯಿಂದ ಬಂದಿದ್ದಳು. ಅಂತಹ ಸರಸಿ ಈಗ ತನ್ನನ್ನು ಹೇಗೆ ಮಾತಾಡಿಸುವಳೊ ಎಂಬ ಶಂಕೆ ಶಾಂತಳಿಗೆ ಬಂತು. ಭಾಗೀರಥಿಯೂ ಒಳ್ಳೆಯ ಸ್ನೇಹಿತೆ ಎನಿಸಿಕೊಂಡಿದ್ದಳು. ಆದರೆ ಅವಳ ರೀತಿ ಈಗ ವಿಪರೀತವಾಗಿತ್ತು. ಹಾಗೆಯೆ ಸರಸಿಯೂ ಆಗಿಬಿಟ್ಟಿದ್ದರೆ, ಎಂದು ಒಂದು ಗಳಿಗೆ

ಮಿಸುಕಾಡಿದಳು ಶಾಂತ. ತನ್ನ ದುರದೃಷ್ಟ, ತನ್ನ ಸ್ಥಿತಿ ಈಗ ಹಾಗಾಗಿದೆ. ಆದ್ದರಿಂದ ಯಾರು ತನ್ನನ್ನು ಎಷ್ಟು ಹೀನಾಯವಾಗಿ ಕಂಡರೂ ಏನೂ ಆಶ್ಚರ್ಯವಿಲ್ಲವೆನಿಸಿತು. ಈಗ ದುಃಖಕ್ಕಿಂತಲೂ ಹೆಚ್ಚು ತನ್ನಲ್ಲೆ ತನಗೆ ಕುಂದು ಕಾಣಿಸಿ ತಿರಸ್ಕಾರ ಬರುತ್ತಿತ್ತು. ಕೋಪಕ್ಕಿಂತಲೂ ಮಿಗಿಲಾಗಿ ಕಲಕಾಟ ವಾಗಿ ಪಶ್ಚಾತ್ತಾಪವೇರುತ್ತಿತ್ತು. ಹುಂ! ಸರಸಿಯೂ ಹಾಗೆಯೆ ಮಾತಾಡಿದರೆ ಆಡಲಿ. ಸಾವಿರದ ಜತೆಗೆ ಇವಳೂ ಸಾವಿರದೊಂದು ಅಷ್ಟೆ, ಎಂದು ಮನಸ್ಸಿನ ವಿಕಲತೆಯನ್ನು ದೂಡಿಬಿಡಲು ಯತ್ನಿಸಿದಳು. ಆದರೆ ಅಷ್ಟು ಸುಲಭವಾಗಿ ಒಪ್ಪುವಂತಹುದಲ್ಲ ಆ ಚಿಂತೆ. ಸರಸಿ ತನ್ನನ್ನು ವಿಶ್ವಾಸದಿಂದಲೆ ಕಾಣಬಹುದು. ಡಾಕ್ಟರು ನಿನ್ನೆ ಎಷ್ಟು ಮೃದುವಾಗಿದ್ದರು. ಸರಸಿ ಕೂಡ ಹಾಗೆಯೆ ಆದ್ದರಿಂದ ಏನೂ ಹೆದರುವ ಕಾರಣವಿಲ್ಲವೆಂದೂ ಒಂದು ಗಳಿಗೆ ಅನಿಸಿತು. ಹೀಗೆ ಇಬ್ಬದಿಗೊಂಡ ಮನಸ್ಸಿನ ಚಿಂತೆಯಲ್ಲಿ ದಾರಿ ಸಾಗುವುದು ಕೂಡ ಸರಿಯಾಗಿ ಅವಳ ಗಮನಕ್ಕೆ ಬರಲಿಲ್ಲ. ಸರಸಿಯ ಮನೆಯ ರಸ್ತೆ ದಾಟಿ ಎರಡು ರಸ್ತೆ ಮುಂದೆ ಬಂದಿದ್ದಳು. ಎದುರಿಗೆ ಯಾವುದೊ ಮೋಟಾರು ಹಾರ್ನ್ ಮಾಡಿದ ಸದ್ದು ಕೇಳಿ ಎಚ್ಚರಗೊಂಡಳು. ತನ್ನ ತಿಳಿಗೇಡಿತನದ ಮರವಿಗೆ ನಗು ಬಂತು. ಮತ್ತೆ ಹಿಂದಕ್ಕೆ ಹೋಗಿ ಅವರ ಮನೆಯ ರಸ್ತೆಯಲ್ಲಿ ತಿರುಗಿಕೊಂಡಳು. ಎದೆ ಮಾತ್ರ ಬೇಡಬೇಡವೆಂದರೂ ಜೋರಾಗಿ ಹೊಡೆದುಕೊಳ್ಳುತ್ತಿತ್ತು.

ಶಾಂತಳನ್ನು ಹೇಗೆ ಮಾತಾಡಿಸಬೇಕೊ ಸರಸಿಗೆ ಗೊತ್ತಾಗಲಿಲ್ಲ. ಶಾಂತಳಿಗೂ ಹೇಗೆ ನಡೆದುಕೊಳ್ಳಬೇಕೆಂದು ತಿಳಿಯಲಿಲ್ಲ. ಮಾತನ್ನು ಹೇಗೆ ಆರಂಭಿಸಬೇಕೆಂಬುದೆ ಇಬ್ಬರಿಗೂ ಸಮಸ್ಯೆಯಾಗಿತ್ತು. ಸರಸಿಗಂತೂ ಏನು ಮಾಡಲೂ ತೋರಲಿಲ್ಲ. ಸುಮ್ಮನೆ ಏನೂ ಆಗದವಳಂತೆ ನಡೆದುಕೊಂಡರೆ ಅಪಾರ್ಥಕ್ಕೆಡೆಯಾಗುತ್ತದೆ. ತಿಳಿದೂ ತಿಳಿಯದವಳಂತೆ ನಟಿಸುತ್ತಿದ್ದಾಳೆಂದು ಕೊಂಡರೆ! ಹಾಗೆಂದರೆ ಎಲ್ಲ ತಿಳಿದವಳಂತೆ ಸಹಾನುಭೂತಿಯ ಮುಖ ತೋರಿದರೆ—ಆಗ ಕೂಡ ಏನೆಂದುಕೊಳ್ಳುವಳೊ—ಎಂದು ಸರಸಿ ಬಹಳ ಒದ್ದಾಡಿದಳು. ಶಾಂತ ಒಳಕ್ಕೆ ಬರುವಾಗ ಒದ್ದಾಡುತ್ತಿದ್ದುದು ಯಾರಿಗಾದರೂ ತಿಳಿಯುತ್ತಿತ್ತು. ಎಷ್ಟು ಸಾಧ್ಯವೊ ಅಷ್ಟು ಸಹಜವಾಗಿ " ಬಾ, ಶಾಂತ " ಎಂದಳು ಸರಸಿ.

ಶಾಂತಳೂ ಸಾಧ್ಯವಾದಷ್ಟು ತನ್ನ ಮನಸ್ಸಿನ ಕಡೆತವನ್ನು ತಡೆದು

ಕೊಂಡು " ಏನು ಸರಸಿ, ಯಾವಾಗ ಬಂದೆ. ನಿನ್ನೆ ಸಂಜೆ ಬರುತ್ತೀ ಅಂತ ನಿಮ್ಮ ತಂದೆ ಹೇಳಿದರು " ಎಂದಳು.

" ಹೂಂ. ನಿನ್ನೆ ಸಂಜೆ ಬಂದೆ. ರಾತ್ರಿಯೇ ಅಪ್ಪ ಹೇಳಿದರು, ನಾಳೆ ನೀನು ಬರುತ್ತೀ ಅಂತ. ಕೂತುಕೊಳ್ಳೋಣ ಬಾ, ನನ್ನ ರೂಮಿನಲ್ಲಿ " ಎಂದು ಸರಸಿ ಶಾಂತಳನ್ನು ತನ್ನ ರೂಮಿಗೆ ಕರೆದೊಯ್ದು ಕೂಡಿಸಿದಳು. ಅಷ್ಟರಲ್ಲಿಯೆ ಸರಸಿಯ ತಾಯಿ ಕೂಡ ಬಂದರು. ಕೊಂಚವಾದರೂ ಬದಲಿಲ್ಲದೆ, ಎಂದಿನಂತೆ ಮೃದುವಾಗಿ ಪ್ರೀತಿಯಿಂದ " ಏನಮ್ಮ ಶಾಂತ, ಊರಿಗೆ ಬಂದರೆ ಈವತ್ತೆ ಮುಖ ತೋರಿಸೋದು ? ನಿನ್ನೆ ಅವರು ಹೇಳುವ ಹೊತ್ತಿಗೆ ಗೊತ್ತಾಯಿತು. ಇಲ್ಲದಿದ್ದರೆ ನೀನು ಬಂದುದೆ ಗೊತ್ತಾಗತಾ ಇರಲಿಲ್ಲ. ಆರೋಗ್ಯವಾಗಿದೀಯಾ ? " ಎಂದರು.

" ಆರೋಗ್ಯವಾಗಿದ್ದರೆ ಅಪ್ಪನ ಶಾಪಿಗೆ ಯಾಕಮ್ಮ ಬರೆತಾ ಇದ್ದಳು ? " ಎಂದು ಸರಸಿ ನಕ್ಕಳು.

ಅವಳ ಮಾತಿಗೆ ಎಲ್ಲರೂ ನಕ್ಕರು. ಈ ನಗೆಯಿಂದ ಸಂಕೋಚದ ತೆರೆ ಕೊಂಚ ಕರಗಿತು. ಶಾಂತಳಿಗೂ ಹೆಪ್ಪುಗಟ್ಟಿದ್ದ ಭಯ ಕರಗಿತು—ಆದರೆ ಪೂರ್ತಿ ಮಾಯವಾಗಿರಲಿಲ್ಲ.

" ಮೂರು ತಿಂಗಳಾಗಿದೆಯಂತ ಕಾಣುತ್ತೆ. ಅಲ್ಲವೆ ಶಾಂತ ? " ಎಂದರು ಸರಸಿಯ ತಾಯಿ.

" ಹುಂ " ಎಂದು ತಲೆತಗ್ಗಿಸಿ ಹೂಂಗುಟ್ಟಿದಳು ಶಾಂತ.

" ನೋಡಮ್ಮ , ಮೊದಲು ಮೊದಲು. ಹಸಿ ಮೈ ಚೆನ್ನಾಗಿ ನೋಡಿಕೊಳ್ಳಬೇಕು. ಇಲ್ಲದಿದ್ದರೆ ಬಹಳ ಕಷ್ಟವಾಗುತ್ತೆ. ಏನೊ ದೇವರ ದಯದಿಂದ, ನಮ್ಮ ಪುಣ್ಯದಿಂದ ನಮಗೂ ಮಕ್ಕಳಾಗುತ್ತೆ. ಅವುಗಳನ್ನು ಹೊಟ್ಟೆಯಲ್ಲಿರುವಾಗಲೂ ಚೆನ್ನಾಗಿ ನೋಡಿಕೊಳ್ಳಬೇಕು. ಆಮೇಲೂ ಚೆನ್ನಾಗಿ ನೋಡಿಕೊಳ್ಳಬೇಕು. ನಮ್ಮ ಕೈಲಾದಷ್ಟು ನಾವು ಚೆನ್ನಾಗಿ ಆರೋಗ್ಯವಾಗಿದ್ದು ಅವುಗಳನ್ನು ಕಾಪಾಡಿಕೊಳ್ಳಬೇಕು. ನಮ್ಮ ಪುಣ್ಯವಿದ್ದರೆ ನಮಗಾಗಿಯೆ ಉಳಕೊಳ್ಳುತ್ತವೆ. ಇಲ್ಲದಿದ್ದರೆ—ಇಲ್ಲ. ನಮ್ಮ ಸುಂದರು ಇದ್ದಿದ್ದರೆ ನಿನ್ನ ಜತೆ—" ಎಂದು ಮಗಳನ್ನು ನೆನೆದು ಅವರೂ ಕಣ್ಣೀರು ಕರೆದರು.

ಶಾಂತಳಿಗೂ ಸರಸಿಗೂ ಕಣ್ಣಿನಲ್ಲಿ ನೀರು ಹನಿಯಿತು. ತುಂಬು ಮೌನ

ಆ ಕೋಣೆಯನ್ನಾವರಿಸಿತು. ಒಂದು ನಿಮಿಷ ಯಾರೂ ಮಾತೇ ಆಡಲಿಲ್ಲ. ಆಮೇಲೆ ಸರಸಿಯ ತಾಯಿ ಸೆರಗಿನಿಂದ ಕಣ್ಣೊರಸಿಕೊಳ್ಳುತ್ತಿದ್ದವರು ಮಾತಾಡ ಲಾರಂಭಿಸಿದರು :

" ನಿನ್ನೆ ಅವರು ಹೇಳಿದರು, ಶಾಂತ ಬಂದಿದಾಳೆ. ಮೂರು ತಿಂಗಳು ತುಂಬಿದೆ. ಆದರೆ ಮನಸ್ಸಿಗೇನೊ ಯೋಚನೆ ಹಚ್ಚಿಕೊಂಡು ಕೊರಗತಿದಾಳೆ, ಅಂತ. ಅವರೂ ಕಣ್ಣಲ್ಲಿ ನೀರು ಹಾಕಿಕೊಂಡರು. ಬಹಳ ತೆಗೆದು ಹೋಗಿದಾಳೆ ಅಂತ ನೊಂದುಕೊಂಡರು. ಹಸಿ ಮೈ, ಹಾಗೆಲ್ಲ ಕೊರಗತಾ ಇದ್ದರೆ ತಡಿಯೋ ದಿಲ್ಲಮ್ಮ. ದೇವರ ದಯದಿಂದ ಸುಖವಾಗಿ ಹೆತ್ತು ಕಳಕೊಳ್ಳಬೇಕು "ಎಂದರು. ಅವರ ದನಿಯಲ್ಲಿ ಅವರ ಪ್ರೀತಿಯೆಲ್ಲವೂ ಹರಿಯಿತು. ತಾಯಿಹಸು ತನ್ನ ಕರುವನ್ನು ನೆಕ್ಕುವಾಗಿನ ಕಣ್ಣಿನ ಪ್ರೀತಿ ಸರಸಿಯ ತಾಯಿಯ ಮುಖದಲ್ಲಿ ಆಗ ಕಾಣಿಸಿತು. ಶಾಂತಳಿಗೆ ಈ ಪ್ರೀತಿಯಿಂದ ತನ್ನ ಅತ್ತೆಯ ಮನೆಯ ನೆನಪು ಬಲವಾಗಿ ಬಂದು ದುಃಖವನ್ನು ಬೆದಕಿತು. ತಡೆದರೂ ನಿಲ್ಲದಂತೆ ಅಳು ಬಂದಿತು. ಸರಸಿಯ ತಾಯಿ ಹೊರಡಲು ಸಿದ್ಧರಾಗಿ ಇನ್ನೆರಡು ಮಾತು ಹೇಳಿದರು :

" ಯಾಕೆ ಹೇಳಿದೆ ಅಂದರೆ, ನೀನು ಬೇರೆಯಲ್ಲ, ನನ್ನ ಮಗಳು ಬೇರೆಯಲ್ಲ, ಶಾಂತ. ಸರಸಿಗೆ ನೀನೊಬ್ಬಳು ತಂಗಿ ಅಂದುಕೊಂಡಿದೀನಿ. ಏನೊ ಕರುಳು ಚುರಕ್ಕಂತು ಹೇಳಿಬಿಟ್ಟೆ. ಹೋಗಲಿ, ನೀವು ಮಾತಾಡಿ, ಸರೀಕರು. ನಾನು ಹೋಗಿ ಕಾಫಿ ಮಾಡತೀನಿ."

" ಬೇಡ ಅತ್ತೆ, ಕಾಫಿ ಯಾಕೆ " ಎಂದಳು ಶಾಂತ. ಅವರನ್ನು ಚಿಕ್ಕಂದಿ ನಿಂದಲೂ ಅತ್ತೆಯೆಂದು ಕರೆದು ರೂಢಿ. ಆದರೆ ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಅವರು ಹೊರಟು ಹೋದರು. ತಾಯಿಗಿಲ್ಲದ ವಾತ್ಸಲ್ಯ ಇವರಿಗೆ--ಎನಿಸಿ, ಮತ್ತೆ ಶಾಂತಳ ಹೃದಯ ತೊಯ್ದಿತು.

ಒಂದು ಗಳಿಗೆಯನಂತರ ಸರಸಿ ತಾನೇ ಮಾತಾಡಲಾರಂಭಿಸಿದಳು : " ಅಪ್ಪ ನಿನ್ನೆ ಹೇಳಿದರು, ನಿನ್ನ ಮನಸ್ಸಿನಲ್ಲಿ ಕೊರಗು ಹತ್ತಿಸಿಕೊಂಡಿದೀಯ ಅಂತ. ಅಮ್ಮನ ಹತ್ತಿರ ಹೇಳಿದ್ದರಂತೆ—ನಿನಗೆ ಅತ್ತೆಯ ಮನೆಯಲ್ಲಿ ಚೆನ್ನಾಗಿಲ್ಲ ಅಂತ. ನಿಜವೆ? ನೋಡು, ಶಾಂತ. ನನ್ನಲ್ಲಿ ನೀನು ಏನೂ ಬಚ್ಚಿಡಬೇಡ " ಎಂದಳು ಸರಸಿ.

ಅವಳ ಮುಖದಲ್ಲಿ ಮಿಂಚುತ್ತಿದ್ದ ಪ್ರೀತಿಯೆ ಸಾಕಾಯಿತು, ಶಾಂತಳ ಹೃದಯವನ್ನು ಕಡೆಯಲು. ಬಿಕ್ಕಿಬಿಕ್ಕಿ ಅಳಲಾರಂಭಿಸಿಬಿಟ್ಟಳು. ಸರಸಿಯೂ ಅವಳನ್ನು ಮೊದಲು ಸಮಾಧಾನಗೊಳಿಸಲು ಯತ್ನಿಸಲಿಲ್ಲ. ಅತ್ತರೆ ಸಮಾಧಾನ ಸಿಗುವುದೆಂದು ಅವಳಿಗೆ ಗೊತ್ತು. ಆದಕ್ಕಾಗಿ ಕೊಂಚ ಕಾಲ ಸುಮ್ಮನಿದ್ದಳು. ಆಮೇಲೆ ಮೆಲ್ಲನೆ ಒಳ್ಳೆಯ ಮಾತುಗಳನ್ನಾಡಿ ಶಾಂತಳನ್ನು ಮಾತನಾಡುವಷ್ಟು ಸಮಾಧಾನದ ಸ್ಥಿತಿಗೆ ತಂದಳು. ನಿಧಾನವಾಗಿ ಶಾಂತ ತನ್ನ ಈಗಿನ ಸ್ಥಿತಿಯನ್ನೂ ತಾನು ಮೈದುನನೊಂದಿಗೆ ಜಗಳವಾಡಿಕೊಂಡು ಆ ಕ್ಷಣದ ಆಕ್ರೋಶದಲ್ಲಿ ಮನೆ ಬಿಟ್ಟು ಬಂದುದನ್ನೂ ಹೇಳಿದಳು. ತನ್ನ ಮೇಲೆ ಹೇಗೆ ಶಂಕರಮ್ಮ ಅಪವಾದ ಹರಡಿದಳೆಂಬುದನ್ನೂ ಹೇಳಿದಳು. ಸರಸಿ ಎಲ್ಲವನ್ನೂ ಸಾವಧಾನವಾಗಿಯೆ ಕೇಳಿಕೊಂಡಳು.

"ಅಂತಹ ಅತ್ತೆ ಸಿಕ್ಕಿದುದು ನಿನ್ನ ಪುಣ್ಯ, ಶಾಂತ. ನನಗೆ ಅತ್ತೆಯಿಲ್ಲವಲ್ಲಾ ಎಂದು ನಾನು ಕೊರಗುತ್ತಿದೇನೆ" ಎಂದಳು.

"ಅತ್ತೆಯೊಬ್ಬರೆ ಅಲ್ಲ, ಸರಸಿ. ಅಂತಹ ಅತ್ತೆಯ ಮನೆ ಸಿಕ್ಕಿದುದೇ ನನ್ನ ಭಾಗ್ಯ. ಆದರೆ ಅದನ್ನು ಸರಿಯಾಗಿ ಉಳಿಸಿಕೊಳ್ಳುವ ಪುಣ್ಯ ನನಗಿಲ್ಲ" ಎಂದು ಶಾಂತ ಮತ್ತೆ ಮುಸುಗುಟ್ಟಿದಳು.

"ನೋಡು, ಶಾಂತ. ನಾನು ಒಂದು ಮಾತು ಹೇಳುತ್ತೇನೆ ಕೇಳು. ನೀನು ಮಾಡಿದುದು ತಪ್ಪು. ಅದು ನಿನಗೂ ಗೊತ್ತಿದೆ. ಓಲೆ ಹಾಕಿಕೊಂಡಾಗ ಕಿವಿಗೆ ಚುಚ್ಚಿದರೆ, ಆ ಕೋಪಕ್ಕೆ ಕಿವಿಯನ್ನೇ ಹರಿದು ಹಾಕಿಬಿಡುವರೇನೆ? ನೀನು ಮಾಡಿದ್ದು ಅದೇ ತರಹ, ನೋಡು."

"ಆದರೆ, ನನ್ನದು ಮಾತ್ರ ತಪ್ಪಲ್ಲ. ಅವನು ಹಾಗೆ ಎಗರಾಡಿದನಲ್ಲ, ಅವನದೂ ತಪ್ಪಲ್ಲವೆ?" ಅರೆಮನಸ್ಸಿನಿಂದಲೆ ತನ್ನನ್ನು ತಾನು ಸರಿಯೆಂದು ತೋರಿಸಿಕೊಳ್ಳುವ ಪ್ರಯತ್ನ ನಡೆಸಿದಳು ಶಾಂತ. ಅದು ಬರಿಯ ಸೋಗು, ಹಿಂದೆ ಸತ್ವವಿಲ್ಲವೆಂದು ಯಾರಾದರೂ ಹೇಳಿಬಿಡಬಹುದಾಗಿತ್ತು. ಅದು ಅಷ್ಟು ಒಡಕಾಗಿತ್ತು.

"ನೋಡಮ್ಮ, ನೀನೇ ಹೇಳುತ್ತೀಯೆ. ನಿನ್ನ ಮೈದುನನಿಗೆ ನಿನ್ನನ್ನು ಕಂಡರೆ ಬಹಳ ಪ್ರೀತಿ ಅಂತ."

"ಎಲ್ಲರಿಗೂ ನಾನು ಪ್ರಾಣಕ್ಕೆ ಪ್ರಾಣದಂತಿದೇನೆ, ಸರಸಿ."

" ಅಂದಮೇಲೆ ಏನೋ ನಾಲ್ಕು ಮಾತಂದಿರಬಹುದು ಅವನು, ಆ ಸಮಯದಲ್ಲಿ. ಅದನ್ನು ನೀನು ಅತಿ ಮಾಡಿಕೊಂಡುಬಿಟ್ಟರೆ ನಿನ್ನದೇ ತಪ್ಪು."

" ಆಗರೆ ಅವನು ಹಾಗೆಲ್ಲ ಮಾತಾಡಿದ್ದು, ಅಲ್ಲದೆ ಅತ್ತೆಯವರು ನನ್ನನ್ನು ಹೋಗಬೇಡ ಅಂತ ನಿಲ್ಲಿಸಿದಾಗ ಕುಹಕವಾಗಿ, ವ್ಯಂಗ್ಯವಾಗಿ ಆಡಿದ್ದು ಸರಿಯೆ ? "

ಶಾಂತಳಿಗೆ ಅದನ್ನು ಹೇಳುತ್ತಿದ್ದಂತೆ, ಯಾಕೆ ಇದನ್ನು ಹೇಳಿದೆನೊ ಎನಿಸಿತು. ಇದಕ್ಕೆ ಉತ್ತರ ಬಾರದಿದ್ದರೆ ತನಗಿದ್ದ ಆಸರೆಯೆಲ್ಲ ಒಡೆದಂತಾದೀತೇನೊ ಎಂದು ಗಾಬರಿಯಾದಳು.

" ಅವನು ಹಾಗಂದುದು ಸರಿಯೆಂದು ನಾನು ಹೇಳುವುದಿಲ್ಲ. ಆದರೆ ಆ ಸಮಯದಲ್ಲಿ ಅವನಿಗೆ ಹಾಗನ್ನಿಸಿತು. ಹಾಗನ್ನಿಸಲು ಕಾರಣವೂ ಇತ್ತು. ಆದ್ದರಿಂದ ಆ ಸಂದರ್ಭ ಯೋಚಿಸಿದರೆ ಅವನು ಆವಾಗ ಹಾಗೆ ಆಡಿದ್ದೆ ಸರಿ ಎನ್ನಿಸುತ್ತೆ. ಈಗ—ಅವನಿಗೆ ನಿನ್ನಿಂದ ಆ ಕ್ರಿಕೆಟ್ ಮ್ಯಾಚು ತಪ್ಪಿತಲ್ಲವೆ ? "

" ಹೌದು. ಆದರೆ ಅಂತಹದೇನು ಕೊಳ್ಳೆಹೋಯಿತು. ಒಂದು ಕ್ರಿಕೆಟ್ ಮ್ಯಾಚು ತಪ್ಪಿಹೋಯಿತೆಂದು ಹಾಗೆ ಹುಚ್ಚುಹುಚ್ಚಾಗಿ ಆಡಬೇಕೆ, ಸರಸಿ ? " ಎಂದಳು ಶಾಂತ.

" ಕ್ರಿಕೆಟ್ ಅಂದರೆ ನಿನ್ನ ಮೈದುನನಿಗೆ ಪ್ರಾಣಕ್ಕಿಂತಲೂ ಹೆಚ್ಚು ಅಲ್ಲವೆ, ನೀನೇ ಹೇಳು ? "

" ನಿಜ ಅನ್ನು, ನಾಲ್ಕು ತಿಂಗಳಿಂದ ಪ್ರಾಕ್ಟೀಸ್ ಮಾಡತಾ ಇದ್ದ. ಆದರೆ—" ಕುಂಟು ವಾದ ತನ್ನದೆಂದು ಶಾಂತಳಿಗೆ ಮನಸ್ಸಿಗೆ ಖಚಿತವಾಯಿತು.

" ಕೊಂಚ ತಾಳು. ನಾಲ್ಕು ತಿಂಗಳಿಂದ ಹಗಲೂ ಸಂಜೆ ಕ್ರಿಕೆಟ್ ಪ್ರಾಕ್ಟೀಸಿಗೆ ಹೋಗತಾ ಇದ್ದ. ಯಾವಾಗಲೂ ಅದರ ಯೋಚನೆ ಅವನಿಗೆ. ನಿನ್ನ ಹತ್ತಿರ ಎಲ್ಲಾ ಹೇಳಿಕೊಳ್ಳುತ್ತಾ ಇದ್ದ. ಅಷ್ಟೆ ಅಲ್ಲ, ನಿನ್ನಲ್ಲಿ ಅವನಿಗೆ ಎಷ್ಟು ಭರವಸೆ, ಪ್ರೀತಿ ಅಂದರೆ ತನ್ನ ಪೆಟ್ಟಿಗೆ ಬೀಗದಕೈ ಕೊಟ್ಟ. ನಿನ್ನನ್ನೆ ಸಂಪೂರ್ಣವಾಗಿ ನಂಬಿದ ಅವನಿಗೆ ಹೀಗೆ ನಿರಾಶೆಯಾದರೆ, ಪ್ರಪಂಚವೆ ಮುಳುಗಿಹೋದ ಹಾಗೆ ಅವನು ಆಡಿದ್ದು ಸರಿಯಲ್ಲವೆ ? "

" ಹಾಗೆ ಪ್ರಪಂಚ ಏನು ಮುಳುಗಿಹೋದ್ದು ? "

" ಈ ಕ್ರಿಕೆಟ್ ಮ್ಯಾಚೇ ಅವನಿಗೆ ಪ್ರಪಂಚ. ಯಾವಾಗಲೂ ಅದರದೇ

ಧ್ಯಾನವಾಗಿತ್ತು ಅವನಿಗೆ. ಇಷ್ಟು ದಿನ ಕಷ್ಟಪಟ್ಟಿದ್ದು, ನಾಳೆ ಆಡಿಬಿಡತೀನಿ, ಎಲ್ಲರೂ ನನ್ನನ್ನು ಹೊಗಳುವ ಹಾಗೆ ಮಾಡತೀನಿ ಅಂತ ಆಸೆ ಇಟ್ಟುಕೊಂಡು ಕನಸು ಕಟ್ಟುತ್ತಾ ಇದ್ದ. ಆದರೆ ನೀನು ಬೀಗದಕೈ ಕಳೆದುಬಿಟ್ಟೆ. ಅಂದ ಮೇಲೆ ಅವನಿಗೆ ತನ್ನ ಭವಿಷ್ಯ ಹಾಳಾಗಿಹೋಯ್ತು, ಕಷ್ಟವೆಲ್ಲ ನಿರರ್ಥಕ ವಾಯ್ತು ಅನಿಸೋದಿಲ್ಲವೆ ಹೇಳು. ನೀನೇ ಯೋಚಿಸು."

"ಆದರೆ ಅಷ್ಟು ಹುಚ್ಚುಚ್ಚಾಗಿ—"

"ಹುಚ್ಚುಹುಚ್ಚಲ್ಲ, ಶಾಂತ, ಅದು. ಆ ಹೊತ್ತಿನಲ್ಲಿ ಅತಿಪ್ರೀತಿ ಹಾಗೆ ಮಾಡಿಬಿಡುತ್ತೆ. ಈಗ ನಿನಗೆ ಅವರನ್ನೆಲ್ಲ ಬಿಟ್ಟು ಬಂದಿರೋದೆ ದೊಡ್ಡ ಕೊರಗಾಗಿದೆ. ಅದೇ ಅತಿಯಾದರೆ ಹುಚ್ಚಾಗುತ್ತೆ. ಚಿಕ್ಕ ಹುಡುಗರಿಗೆಲ್ಲ ಅದಿದ್ದೇ ಇರುತ್ತೆ. ನೀನು ಚಿಕ್ಕವಳಾಗಿದ್ದಾಗ ಆ ಕಪ್ಪುರದ ಗೊಂಬೆ ವಿಷಯಕ್ಕೆ ಹೇಗಾಡಿದೆ ಜ್ಞಾಪಿಸಿಕೊ" ಎಂದು ಸರಸಿ ನಕ್ಕಳು. ಶಾಂತಳಿಗೂ ಅದನ್ನು ನೆನೆದು ತುಂಬಾ ನಗು ಬಂತು.

ಆಗ ಅವಳಿಗೆ ಐದು ವರ್ಷವಿರಬಹುದು. ಡಾಕ್ಟರು ಅವಳಿಗೆ ಟೈಫಾಯಿಡ್ ವಾಸಿಮಾಡುತ್ತಿದ್ದರೊ ವಾಸಿಮಾಡಿದ ಕೆಲವು ದಿನವಾಗಿತ್ತೊ ಏನೊ. ಅಂತೂ ಡಾಕ್ಟರು ಅವಳಿಗೊಂದು ದೊಡ್ಡ ಕಪ್ಪುರದ ಗೊಂಬೆ ತಂದುಕೊಟ್ಟಿದ್ದರು. ಶಾಂತ ಯಾವಾಗಲೂ ಅದನ್ನು ತನ್ನ ಹತ್ತಿರದಲ್ಲೆ ಇಟ್ಟುಕೊಂಡಿರುತ್ತಿದ್ದಳು. 'ನನ್ನ ಮಗು, ನನ್ನ ಪಾಪ' ಎಂದು ಅದನ್ನು ಆಡಿಸುತ್ತಿದ್ದಳು. ತನ್ನ ಚಿಕ್ಕಂದಿನಲ್ಲಿ ಕಟ್ಟಿ ಈಗ ಅಟ್ಟದಲ್ಲಿಟ್ಟಿದ್ದ ಕರೀಮರದ ತೊಟ್ಟಿಲನ್ನು ಹಟ ಮಾಡಿ ಕೆಳಕ್ಕೆ ತರಿಸಿ ಮತ್ತೆ ಕಟ್ಟಿಸಿದ್ದಳು. ಅದರಲ್ಲಿಯೆ ತನ್ನ ಕಪ್ಪುರದ ಗೊಂಬೆಯನ್ನು ಮಲಗಿಸಿ, ಜೋಗುಳ ಹಾಡಿ, ತೂಗಿ ನಿದ್ರೆ ಹೋಗಿಸಿ, ಆಮೇಲೆ ತಾನೂ ಊಟಕ್ಕೇಳುತ್ತಿದ್ದಳು. ಆ ಗೊಂಬೆಯೆಂದರೆ ಅವಳಿಗೆ ಹುಚ್ಚು. ಯಾವಾಗಲೂ ಅದರದೆ ಯೋಚನೆ. ಒಂದು ದಿನ ಏನೊ ಯೋಚಿಸುತ್ತ, ಇದ್ದಕ್ಕಿದ್ದಂತೆ 'ನನ್ನ ಪಾಪನಿಗೆ ಬಹಳ ಬೊಕ್ಕೆ ಬಂದಿದೆ ಮೈಯಲ್ಲೆಲ್ಲ, ನೀರು ಹಾಕುತ್ತೇನೆ' ಎಂದು ಬಚ್ಚಲುಮನೆಗೆ ಹೊರಟುಬಿಟ್ಟಳು. ಬೇಡ ಕಣೆ ಎಂದು ತಾಯಿ ಹೇಳಿದಾಗ 'ನನಗೆ ಮಾತ್ರ ಮೂರು ದಿನಕ್ಕೊಂದು ಸಾರಿ ನೀರು ಹಾಕುತ್ತಿ, ನನ್ನ ಪಾಪನಿಗೆ ಬೇಡವೊ. 'ಹಾಕಲೇಬೇಕು' ಎಂದು ಹಟಹಿಡಿದಳು. ಆಗಿನ್ನೂ ಖಾಯಿಲೆ ವಾಸಿಯಾಗಿ ವಿಶ್ರಾಂತಿ, ಆರೈಕೆಯ

ದಿನಗಳು. ಸಾಮಾನ್ಯವಾಗಿ ಡಾಕ್ಟರು ಸಂಜೆಗೊಮ್ಮೆ ಬಂದುಹೋಗುವ ಪದ್ಧತಿಯಿತ್ತು. ಮೂರು ದಿನಕ್ಕೊಮ್ಮೆ ಶಾಂತಳಿಗೆ ನೀರು ಹಾಕುತ್ತಿದ್ದರು. ಶಾಂತ ಗೊಂಬೆಯನ್ನು ಬಚ್ಚಲುಮನೆಗೊಯ್ದಳು. ಅದಕ್ಕೆ ಎಣ್ಣೆ ಹಚ್ಚಬೇಡವೆಂದು ತಾಯಿ ಹೇಳಿದ್ದರೂ ಹಟದಿಂದ ಎಣ್ಣೆ ಹಚ್ಚಿದಳು. ಒಲೆಯಲ್ಲಿ ಸೌದೆ ಸಿಡಿದು, ಕಿಡಿ ಶಾಂತಳ ಕೈಗೆ ಹಾರಿತು. ಕೈ ಸುಟ್ಟಿತೆಂದು ಒದರಿದಾಗ ಗೊಂಬೆ ಕೆಳಕ್ಕೆ ಬಿದ್ದು ಉರಿಯುವ ಸೌದೆಯ ಪುರಲೆಗೆ ತಾಕಿತು. ಎರಡು ಗಳಿಗೆಯಲ್ಲಿ ಪುರಪುರನೆ ಉರಿದು ಹೋಯಿತು. ಕಿಟಾರನೆ ಕಿರಿಚಿದ ಶಾಂತ ಅಳು ನಿಲ್ಲಿಸಲೆ ಇಲ್ಲ. ಊಟ, ತಿಂಡಿ, ಮಾತುಕತೆ ಏನೂ ಇಲ್ಲದೆ ಸುಮ್ಮನೆ ಅಳುತ್ತಿದ್ದಳು. ಯಾವ ಗೊಂಬೆ ತೋರಿಸಿದರೂ 'ನನ್ನ ಪಾಪ' ಎಂದು ಅಳುತ್ತಿದ್ದಳು. ಸಂಜೆ ಡಾಕ್ಟರು ಬಂದು ತಿಳಿದು, ತಕ್ಷಣ ಕಾರಿನಲ್ಲಿ ಹೋಗಿ ಅದೆ ತರಹದ ಗೊಂಬೆ ತಂದು, 'ನಿನ್ನ ಪಾಪನನ್ನು ನಾನು ಬೆಂಕಿಯಿಂದ ತೆಗೆದೆ, ನೋಡು' ಎಂದು ಬಚ್ಚಲುಮನೆಯೊಳಗಿಂದ ಅದನ್ನು ತಂದು ಅವಳ ಕೈಗೆ ಕೊಟ್ಟರು. ಆಗಲೆ ಶಾಂತ ಸಮಾಧಾನಗೊಂಡುದು. ಡಾಕ್ಟರ ಹತ್ತಿರ ತನ್ನ ತಾಯಿ, ತಂದೆ ಇಬ್ಬರೂ ಬಹಳ ಕೆಟ್ಟವರೆಂದು ಬೈದಳು. ಆವೊತ್ತು ಅದಾದಮೇಲೆಯೆ ಅವಳಿಗೆ ಹಸಿವೆ ಕೂಡ ಗೊತ್ತಾದುದು.

ಶಾಂತಳಿಗೆ ಈಗೆಲ್ಲವೂ ನೆನಪಾಗಿ ನಗು ಬಂತು.

"ನೋಡಿದೆಯಾ ಶಾಂತ, ಆಗ ನಿನಗೆ ಆ ಗೊಂಬೆಯ ಹುಚ್ಚು. ಅದು ಸಿಗುವವರೆಗೂ ನಿನಗೆ ಹಸಿವು ಕೂಡ ಗೊತ್ತಾಗಲಿಲ್ಲ. ಹಾಗೆಯೆ ಎಲ್ಲರಿಗೂ" ಎಂದಳು ಸರಸಿ.

"ಚೆನ್ನಾಯಿತೆ, ಸರಸಿ. ಆಗ ಅಂದರೆ ನಾನಿನ್ನೂ ಚಿಕ್ಕ ಮಗುವಾಗಿದ್ದೆ. ನೀನುವೇನು ಚಿಕ್ಕ ಮಗುವೆ? ಹದಿನೆಂಟು ವರ್ಷ" ಎಂದಳು ಶಾಂತ.

"ವರ್ಷವೇನು ಮಾಡುತ್ತೆ, ಶಾಂತ. ಒಂದು ಮಾತು ಹೇಳುತ್ತೇನೆ ಕೇಳು. ಗಂಡಸರೆಲ್ಲ ನಮ್ಮ ಕಣ್ಣಿನಲ್ಲಿ ಚಿಕ್ಕ ಮಕ್ಕಳೆ. ಅವರನ್ನು ರಮಿಸಬೇಕು, ಪ್ರೀತಿಸಬೇಕು. ಅವರಿಗೆ ನಾವು ಸೋತು, ಅವರನ್ನು ಗೆಲ್ಲಬೇಕು. ಗೊಂಬೆಯನ್ನು ನೀನು ಪ್ರೀತಿಸಿದಂತೆ ಅವರೂ ಯಾವುದರಲ್ಲಿಯೊ ತಮ್ಮ ಪ್ರೀತಿಯನ್ನಿಟ್ಟಿರುತ್ತಾರೆ. ಅದು ಅವರ ಕಪ್ಪುರದ ಗೊಂಬೆ. ಅದರೊಂದಿಗೆ ಅವರು ಆಡುತ್ತಾರೆ. ಅದೇ ಜೀವ, ಅದೇ ಪ್ರಾಣವೆಂದು ಒದ್ದಾಡುತ್ತಾರೆ.

ಅದನ್ನು ಅವರಿಂದ ನಾವು ಕಿತ್ತುಕೊಳ್ಳಬಾರದು. ಈಗ ನಿನ್ನ ಮೈದುನನಿಗೆ ಕ್ರಿಕೆಟ್ಟೆಂದರೆ ಹಾಗೆ. ನಿನ್ನ ನಾದಿನಿಗೆ ರಿಬ್ಬನ್ನೊ ಬ್ರೋಚೊ ಹಾಗೆಯೆ ಇರಬೇಕು. ನಮ್ಮ ಯಜಮಾನರಿದಾರಲ್ಲ, ಅವರಿಗೂ ಕ್ರಿಕೆಟ್ಟೆಂದರೆ ಪ್ರಾಣ. ಅವರು ಆಡುವುದಿಲ್ಲ. ಆದರೆ ಎಲ್ಲಾದರೂ ಕ್ರಿಕೆಟ್ ಅಂತ ಕೇಳಿದರೆ ಸಾಕು, ಎಲ್ಲಾ ಮರೆತು ಓಡಿಬಿಡುತ್ತಾರೆ. ಒಂದು ಸಾರಿ ಬೆಳಿಗ್ಗೆ ಮಾರ್ಕೆಟ್ಟಿಗೆ ಹೋಗಿ ಬರಲು ಹೊರಟವರು ರಾತ್ರಿ ಎಂಟು ಗಂಟೆಗೆ ಬಂದರು. ಬಂದವರಿಗೆ ತಾವು ಮಾರ್ಕೆಟ್ಟಿಗೆ ಹೊರಟ್ಟಿದ್ದವರೆಂಬುದು ಮರೆತಿತ್ತು. 'ಸರಸಿ, ಇವತ್ತೆಂತಹ ಕ್ರಿಕೆಟ್ ಮ್ಯಾಚಿತ್ತೂಂತೀಯಾ' ಎಂದು ಕ್ರಿಕೆಟ್ ಮ್ಯಾಚನ್ನು ಹೊಗಳಿದರು. ಬೆಳಿಗ್ಗೆಯಿಂದ ಅವರಿಗಾಗಿ ಕಾದು ಕುಳಿತ ನಾನು ಏನನ್ನಬೇಕು. ಆದರೆ ನನಗೆ ಗೊತ್ತು, ಕ್ರಿಕೆಟ್ಟೆಂದರೆ ಅವರಿಗೆ ಪಂಚಪ್ರಾಣ. ಆದರೆ ಅದರಿಂದ ನನ್ನಲ್ಲಿ ಪ್ರೀತಿಯಿಲ್ಲವೆಂದು ಹೇಳುವುದು ಸಾಧ್ಯವೆ? ನಾನೂ ಅವರ ಮಾತೆಲ್ಲ ಕೇಳಿದೆ. ಆಮೇಲೆ ಊಟಕ್ಕೆ ಬಡಿಸಿದೆ. ಅವರಿಗೆ ಆಗ ನೆನಪಾಯಿತು. ಬಹಳ ಒದ್ದಾಡಿದರು ಪ್ರಾಣಿ. ನಾನು ಮೊದಲೆ ಅವರ ಮೇಲೆ ಸಿಡಿದು ಬಿದ್ದಿದ್ದರೆ ಹೃದಯ ಒಡೆದುಹೋಗುತ್ತಿತ್ತು. ಅವರಿಗೂ ನನಗೂ ತೊರೆಯುತ್ತಿತ್ತು."

"ಏನೋಮ್ಮ—" ಎಂದು ಶಾಂತ ರಾಗ ಎಳೆದಳು. ಸರಸಿಯ ಮಾತೆಲ್ಲ ನಿಜವೆಂದು ಅವಳಿಗೆ ಗೊತ್ತು. ತನ್ನ ಮನಸ್ಸಿನಲ್ಲಿರುವುದನ್ನೆ ಸರಸಿ ಹೇಳುತ್ತಿರುವಳೆಂದು ತಿಳಿದು ಸಂತೋಷವೂ ಆಯಿತು. ಆದರೂ ಇನ್ನೂ ಬಿಗುಮಾನ.

"ಏನೋಮ್ಮ ಬಿಟ್ಟುಬಿಡು, ಶಾಂತ, ಈ ವಿಚಾರಗಳಲ್ಲಿ ಗಂಡಸರೆಲ್ಲ ಮಕ್ಕಳ ಹಾಗೆಯೆ. ಅವರನ್ನು ನಾವು ಸಹನೆಯಿಂದ ನಡೆಸಿಕೊಳ್ಳಬೇಕು. ಪೆಟ್ಟು ತಾಕದಂತೆ ನೋಡಿಕೊಳ್ಳಬೇಕು, ರಮಿಸಬೇಕು, ನಮ್ಮವರಾಗಿಸಿಕೊಳ್ಳಬೇಕು. ನಾವು ಸೋತು ಗೆಲ್ಲಬೇಕು. ಹೆಂಗಸು ಹಟದಿಂದ ಗೆಲ್ಲುವುದು ಸಾಧ್ಯವಿಲ್ಲ, ಪ್ರೀತಿಯಿಂದ ಗೆಲ್ಲಬೇಕು. ಈಗ ನೀನು ಹೀಗೆ ಧಿಡೀರನೆ ಬಂದೆಯಲ್ಲ, ನಿಮ್ಮ ಯಜಮಾನರಿಗೆ ಎಷ್ಟು ಆತಂಕವಾಗಿದೆ ನಿನಗೆ ಗೊತ್ತೆ?"

"ಆತಂಕವೆಲ್ಲಿಯದು—ಒಂದು ಕಾಗದ ಕೂಡ ಹಾಕಿಲ್ಲ." ಅರೆಮನಸ್ಸಿನಿಂದ ನೊಂದ ದನಿಯಲ್ಲಿ ಅಂದಳು ಶಾಂತ.

"ತಪ್ಪು ನಿನ್ನದು. ಅವರಿಗೆ ಹೇಳಿಬಂದೆಯಾ, ನೀನು? ಅವರಿಲ್ಲದಾಗ

ಬಂದೆ. ಹೋಗಲಿ, ಬಂದವಳು ಅವರಿಗೊಂದು ಕಾಗದ ಹಾಕಿದೆಯೇನು— ಹೀಗೆ ಹೀಗೆ ಅಂತ. ಇಲ್ಲ. ಅದನ್ನೂ ಮಾಡಲಿಲ್ಲ. ನೀನು ಬಂದು ಈಗಾಗಲೆ ಹದಿನಾರು ದಿನವಾಯ್ತು. ಕಾಗದ ಬರೆಯಬೇಕಾದುದು ನೀನೊ ಅವರೊ ? ಹೇಳು."

" ನಾನೇ ಬರೆಯಬೇಕಾಗಿತ್ತು. ಆದರೆ—"

" ಶಾಂತ, ಇಲ್ಲದ ಕುಂಟು ನೆವ ಎತ್ತಿ ನಿನ್ನ ಮನಸ್ಸನ್ನೆ ನೀನು ಮೋಸ ಗೊಳಿಸಲು ಯತ್ನಿಸಿಕೊಳ್ಳಬೇಡ. ಈ ಅಭಿಮಾನ ಬಹಳ ಕೆಟ್ಟದ್ದು. ನೋಡು, ಯಾವುದೊ ಹೊತ್ತಿನಲ್ಲಿ ಗೆರೆ ಮೀರಿಹೋಗಿ ನಮ್ಮ ಕೊರಳಿಗೆ ಕುತ್ತಾಗುತ್ತೆ. ನಿನ್ನ ಯಜಮಾನರು ಹೆಚ್ಚೊ, ಅಭಿಮಾನ ಹೆಚ್ಚೊ ? ಅಭಿಮಾ ನದುರಭಿಮಾನ ವಾಗಲು ಬಿಡಬೇಡ. ನೀನೂ ಎರಡು ವರ್ಷ ಸಂಸಾರ ಮಾಡಿದೀಯ. ನಿನಗೆ ನಾನು ಹೇಳಿಕೊಡಬೇಕೆ ? ಏಕಾಏಕಿ ಹೊರಟುಬಂದವಳು ನೀನು. ಅವರು ಕಾಗದ ಬರೆಯಲಿಲ್ಲವೆಂದು, ಅವರ ಮೇಲೆ ಯಾಕೆ ತಪ್ಪು ಹಾಕುತ್ತಿ ಹೇಳು. ನೀನು ಬಾಗದಿದ್ದರೆ ಅವರು ಬಾಗುವರೆ ? ಅವರಿಗೂ ನಿನ್ನ ಹಾಗೆ ಅಭಿಮಾನ ವಿಲ್ಲವೆ ? ನನಗೆ ಹೇಳಲಿಲ್ಲ, ಕೇಳಲಿಲ್ಲ ಹೊರಟುಹೋದಳು, ಎಂತಹ ಹೆಂಡತಿ ಇವಳು, ಅಂದರೇನು ಮಾಡುತ್ತಿ, ಹೇಳು ? "

" ಅಂತಹವರಲ್ಲ ಅವರು. ಅವರು ಬರೆಯಲಿಲ್ಲ, ಆದರೆ ಸೀನುವಾದರೂ ಬರೆಯಬಹುದಾಗಿತ್ತು."

" ಚೆನ್ನಾಯಿತು, ಶಾಂತ, ನಿನ್ನ ಮಾತು. ಸೀನುವೆ ಇದರಲ್ಲಿ ಹೆಚ್ಚು ನೊಂದವನು. ಅಷ್ಟು ದಿನದಿಂದ ಅವನು ಸಿದ್ಧಪಡಿಸಿದ್ದ ಕನಸನ್ನು ನೀನು ಒಂದು ಕ್ಷಣದಲ್ಲಿ ಒಡೆದುಹಾಕಿದೆ. ಈಗ ನೀನು ಅವನದೇ ತಪ್ಪು ಅಂದರಾಯಿತಲ್ಲ. ಮಕ್ಕಳು ಕೈಯಿಂದ ಕಷ್ಟಪಟ್ಟು ಮರಳಿನಲ್ಲಿ ಕಪ್ಪೆಗೂಡು ಕಟ್ಟುತ್ತವೆ. ಆಮೇಲೆ ಯಾರೋ ಕಾಲಿನಿಂದ ಎಡವಿ ಕೆಡವಿದ್ದೂ ಅಲ್ಲದೆ ' ರಸ್ತೆಯಲ್ಲಿ ಕಾಲಿಗೆ ಸಿಕ್ಕುವ ಹಾಗೆ ಕಟ್ಟುತ್ತವೆ ' ಅಂತ ಬಯ್ದ ಹಾಗೆ. ಮೊದಲೆ ನೀನು ಅವನ ಸಲುವಾಗಿ ರೇಗಿ ಬಂದಿದೀಯ. ಇನ್ನು ಕಾಗದ ಬರೆದರೆ ಇನ್ನು ಹೇಗೊ ಅಂತ ಗಾಬರಿ ಅವನಿಗೂ. ಹೋಗಲಿ, ಶಾಂತ. ನಿನ್ನ ಮೈದುನನಿಗೆ ನಿನ್ನಲ್ಲಿ ಪ್ರೀತಿ ಇದೆಯೊ ಇಲ್ಲವೊ ? "

" ಇಲ್ಲದೆ ಏನು, ಸರಸಿ. ಯಾವಾಗಲೂ ನನ್ನ ಮರ್ಜಿಯನ್ನೆ ಹಿಡಿದು,

ನಡೀತಾನೆ. ಅವನಿಗೆ ಎಲ್ಲ ವಿಷಯಕ್ಕೂ ನಾನೇ ಆಗಬೇಕು. ಪ್ರತಿದಿನವೂ ನನಗೆ ತನ್ನ ಕ್ರಿಕೆಟ್ ವರದಿ ಒಪ್ಪಿಸದೆ ಹೋದರೆ ಅವನಿಗೆ ಸಮಾಧಾನವೆ ಇಲ್ಲ. ಎಷ್ಟೊ ಸಾರಿ ಅವನು ಕ್ರಿಕೆಟ್ ಮಾತಾಡತಾ ಊಟ ಮರೆತಿದ್ದುಂಟು. ಅತ್ತೆಯವರು ಅವನನ್ನು ಬೈದಾಗ ನಾನು ಅವನ ಪರವಾಗಿ ವಾದಿಸಿದ್ದೇನೆ. ನಾನು ಇಲ್ಲಿಗೆ ಬಂದುದು ಅವನಿಗೂ ಬೇಕಿಲ್ಲ. ಏನೊ ಆಗ ಹಾರಾಡಿದ ಅಷ್ಟೆ" ಎಂದಳು ಶಾಂತ.

" ನೋಡಿದೆಯಾ, ಶಾಂತ. ನಾನು ಹೇಳಿದ ಮಾತನ್ನು ನೀನೆ ಹೇಳಿದೆ. ನಿನ್ನ ಮೈದುನ, ನಿನ್ನ ನಾದಿನಿ ಎಲ್ಲರೂ ನಿನ್ನನ್ನು ಪ್ರೀತಿಸುತ್ತಾರೆ. ನೀನು ಬಂದದ್ದು ಅವರೊಬ್ಬರಿಗೂ ಬೇಕಿಲ್ಲ."

" ಪಾಪ! ವಸಂತು ತನ್ನನ್ನು ಬಿಟ್ಟು ಹೇಗೆ ತಾನೆ ಇರತಾಳೊ. ಅವಳಂತೂ ಎಲ್ಲಾದಕ್ಕೂ ನನ್ನನ್ನೆ ನಂಬಿದ್ದಳು. ನಾನು ಬರುವಾಗ 'ಅತ್ತಿಗೆ ಅತ್ತಿಗೆ' ಅಂತ ಎದೆ ಬಿರಿಯುವ ಹಾಗೆ ಕೂಗಿಕೊಂಡಳು. ನನಗೆ ಕಾಲು ಹಿಡಿದ ಹಾಗಾಯಿತು. ಈಗ ಪಾಪ! ಹೇಗಿರುತಾಳೊ" ಎಂದಳು ಶಾಂತ.

" ನಾನು ಹೇಳುತ್ತೇನೆ ಕೇಳು, ಶಾಂತ. ಸುಮ್ಮನೆ ಕೊರಗು ಹತ್ತಿಸಿಕೊಳ್ಳಬೇಡ. ಎರಡು ದಿನ ನೋಡಿಕೊಂಡಿದ್ದು ಸುಮ್ಮನೆ ಹೊರಟುಬಿಡು."

" ಆದರೆ ಹೀಗೆ ಸುಮ್ಮನೆ ಹೊರಟುಹೋದರೆ ನಾನು ಸೋತ ಹಾಗೆ—"

" ಹೌದು—ಆದರೆ ಸೋತು ಗೆಲ್ಲಬೇಕು, ಶಾಂತ. ಅದೇ ನಿಜವಾದ ಗೆಲುವು."

" ಏನಂತಾರೊ ಅಲ್ಲಿ—"

" ಏನೂ ಅನ್ನುವುದಿಲ್ಲ. ಇಷ್ಟರ ಮೇಲೆ ಏನು ಅಂದರೂ ಪ್ರೀತಿಯ ಮಾತಿಗೆ ಹೊರತು ಇನ್ನೇನೂ ಇಲ್ಲ. ಅಲ್ಲದೆ ಅನ್ನುವುದು ಕೂಡ ಪ್ರೀತಿಯ ಒಂದು ಗುರುತೆ ಅಂದುಕೊ. ಸುಮ್ಮನೆ ನೀನು ಇದನ್ನೆಲ್ಲ ತಲೆಗೆ ಹಚ್ಚಿಕೊಳ್ಳಬೇಕಾಗಿಯೆ ಇಲ್ಲ. ಎಲ್ಲರೂ ನಿನ್ನನ್ನು ಪ್ರೀತಿಯಿಂದಲೆ ನೋಡಿಕೊಳ್ಳತಾರೆ ಅಂತೀಯ, ನೀನು ಹೊರಟುಬಂದದ್ದು ಒಬ್ಬರಿಗೂ ಬೇಕಿಲ್ಲ ಅಂತೀಯ; ಮತ್ತೆ ಈ ತರಹ ಯಾಕೆ ಅನುಮಾನ ?"

" ಸುಮ್ಮನೆ—ಹುಂ. ನೋಡೋಣ" ಎಂದಳು ಶಾಂತ.

" ಅರೆಮನಸ್ಸಿರಬಾರದು, ಶಾಂತ. ಈಗ ನೋಡು, ಇಲ್ಲಿ ನಿನಗೆ ಮನಸ್ಸಿಗೆ ಕೊಂಚವಾದರೂ ಸುಖವಿಲ್ಲ. ನಿನ್ನ ಅಣ್ಣ ಅತ್ತಿಗೆ ಕೂಡ ನಿನ್ನನ್ನು

ಬೇರೆ ಮಾಡಿಬಿಟ್ಟಿದ್ದಾರೆ. ನಿನ್ನನ್ನು ಹತ್ತಿರ ಸೇರಿಸಿದರೆ ಮಗು ಕೆಟ್ಟುಹೋಗು ತ್ತೆನ್ನುವಂತೆ ಆಡುತ್ತಾರೆ. ಯಾಕೆ ಗೊತ್ತೆ? ನಿನ್ನ ಮೇಲೆ ಶಂಕರಮ್ಮ ಹೊರಿ ಸಿದ ಅಪವಾದ ಅಂತಹದು. ಅಪವಾದ ಬಂದುಬಿಟ್ಟರೆ ಹಾಗೆಯೆ. ಎಲ್ಲರನ್ನು ನಮ್ಮಿಂದ ದೂರಕ್ಕೆ ಕೊಚ್ಚಿಸಿಕೊಂಡು ಹೋಗಿಬಿಡುತ್ತೆ. ನಾವು ಗಟ್ಟಿಯಾಗಿರ ಬೇಕು, ಅಷ್ಟೆ."

" ನಾನು ಯೋಚನೆ ಮಾಡುತ್ತೇನೆ, ಸರಸಿ. ನಾಳೆ ನಮ್ಮ ಮನೆ ಕಡೆ ಬರುತ್ತೀಯಾ ? " ಎಂದಳು ಶಾಂತ.

" ನನ್ನ ಕೈಲಾಗುವುದಿಲ್ಲ, ಶಾಂತ. ಇಲ್ಲದಿದ್ದರೆ ಖಂಡಿತವಾಗಿ ಬರುತ್ತಿದ್ದೆ. ನೀನೇನೂ ಮನಸ್ಸಿಗೆ ಬೇಜಾರು ಪಟ್ಟುಕೊಳ್ಳಬೇಡ. ನನಗೆ ನೀನು ತಂಗಿಗಿಂತ ಹೆಚ್ಚಿಗೆ. ಆದ್ದರಿಂದ ಇಲ್ಲಿಗೆ ಬರುವುದಕ್ಕಾಗಲಿ, ಮಾತಾಡಲಾಗಲಿ ಸಂಕೋಚ ಪಟ್ಟುಕೊಳ್ಳಬೇಡ. ನಾನು ಹೇಳಿದ್ದನ್ನೆಲ್ಲ ಯೋಚಿಸು. ಅಪ್ಪನೂ ಅನ್ನತಾ ಇದ್ದರು. ಏನೋ ಕೊರಗು ಹತ್ತಿಸಿಕೊಂಡು ಕೃಶವಾಗತಾ ಇದಾಳೆ, ನೀನಾದರು ವಿಚಾರಿಸು ಅಂತ. ಈಗ ನನಗೆ ಎಲ್ಲ ತಿಳಿದಹಾಗಾಯಿತು. ಈಗ ನಿನ್ನ ಮನೆಗೆ ನೀನು ಹೊರಟುಹೋದರೆ ನಿನ್ನ ಈ ಕೊರಗೆಲ್ಲ ಮಾಯವಾಗುತ್ತೆ. ಆಮೇಲೆ ಇನ್ನೈದಾರು ತಿಂಗಳಿಗೆ ಬಾಣಂತನಕ್ಕೆ ಬರುವುದು ಇದ್ದೇ ಇದೆ. ಆ ರೀತಿಯೆ ಬೇರೆ."

" ಹುಂ ! ಆದರೆ ಮೊದಲು ಒಂದು ಕಾಗದ ಬರೆದು ನೋಡಲೆ—ಅಂತ ಒಂದು ಯೋಚನೆ."

" ಕಾಗದ ಬರೆಯುವುದಕ್ಕಿಂತ ನೀನೇ ಹೋಗುವುದು ಮೇಲಲ್ಲವೆ— ಯೋಚಿಸಿ ನೋಡು. ಶಂಕರಮ್ಮನಂತಹವರ ಮಾತಿಗೆ ಬೆಲೆ ಕೊಡಬೇಡ. ಅವರು ಎಷ್ಟೋ ಮನೆ ಹಾಳು ಮಾಡಿದವರಂತೆ. ಅಪ್ಪನಿಗೆ ಚೆನ್ನಾಗಿ ಗೊತ್ತು, ಅವರ ಮನೆತನ. ಇವರ ಮನೆಯ ಕಾರುಭಾರನ್ನೆಲ್ಲ ನಡೆಸುವವರು ಶಂಕರಮ್ಮನ ಮೈದುನ. ಅವರು ಹಳ್ಳಿಯ ಜಮೀನೆಲ್ಲ ನೋಡಿಕೊಳ್ಳುತ್ತಾರೆ. ದುಡಿದು ತಂದು ಹಾಕುತ್ತಾರೆ. ಇಲ್ಲಿ ಇವರ ಮನೆಗೆಲ್ಲ ತಂದು ಹಾಕಬೇಕು. ಆದರೆ ಮನೆಗೆ ಅವರನ್ನು ಶಂಕರಮ್ಮನವರು ಸೇರಿಸುವುದೆ ಇಲ್ಲ. ಅವರು ಹೋಟಲಿನಲ್ಲೊ, ಸ್ನೇಹಿತರ ಮನೆಯಲ್ಲೊ ಊಟ ಮಾಡಿಕೊಂಡು ಹೋಗುತ್ತಾರೆ. ಅಂತಹ ಅತ್ತಿಗೆ ಶಂಕರಮ್ಮ. ಅವರ ಮಾತಿಗೇನೂ ಬೆಲೆ ಕೊಡಬೇಡ, ಕೊರಗಬೇಡ."

"ಹುಂ" ಎಂದಳು ಶಾಂತ.

"ನಿಮ್ಮತ್ತಿಗೆ ಏನು ಬೇಕಾದರೂ ಮಾಡಲಿ, ಸಹನೆಯಿಂದ ನಡೆದುಕೊ. ಮತ್ತೆ ಯಾವಾಗ ಬರುತ್ತಿ?"

"ನಾಳೆಯೊ ನಾಡಿದ್ದೊ ಬರತೀನಿ. ನೀನು ಹೇಳಿದ್ದೆಲ್ಲ ಯೋಚನೆ ಮಾಡತೀನಿ, ನೋಡೋಣ."

"ಯೋಚಿಸಬೇಕಾದ್ದೇನೂ ಇಲ್ಲ, ಶಾಂತ. ಇನ್ನೊಂದೆರಡು ಮೂರು ದಿನ ಬಿಟ್ಟು ಊರಿಗೆ ಹೊರಟುಬಿಡು, ಅಷ್ಟೆ" ಎಂದಳು ಸರಸಿ.

"ಆಗಲಿ, ಬರತೀನಿ ಸರಸಿ" ಎಂದು ಶಾಂತ ಹೊರಟಳು.

ಸರಸಿಯ ತಾಯಿ ಬಾಗಿಲ ಹತ್ತಿರ ಬಂದು ಕುಂಕುಮ ಕೊಟ್ಟು "ಹೋಗಿ ಬರತೀಯಮ್ಮ, ಶಾಂತ. ಬರತಾ ಇರು, ಈ ಕಡೆ" ಎಂದರು.

"ಹುಂ. ಬರತೀನಿ" ಎಂದು ಹೇಳಿ ಶಾಂತ ಮನೆ ಕಡೆ ಹೊರಟಳು.

ಸರಸಿಯೊಂದಿಗೆ ಮಾತನಾಡಿ ಸುಸ್ತಾಗಿತ್ತು. ಆದರೆ ಸಂತೋಷವೂ ಆಗಿತ್ತು. ಬಿಸಿಲು ನೆತ್ತಿಗೇರಿತ್ತು. ಹೊತ್ತಾಗಿ ಹೋಯಿತೆಂದುಕೊಂಡು ಬೇಗನೆ ಬಂದಳು. ಸರಸಿಯ ಮಾತಿನಿಂದ ಹೃದಯದ ಭಾರ ಇಳುಹಿದಂತಾಗಿತ್ತು. ಸರಸಿ ಎಷ್ಟೊಂದು ಜಾಣೆ, ಎಷ್ಟೊಂದು ತಿಳಿದುಕೊಂಡು ಬಿಟ್ಟಿದಾಳೆ. ಅವಳಿಗೆ ಅತ್ತೆಯಿಲ್ಲ. ಆದರೆ ಸಂಸಾರ ಮಾಡಿ ಇದನ್ನೆಲ್ಲ ಕಲಿತಿದಾಳೆ. ಅವಳ ಯಜಮಾನರ ಅಣ್ಣನ ಹೆಂಡತಿ ಬಹಳ ಒಳ್ಳೆಯವರು. ಬಹಳ ಹಳೆಯ ಕಾಲದ ಮನೆತನದವರಾದರೂ ಎಲ್ಲ ಗುಟ್ಟನ್ನೂ ತಿಳಿದವರು. ಅವರು ಸರಸಿಗೆ ತಾಯಿಯಂತೆ ಇದಾರೆ. ಅವರೇ ಸಹನೆಯಿಂದ ಅವಳನ್ನು ತಿದ್ದಿದಾರೆಂದು ಕೇಳಿದ್ದಳು. ಸರಸಿ ಸುಖವಾಗಿರುವಳೆಂದು ತನಗೆ ತಿಳಿದಿದ್ದರೂ, ಅವಳಿಗೆ ಸುಖವೇ ಇಲ್ಲವೆಂದು ಅಲ್ಲಿ ಇಲ್ಲಿ ಜನ ಮಾತಾಡಿಕೊಂಡಿದ್ದರು. ಅದನ್ನು ಶಾಂತ ಕೇಳಿದ್ದಳು. ಆದರೆ ಸರಸಿಯಂತಹವಳಿಗೆ ಸುಖವಿಲ್ಲದಿದ್ದರೆ ಯಾರಿಗೂ ಸುಖ ಸಾಧ್ಯವಿಲ್ಲವೆಂದು ಅವಳಿಗೆ ಗೊತ್ತು. ಸರಸಿ ಎಷ್ಟೊಂದು ಬುದ್ಧಿ ಕಲಿತಿದಾಳೆ. ಹಾಗಿರಬೇಕೆನಿಸಿತು, ಶಾಂತಳಿಗೆ. ಶಾಂತಳಿಗೆ ಸರಸಿಯ ಜತೆಯಲ್ಲಿ ಮಾತಾಡಿದ್ದುದರಿಂದ ತನ್ನ ಈಗಿನ ಸಂದಿಗ್ಧ ಪರಿಸ್ಥಿತಿ ಸ್ವಯಂಕೃತಾಪರಾಧ, ತಾನೇ ಮಾಡಿಕೊಂಡ ನರಕವೆಂಬುದು ಖಚಿತವಾಗಿತ್ತು. ಹೇಗೊ ತನ್ನ ಮೇಲೆ ತಪ್ಪೆರಗದಂತೆ ಇದರಿಂದ ತಪ್ಪಿಸಿಕೊಂಡು ಹೋದರೆ ಸಾಕೆನಿಸಿತು. ಈಗೇನು ಮಾಡುವುದು, ತಾನಾಗಿಯೆ ಕಾಗದ ಬರೆ

ಯುವುದೆ, ಇಲ್ಲವೆ ಹೊರಟುಬಿಡುವುದೆ ? ಎಷ್ಟೇ ಹೇಳಿದರೂ ಅವಳ ಅಭಿಮಾನ ಏನ್ನೂ ಬಿಡಲೊಲ್ಲದು. ಸರಸಿಗೇನೊ ಮಾತಿನಲ್ಲಿ ಹೇಳಿಬಿಡುವುದು ಬಹಳ ಸುಲಭವಾಗಿತ್ತು. ಬಿಡಬೇಕು, ಅಭಿಮಾನವನ್ನು ಬಿಡದಿದ್ದರೆ ಜೀವಕ್ಕೆ ಕೆಡು ಕೆಂದು ಹೇಳುವುದು ಸುಲಭ. ಆದರೆ ಚಿಕ್ಕಂದಿನಿಂದಲೂ ಬಂದು ರಕ್ತದಲ್ಲಿ ಬೆರೆ ತಿದ್ದ ಅಭಿಮಾನ ಬಿಡೆಂದರೆ ಬಿಟ್ಟುಹೋಗಬೇಕಲ್ಲ ! ಅದು ಅಷ್ಟೊಂದು ಸುಲಭ ಸಾಧ್ಯವಾದುದಲ್ಲ. ತಾನಾಗಿಯೆ ಅಲ್ಲಿಗೆ ಹೋಗಿಬಿಟ್ಟರೆ ಆಮೇಲೆ ಏನಾಗು ವುದೊ ಎಂದು ಗಾಬರಿಯಿತ್ತು. ಆದರೆ ಇಲ್ಲಿ ಹೀಗೆಯೆ ನರಕಯುಗಗಳನ್ನು ಎಷ್ಟು ಕಳೆಯುವುದು ? ಅಂದಮೇಲೆ ಸರಸಿ ಹೇಳುವುದೆ ಸರಿ, ತನ್ನ ಮನೆಗೆ ತಾನು ಹೋಗುವುದೆ ಸರಿ. ಆದರೆ ಇದು ತನ್ನ ಮನೆಯಲ್ಲವೆ ? ಈಗಿನ ರೀತಿ ಯಲ್ಲಿ ಇದು ಖಂಡಿತವಾಗಿಯೂ ತನ್ನ ಮನೆಯಲ್ಲ, ಯಾವಾಗಲೊ ತನ್ನ ಮನೆ ಯಾಗಿತ್ತೇನೊ—ಆದರೆ ಈಗಂತೂ ಅಲ್ಲ. ರಾಜಣ್ಣನ ಮನೆಯಿರಬಹುದು, ತನಗೆ ಮಾತ್ರ ಮನೆಯಲ್ಲವೆನಿಸಿತು. ಅಂದಮೇಲೆ ಹೇಗೊ ಇಲ್ಲಿಂದ ಹೊರಟರೆ ಸಾಕೆನಿಸಿತು. ಈಗ ಸರಸಿಯೊಂದಿಗೆ ಮಾತಾಡಿದ್ದರಿಂದ ಹೃದಯ ಹಗುರ ವಾಗಿತ್ತು. ಸೀನುವಿಗೆ ಹಾಗೆ ನಿರಾಶೆಯಾದುದು ಸಹಜವೆ. ಹಾಗೆ ಮಾಡಿ ದುದು ತನ್ನದೇ ತಪ್ಪು. ಹಾಗೆ ಮಾಡದೆ ಹೋಗಿದ್ದರೆ ಆ ಹಗರಣವಾಗುತ್ತಿರ ಲಿಲ್ಲ. ಅಲ್ಲದೆ ಸೀನು ಬೇಗ ಉದ್ರೇಕಗೊಳ್ಳುತ್ತಿದ್ದವನು ಅವೊತ್ತು ಬಹಳ ಹೊತ್ತು ಸಹನೆಯಿಂದ ನಡೆದುಕೊಂಡಿರಲಿಲ್ಲವೆ. ಆಗ ಮಿತಿಮೀರಿ ನಿರಾಶೆ ಯಲ್ಲಿ, ದುಃಖದಲ್ಲಿ ಅವನು ಹಾಗಾಡಿದುದು ಆಶ್ಚರ್ಯವಿಲ್ಲ. ಆದರೆ ತಾನು ಸಹನೆಯಿಂದ ನಡೆದುಕೊಳ್ಳಬೇಕಾಗಿತ್ತು. ಎಲ್ಲರ ಪ್ರೀತಿಯೂ ತನ್ನಲ್ಲಿದೆ ಎಂದು ತಿಳಿದಿದ್ದೂ ಅಭಿಮಾನದಿಂದ, ಛಲದಿಂದ ಹೊರಟುಬಿಟ್ಟಿದ್ದಳು. ಅತ್ತೆ ಮಾವನವರ ಮಾತನ್ನು ಲಕ್ಷ್ಯ ಮಾಡಲಿಲ್ಲ. ಅಷ್ಟೆ ಅಲ್ಲ, ತನ್ನ ಯಜಮಾನರು ಊರಿನಲ್ಲಿ ಕೂಡ ಇರಲಿಲ್ಲ. ಅವರು ಬರುವ ತನಕ ಕೂಡ ಇರದೆ ನಿಂತ ನಿಲುವಿಗೆ ಹೊರಟು ಬಂದಾಗಿತ್ತು. ಒಂದು ನಿಮಿಷದ ಹಟ—ಈಗ ಎಂತಹ ಅಗಾಧಕ್ಕಿಟ್ಟುಕೊಂಡಿತ್ತು. ಗೆಜ್ಜಲ ಹುಳು ತಾನಿರಲೆಂದು ಹುತ್ತ ಕಟ್ಟಿ ಹಾವಿಗೆ ಮನೆ ಮಾಡಿಕೊಟ್ಟಂತೆ, ತನ್ನ ಸಣ್ಣ ಹಟ ದೊಡ್ಡ ಅಪವಾದಕ್ಕೆ ಮನೆ ಕಟ್ಟಿಕೊಟ್ಟಿತ್ತು. ತನಗೆ ಈ ತನಕ ಇಲ್ಲಿ ನಡೆದ ಶಾಸ್ತಿಯೆಲ್ಲ, ತಾನು ಮಾಡಿದ ತಪ್ಪಿಗೆ ಶಿಕ್ಷೆಯೆ ಎನಿಸಿತು ಶಾಂತಳಿಗೆ. ಅಲ್ಲಿ ಅವಳ ಪ್ರೀತಿಯನ್ನು ಅಲ್ಲಗಳೆದು

ಬಂದುದಕ್ಕೆ, ಇಲ್ಲಿ ಎಲ್ಲರೂ ತನ್ನನ್ನು ಅಲ್ಲಗಳೆದುದುದಷ್ಟೆ ಅಲ್ಲ, ಹಿಂಸೆ ಮಾಡಲು ಆರಂಭಿಸಿಬಿಟ್ಟರು. ಇದು ನರಕದ ಸಜ ಎಂದುಕೊಂಡಳು. ಅಂತೂ ಇಷ್ಟು ದಿನದಿಂದ ಕಷ್ಟಪಟ್ಟು, ಹೃದಯಕ್ಕೆ ತಾಕಿದ ಪೆಟ್ಟುಗಳನ್ನೆಲ್ಲ ಸಹಿಸಿ ಕೊಂಡ ಶಾಂತಳ ಜೀವ ಹಣ್ಣಾಗುತ್ತಿತ್ತು. ಅದಕ್ಕೆ ಕೊನೆಯ ರೂಪ, ಕೈಚಳಕ ಕೂಡಿಸಿದವಳು ಸರಸಿ. ಆದರೆ ಕೆಲಸ ಇನ್ನೂ ಪೂರ್ತಿಯಾಗಿರಲಿಲ್ಲ. ಅಭಿಮಾನದ ಬೆಂಕಿಯೆಲ್ಲ ಆರಿಹೋಗಿದ್ದರೂ, ಬೂದಿ ಇನ್ನೂ ಬಿಸಿಯಾಗಿಯೆ ಉಳಿದಿತ್ತು. ಅದನ್ನು ಹಾರಿಸುವ ಗಾಳಿಯೊಂದು ಬೇಕಾಗಿತ್ತು !

ಶಾಂತ ಮನೆಗೆ ಬಂದಾಗ ಮನಸ್ಸು ಸುಸ್ತಾಗಿತ್ತು. ಊಟ ಮಾಡಿ ಮಲಗಿಬಿಡಬೇಕೆಂದುಕೊಂಡಳು. ಎಂದೂ ಇಲ್ಲದುದು ಅಂದು ತಂದೆ ಮನೆಗೆ ಬಂದು, ಅಷ್ಟು ಹೊತ್ತಿನಲ್ಲಿ ಆರಾಮವಾಗಿ ಕುಳಿತಿದ್ದರು. ಶಾಂತಳನ್ನು ಅವರು ಕಾಣಲಿಲ್ಲ. ಸಾವಿತ್ರಮ್ಮನವರೊಂದಿಗೆ ಶಾಂತಳ ವಿಷಯವನ್ನೆ ಮಾತಾಡು ತ್ತಿದ್ದರು. ಸಾವಿತ್ರಮ್ಮನವರು ಎಲ್ಲ ವರದಿಯನ್ನೂ ಒಪ್ಪಿಸಿ ಎಂದಿನಂತೆ ಗೊಣಗುತ್ತಿದ್ದರು :

"ನೋಡಿ, ಸುಮ್ಮನೆ ಕೊರಗತಾ ಇದಾಳೆ, ಕೃಶವಾಗತಾ ಇದಾಳೆ. ಏನು ಮಾಡೋದೊ ಗೊತ್ತಿಲ್ಲ. ಜತೆಗೆ ಅವಳಿಗೂ ಲೀಲಳಿಗೂ ಏನೊ ಬಂದಿದೆ. ಮೊದಲು ಸರಿಯಾಗೆ ಇದ್ದರು. ಆದರೆ ಈ ಮಾತು ಎದ್ದಮೇಲೆ ಒಂದು ತರಹ ಆಗಿದಾರೆ ಇಬ್ಬರೂ. ಲೀಲಾ ಕೂಡ ಹಾಗೆ ಆಡಬಾರದು."

"ಹೌದು, ಮಗು ಶಾಂತಳ ಹತ್ತಿರ ಹೋದರೆ ತಪ್ಪೇನು ? ಬಹಳ ಚೆನ್ನಾಗಿದೆ. ರಾಜಣ್ಣನಿಗೂ ಬುದ್ಧಿಯಿಲ್ಲ. ಅವನೊಬ್ಬ ಹೇಳೋನು, ಇವಳು ಕೇಳೋವಳು. ಮಗು ಯಾರ ಹತ್ತಿರ ಹೋದರೆ ಏನಂತೆ ? ಅವಳೇನು ಜಾತಿಗೆಟ್ಟವಳೋ ಏನಂತ ಅಂದುಕೊಂಡಿದಾರೊ ? ಪಾಪ ! ಅವಳಿಗೂ ಮನಸ್ಸಿನಲ್ಲಿರೋದಿಲ್ಲವೆ ! ಅಲ್ಲಿ ಹೇಗೇ ಇರಲಿ, ಏನೇ ಆಗಲಿ, ಗಂಡನ ಮನೆ ಯಿಂದ ಬಂದಿದಾಳೆ. ಅಲ್ಲಿ ಜಗಳ ಆಡಿಕೊಂಡೆ ಬಂದಿರಲಿ, ಏನಂತೆ ಕೆಟ್ಟು ಹೋದದ್ದು. ಅವಳ ಗಂಡ ಬರತಾನೆ, ಕರಕೊಂಡು ಹೋಗತಾನೆ. ಸ್ವಲ್ಪ ನಾವೂ ಸಹನೆ, ಸಹಾನುಭೂತಿ ತೋರಿಸಬೇಕು. ನಮ್ಮ ವಿಚಾರಗಳನ್ನು ನಾವೂ ವಿಚಿತಿಯಿಂದ ನಡೆಸಬೇಕು" ಎಂದರು ರಾಮಸ್ವಾಮಿ.

ತಂದೆಯೂ ತನ್ನ ಪರವಾಗಿ ಮಾತನಾಡುತ್ತಿದಾರೆ. ಆದರ ಅದರ

ಹಿಂದಿದ್ದ ಧ್ವನಿಯೆಂತಹದು ! ತಾನು ಗಂಡನ ಮನೆಯಲ್ಲಿ, ಗಂಡನೊಂದಿಗೆ ಜಗಳವಾಡಿಕೊಂಡು, ಗಂಡನನ್ನು ಬಿಟ್ಟು ಬಂದಿರುವೆನೆಂದು ತಂದೆ ಕೂಡ ತಿಳಿದಿದಾರೆ. ಆ ತಪ್ಪು ಭಾವನೆಯನ್ನೆ ಎಲ್ಲರೂ ಹಿಡಿದಿದ್ದಾರೆ. ತನ್ನದೂ ತಪ್ಪು. ತಾನು ಮೌನಮುದ್ರೆ ಹಾಕಿಕೊಂಡು, ಬಾಯಿ ತೆರೆಯದೆ ಹೋದುದರಿಂದ ತಾನೆ ಇಷ್ಟೆಲ್ಲ ಆಗಲು ಕಾರಣ. ನೋಡೋಣ, ಇನ್ನೆಷ್ಟು ದಿನ ಹೀಗೆ, ಎಂದುಕೊಂಡಳು. ಆ ಕ್ಷಣದಲ್ಲಿ ಸರಸಿಯ ಹಿತದ ಮಾತುಗಳ ಮುಂದೆ ತಂದೆಯ ಈ ತಪ್ಪು ತಿಳಿವಿನ ಸಹಾನುಭೂತಿ ಕೂಡ ಶಾಂತಳಿಗೆ ಬೇಕಾಗಲಿಲ್ಲ—ಅಷ್ಟೇ ಅಲ್ಲಿ ಕಹಿಯಾಯಿತು.

ಶಾಂತ ಬಂದುದನ್ನು ಕಂಡೊಡನೆ ರಾಮಸ್ವಾಮಿ " ಏನು ಶಾಂತ, ಡಾಕ್ಟರ ಮನೆಗೆ ಹೋಗಿದ್ದೆಯೊ ? ಊಟ ಆಯಿತೆ ?—ಇನ್ನೂ ಇಲ್ಲ. ಸರಿ, ಸರಿ—ಊಟ ಮುಗಿಸು ಮೊದಲು. ನಿನ್ನ ಗಂಡನಿಂದೇನಾದರೂ ಕಾಗದ ಬಂದಿತ್ತೆ ? " ಎಂದರು.

" ಇಲ್ಲ " ಎಂದಳು ಶಾಂತ.

" ಬರಲಿ, ಬರಲಿ. ಅವನು ಕಾಗದ ಬರೆದು ನಿನ್ನನ್ನು ಕರೆದುಕೊಂಡು ಹೋಗಲು ಬರುವ ತನಕ ಖಂಡಿತ ಇಲ್ಲಿಂದ ಕಳಿಸುವುದಿಲ್ಲ " ಎಂದರು ರಾಮಸ್ವಾಮಿ.

ಈ ದಿನ ಅವರ ಗರ್ಜನೆ ಒಡಕಾಗಿ ಕೇಳಿಸಿತು ಶಾಂತಳಿಗೆ. ಸುಮ್ಮನೆ ಏನೂ ಮಾತಿಲ್ಲದೆ ಕಾಲು ತೊಳೆದುಕೊಳ್ಳಲು ಬಚ್ಚಲುಮನೆಗೆ ಹೋದಳು. ಇಲ್ಲಿಗೆ ಬಂದ ದಿನದಿಂದ ಇವತ್ತೇ ಮೊದಲು—ಅನ್ನ ರುಚಿಯಾಗಿದ್ದುದು. ಬೇಕಾದುದು, ಹೇಗೋ ಸೇರಿಸಿಕೊಂಡು ಊಟ ಮಾಡಿದಳು.

೮

ತನ್ನ ಅತ್ತಿಗೆ ಹೋಗಿ ಹದಿನೆಂಟು ದಿನಗಳಾಗಿತ್ತು. ಹಾಗೆ ಹೋದ ಹದಿನೆಂಟು ದಿನಗಳಲ್ಲಿ ಅತ್ತಿಗೆ ಒಂದು ಕಾಗದ ಕೂಡ ಬರೆದು ಹಾಕಿರಲಿಲ್ಲ. ಆದರೆ ತಮ್ಮನ್ನೆಲ್ಲ ಮರೆತುಬಿಟ್ಟಳೇನು ಅತ್ತಿಗೆ ? ಹಾಗೆ ಮರೆಯುವಂತಹ ಸ್ವಭಾವವಲ್ಲ. ತಮ್ಮನ್ನೆಲ್ಲ ಎಷ್ಟೊಂದು ಪ್ರೀತಿಯಿಂದ ಕಾಣುತ್ತಿದ್ದಳು. ತನ್ನನ್ನು, ತನ್ನ ತಂಗಿ ವಸಂತುವನ್ನು ಆಸ್ಥೆಯಿಂದ ವಿಚಾರಿಸಿಕೊಳ್ಳುತ್ತಿದ್ದಳು ಅವಳು.

ತನ್ನ ಕ್ರಿಕೆಟ್ ಆಟದ ಬಗ್ಗೆ ಎಲ್ಲರಿಗಿಂತಲೂ ಹೆಚ್ಚು ಆಸಕ್ತಿ ತೋರಿಸಿದವಳು, ಅತ್ತಿಗೆ. ಆದರೆ ಆ ಕ್ರಿಕೆಟ್ಟಿನ ಕಾರಣವಾಗಿಯೆ ಅತ್ತಿಗೆ ತಮ್ಮಿಂದ ದೂರ ವಾದಳು—ಈಗೇನು ಮಾಡುವುದು? ಏನು ಮಾಡುವುದೆಂದು ಯೋಚಿಸಿ ಯೋಚಿಸಿ ಸೀನುವಿನ ತಲೆ ಕೆಟ್ಟಿತ್ತು. ತಾನು ಆ ದಿನ ಮಾಡಿದ ರಂಪ ಇಷ್ಟೊಂದು ರಾದ್ಧಾಂತಕ್ಕಿಟ್ಟುಕೊಳ್ಳುವುದೆಂದು ಅವನಿಗೆನಿಸಿರಲಿಲ್ಲ. ತನ್ನ ಕ್ರಿಕೆಟ್ಟಿನ ಮೋಹದ ಬಲೆಯಲ್ಲಿ ಬಿದ್ದು, ತನ್ನ ಮನಸ್ಸು ಹದಗೇಡಿಯಾಗಿತ್ತು. ಕಟು ಮಾತಿನಿಂದ ಅತ್ತಿಗೆಯನ್ನು ನೋಯಿಸಿ ಮನೆ ಬಿಟ್ಟು ಹೊರದೂಡಿತ್ತು. ಈಗ ಅತ್ತಿಗೆ ದೂರವಾದಳು. ನಿಜವಾಗಿಯೂ ತಮ್ಮಿಂದ ದೂರವಾದಳೆ—ಇಲ್ಲವೆ ತಮ್ಮ ಹಾಗೆಯೆ ಅವಳೂ ಒದ್ದಾಡುತ್ತಿರುವಳೆ! ಅತ್ತಿಗೆ ತಮ್ಮಲ್ಲಿ ತೋರು ತ್ತಿದ್ದ ಅಭಿಮಾನವೇನೊ ಬಹಳ. ಆದರೆ ಅಷ್ಟೊಂದು ಪ್ರೀತಿ, ಆದರವಿದ್ದರೂ ಊರಿಗೆ ಹೋದಮೇಲೆ ಒಂದು ಕ್ಷೇಮಸಮಾಚಾರದ ಪತ್ರ ಹಾಕಬಾರ ದಾಗಿತ್ತೆ? ಈ ಮಾತು ತನಗೊಬ್ಬನಿಗೆ ಅನಿಸಿದುದಲ್ಲವೆಂದು ಸೀನುವಿಗೆ ಗೊತ್ತು. ಮನೆಯಲ್ಲಿ ಎಲ್ಲರಿಗೂ ಹಾಗೆಯೆ ಅಗಿಸಿತ್ತು. ಗಂಗಮ್ಮನವರಿಗೂ ಶಾಂತಳಿಂದ ಒಂದು ಕಾಗದ ಬಂದಿದ್ದರೆ ಚೆನ್ನಾಗಿತ್ತು ಎನಿಸಿತು. ಅದನ್ನು ಬಾಯಲ್ಲಿ ಅಂದು ಭಾರ ಕಳೆದುಕೊಂಡರು. ಉಳಿದವರು ಅದನ್ನು ಆಡಲಿಲ್ಲ, ಆದರೆ ಮುಖದಲ್ಲೆ ನೋಡಿಕೊಂಡರು. ಯಾರೂ ಎತ್ತಿ ಆಡದಿದ್ದರೂ ಒಳ ಗೊಳಗೆ ಇದು ಕೊರೆಯುತ್ತಿತ್ತು. ಸೀನುವಿಗೂ ಇದರ ಅರಿವು ಚೆನ್ನಾಗಿ ಆಗಿತ್ತು.

ಮನೆಯಲ್ಲಿ ಯಾರಿಗೂ ಏನೂ ಬೇಕಿದ್ದಂತೆ ಕಾಣಲಿಲ್ಲ. ಶಾಂತ ಹೊರಟುಹೋದ ದಿನದಿಂದ ಮನೆ ಬಿಕ್ಕೊ ಎನ್ನಿಸಿತು. ಯಾವಾಗಲೂ ನಗುನಗುತ್ತ ಓಡಿಯಾಡಿಕೊಂಡು, ನಾದಿನಿಯನ್ನು ಮುದ್ದಾಡುತ್ತ, ಮನೆ ಯನ್ನು ಹೂವರಳಿಸುವಂತೆ ಅರಳಿಸುವ ಶಾಂತ ಈಗ ಇರಲಿಲ್ಲ. ದೇವರ ವಿಗ್ರಹ ಇಲ್ಲದ ಗುಡಿಯಂತೆ ಮನೆ ತುಂಬು ಕೊರತೆಯ ಮೌನದಲ್ಲಿ ಕೊರಗುತ್ತಿತ್ತು. ಅಳುವಿನ ಭಾರದಿಂದ ಮುಖ ಸಪ್ಪೆಗೊಳ್ಳುವಂತೆ ಮನೆಯ ವಾತಾವರಣ ಸಪ್ಪೆಗೊಂಡಿತ್ತು. ಯಾರಿಗೂ ಆಸಕ್ತಿ ಇರಲಿಲ್ಲ. ಊಟ, ತಿಂಡಿ ಎಲ್ಲ ಆದರೆ ಆಯಿತು, ಇಲ್ಲದಿದ್ದರೆ ಇಲ್ಲ. ರಂಗಣ್ಣನವರು ಕೂಡ ಏನೋ ಕೊರಗು ಹಚ್ಚಿಕೊಂಡವರಂತೆ ಸಣ್ಣಾಗಿಹೋಗಿದ್ದರು. ಊಟಕ್ಕೆ ಕೂತರೆ ಏನೋ ಕಹಿ ಕಹಿಯಾದಂತಾಗಿ ಎದ್ದುಬಿಡುತ್ತಿದ್ದರು. ಮನಸ್ಸಿನಲ್ಲಿ ಒಂದು ರೀತಿಯ ಹೇಳ

ಲಾರದ ಕಿರಿಕಿರಿ. ಶಾಂತ ಹೊರಟುಹೋದುದಕ್ಕೂ, ಈ ಅಶಾಂತತೆಗೂ ಗಂಟು ಹಾಕಿದ್ದಲ್ಲಿ ಅವರು ನಂಬುತ್ತಿರಲಿಲ್ಲ. "ಹಾಂ! ಸೊಸೆ ಹೋಗುವುದಕ್ಕೂ ಇದಕ್ಕೂ ಏನು ಸಂಬಂಧ! ಏನೊ ಮೈ ಕೆಟ್ಟಿದೆ, ಅಷ್ಟೆ" ಎಂದು ಹಾರಿಸಿ ಮಾತಾಡುತ್ತಿದ್ದರು. ಆದರೆ ಮೈ ಕೆಟ್ಟಿಲ್ಲವೆಂಬುದು ಅವರಿಗೂ ಗೊತ್ತು, ಉಳಿದವರಿಗೂ ಗೊತ್ತು. ಆದರೆ ಯಾರೂ ಧೈರ್ಯವಾಗಿ ಅವರಿಗೆ ಹೇಳಲಾರರು. ಅವರೂ ತಮ್ಮ ಮನಸ್ಸಿನ ಕಲಕಾಟವನ್ನು ಹೇಳಿಕೊಳ್ಳಲಾರರು, ಅದರ ನಿಜವಾದ ಕಾರಣವನ್ನು ಒಪ್ಪಿಕೊಳ್ಳುವುದೂ ಅವರಿಂದಾಗದು. ಅಂತೂ ಒಲ್ಲದಿದ್ದರೂ ಹೇಗೊ ಎಲ್ಲವನ್ನೂ ಸವರಿಸಿಕೊಂಡು ಹೋಗುವಂತಿದ್ದರು ರಂಗಣ್ಣ. ಅವರಲ್ಲಿ ಕೊಂಚಮಾತ್ರವೆ ತೋರಿಬರುತ್ತಿದ್ದ ಉದಾಸ ಭಾವ ಮನೆಯಲ್ಲಿ ಉಳಿದವರನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿತ್ತು. ಗಂಗಮ್ಮನವರಂತೂ ಪೂರ್ತಿ ತೆಗೆದೇ ಹೋಗಿದ್ದರು. ಹದಿನೈದು ದಿನಗಳಲ್ಲಿ ಅವರು ಅರ್ಧಕ್ಕರ್ಧವಾಗಿ ಹೋಗಿದ್ದರು. ಅವರಿಗೆ ಯಾವಾಗಲೂ ಸೊಸೆಯ ಯೋಚನೆಯೊಂದೇ. ತಲೆಯ ಮೇಲೆ ಏನೋ ಹೊರೆ ಹೊರಿಸಿದಂತೆ ಪೆಚ್ಚು ಮೋರೆ ಹಾಕಿಕೊಂಡು ಮನೆಗೆಲಸದಲ್ಲಿ ತೊಡಗಿರುತ್ತಿದ್ದರು. ಶಾಂತ ಊರಿಗೆ ಹೊರಟುನಿಂತಾಗ ತಾವೆಷ್ಟು ಪ್ರಯತ್ನಪಟ್ಟರೂ ಅವಳನ್ನು ನಿಲ್ಲಿಸಿಕೊಳ್ಳಲು ಸಾಧ್ಯವಾಗಲಿಲ್ಲವಲ್ಲ ಎಂದು ಕೊರಗು ಕಾಡುತ್ತಿತ್ತು. ಹೋದ ಒಂದೆರಡು ದಿನ ಶಾಂತಳ ಮೇಲೆ ಅವರಿಗೆ ಕೋಪವೆ ಬಂದಿದೆಯೇನೊ ಎನ್ನುವಂತಿತ್ತು. ತಾವೆಲ್ಲ ಇಷ್ಟು ಹೇಳಿದರೂ ಕೇಳದೆ ಹೊರಟುಹೋದಳಲ್ಲ, ಅವಳದೆಂತಹ ಹೆಡಸು, ತಾವು ಮಗಳಿಗಿಂತಲೂ ಹೆಚ್ಚು ಪ್ರೀತಿಯಿಂದ, ಜೋಪಾನದಿಂದ ಸಾಕಿದ್ದುದೆಲ್ಲ ವ್ಯರ್ಥವಾಯಿತು. ತಮ್ಮ ಅಕ್ಕರೆಯನ್ನೆಲ್ಲ ಬೀಳುಗೊಳಿಸಿ, ಹಟ ಹಿಡಿದು ಹೊರಟಳಲ್ಲ ಶಾಂತ ಎಂದು ಮನಸ್ಸು ಮಿಡುಕಿತು. ಆದರೆ ಈ ಅಸಮಾಧಾನ ಅಸ್ಪಷ್ಟವಾಗಿತ್ತು. ಎಲ್ಲಾ ಕರ್ಮ, ವಿಧಿ — ಹೀಗಾಗಬೇಕೆಂದು ತಮ್ಮ ಹಣೆಯಲ್ಲಿ ಬರೆದಿತ್ತು, ಆದ್ದರಿಂದಲೆ ಹೀಗಾಯಿತು ಎಂಬ ಸಮಾಧಾನದ ಅಸಮಾಧಾನ ರೂಪುಗೊಳ್ಳುತ್ತಿತ್ತು. ಕೋಪದ ಕಾವು ಇಳಿದು ಶಾಂತ ಹಿಂದಕ್ಕೆ ಬರುವಳೆಂದು ಅವರು ಎಣಿಸಿದ್ದುದು ತಪ್ಪಾಗಿತ್ತು. ಸೊಸೆ ಹೀಗೆ ಮಾಡಲಾರಳೆಂದಿದ್ದ ಅವರ ಮನಸ್ಸಿಗೆ ಇದೊಂದು ಆಘಾತವಾಯಿತು. ಅವಳು ಹೊರಟು ಹೋದ ಒಂದೆರಡು ದಿನ ಅವಳ ಮೇಲೆ ಅಸಮಾಧಾನವೂ ಇತ್ತು. ಮನಸ್ಸು

ಅವಳ ಕಡೆಗೆ ತುಯ್ಯುತ್ತಿತ್ತು. ಬಸುರಿ ಬೇರೆ—ಇನ್ನೇನೊ ಎಂತೊ, ಎಂದು ಅವರ ಕರುಳು ತುಡಿಯುತ್ತಿತ್ತು. ತಮ್ಮೆಲ್ಲರ ಮಾತನ್ನು ಅಲ್ಲಗಳೆದು, ಸೀನುವಿನ ಮಾತಿಗೆ ಬೆಲೆ ಕೊಟ್ಟಳಲ್ಲ ಅವಳು—ತಾವು ಹೋಗಬೇಡವೆಂದು ಪರಿಪರಿಯಾಗಿ ಹೇಳಿದರೂ ಕೇಳದೆ ಅವನ ಕುಹಕ ಮಾತನ್ನೆ ಹೆಚ್ಚು ಮಾಡಿಕೊಂಡು ಹೊರಟುಹೋದುದು ಸೊಸೆಯದೆ ತಪ್ಪು. ಅನುಭವಿಸಲಿ, ಎಂದು ಮನಸ್ಸನ್ನು ಕಟು ಮಾಡಿಕೊಂಡು ಶಾಂತಳ ಯೋಚನೆಯಿಂದ ಬೇರೆ ಕಡೆ ತಿರುಗಿಸಲು ಪ್ರಯತ್ನ ನಡಸಿದ್ದರು. ಆದರೆ ಹೆಂಗರುಳು, ಹೃದಯದ ಪ್ರೀತಿಯ ಕಾತರದಲ್ಲಿ ಈ ಕಟುತ್ವ ಕರಗಿಹೋಗುತ್ತಿತ್ತು, ಮತ್ತೆ ಮನಸ್ಸು ಒದ್ದಾಡುತ್ತಿತ್ತು. ಹೇಗಾದರೂ ಸರಿ, ಸೊಸೆಯ ಕ್ಷೇಮಸಮಾಚಾರ ತಿಳಿದುಕೊಳ್ಳಬೇಕು. ಅಷ್ಟಾದರೆ ಸಾಕು. ಶಾಂತಳೆ ಕಾಗದ ಹಾಕುವಳು, ಕ್ಷೇಮಸಮಾಚಾರ ತಿಳಿಯುವುದೆಂದುಕೊಂಡಿದ್ದುದು ನಿರಾಶೆಯಾಯಿತು. ಮೊದಲ ದಿನ ರಾತ್ರಿಯೆ ಶಾಂತಳ ಗಂಡ ಮನೆಗೆ ಬಂದಾಗ ಅವನಿಗೆ ಎಲ್ಲ ವರದಿಯನ್ನೂ ಒಪ್ಪಿಸಿದ್ದರು. ಅವನೇನೂ ಮಾತನ್ನೆ ಆಡಿರಲಿಲ್ಲ. ಅವನ ಈ ಮೌನ ಸಹಜವೆಂಬುದು ಅವರಿಗೆ ಗೊತ್ತು. ಯಾವತ್ತೂ ಹೆಚ್ಚಿಗೆ ಮಾತಿಗೆ ಹೋಗದವನು ತಮ್ಮ ಮಗ. ಈಗಲೂ ಅಷ್ಟೆ. ಆದರೆ ಏನಾದರೂ ಒಂದು ಮಾತನ್ನು ಅವನು ಆಡಿದ್ದರೆ ಚೆನ್ನಾಗಿತ್ತು ಎನಿಸಿತು ಗಂಗಮ್ಮನವರಿಗೆ. ಹೇಳಿದುದನ್ನೆಲ್ಲ ಕೇಳಿಕೊಂಡು 'ಹೂಂ, ಹೂಂ' ಎಂದಿದ್ದನೆ ಹೊರತು ಒಮ್ಮೆಯಾದರು ತುಟಿ ಪಿಟಕ್ಕೆಂದಿರಲಿಲ್ಲ. ಆದರೆ ಅವನ ಮನಸ್ಸಿಗೂ ಈ ಪ್ರಸಂಗದಿಂದ ನೋವಾಗಿದೆಯೆಂದು ಗಂಗಮ್ಮನವರಿಗೆ ಗೊತ್ತು. ಅವನದೇನು ತಪ್ಪಿಲ್ಲದಿದ್ದರೂ ಹೆಂಡತಿಯಿಂದ ಬೇರೆಯಾಗಬೇಕಾಯಿತು. ಪಾಪ! ಎಂದು ಅವನಿಗಾಗಿ ಕರುಳು ಮಿಡುಕಿ, ಸೊಸೆಯ ಮೇಲೆ ಮನಸ್ಸು ಸಿಡುಕಿತು. ಗಂಡ ಮನೆಗೆ ಬಂದಮೇಲೆ ಅವನಿಗೆ ಹೇಳಿಯಾದರೂ ಹೋಗೆಂದು ಹೇಳಿದಾಗ, ಶಾಂತ ಕೊಂಚ ತೇಲಿಸಿ ಮಾತನಾಡಿದ್ದಳು. ಅದೇನು ಅಸಡ್ಡೆಯೊ, ಅಹಂಕಾರದ ಮಾತೊ—ಗಂಗಮ್ಮನವರಿಗೆ ಸರಿಯಾಗಿ ತಿಳಿಯಲಿಲ್ಲ. ಆದರೆ ಶಾಂತ ಹಾಗೆ ಮಾತನಾಡಿದುದು ತಪ್ಪು, ಅದೂ ಗಂಡನ ಬಗ್ಗೆ ಹಾಗೆ ಅವಳು ಹೇಳಿದುದು ತಪ್ಪೆಂದು ಅವರಿಗೆ ಅನಿಸಿತು. ಮಗ ತಟ್ಟೆಯ ಮುಂದೆ ಕುಳಿತವನು ಸರಿಯಾಗಿ ಊಟ ಮಾಡುತ್ತಿಲ್ಲ, ಸುಮ್ಮನೆ 'ಹೂಂ, ಹೂಂ' ಎನ್ನುತ್ತಿದಾನೆಂದು ಮರುಕ ಕೆರಳಿದಾಗ ಸೊಸೆಯ ಬಗ್ಗೆ ಅಸಮಾ

ಧಾನವೂ ಬೆದಕಿ ಎದ್ದಿತು. ಆಗಲೆ ಈ ಮಾತೂ ನೆನಪಾಗಿ ಸಿಡುಮಿಡಿಯನ್ನು ಆಡಿದರು: "ಏನು ಹುಡುಗಿಯೊ! ಅಹಂಕಾರ, ದುರಹಂಕಾರದ ಮಾತು!" ಎಂದಷ್ಟೆ ಅಂದರೂ ಆಗಲೂ ಮಗ ಸುಮ್ಮನಿದ್ದನೆ ಹೊರತು ಮಾತಾಡಲಿಲ್ಲ. ತಾವು ಹಾಗಂದುದು ತಪ್ಪಿರಬಹುದೊ ಏನೊ ಎಂದು ಗಂಗಮ್ಮನವರಿಗೆ ತಕ್ಷಣವೆ ಅನಿಸಿತು. ಆದರೂ ಮಾತು ಬಿಡಲಿಲ್ಲ. "ನೀನು ಬರುವ ತನಕ ಇರು ಅಂತ ಹೇಳಿದೆ. ಗೋಗರೆದರೂ ಕೇಳದೆ ಹೊರಟುಹೋದಳು. ಹೋದರೆ ಹೋಗಲಿ. ಅಸಡ್ಡೆಯಾದರೆ, ನೀನೇನು ಕಳಪೆ ಬಿದ್ದುಹೋಗಿದೀಯೇನು! ಅಷ್ಟೊಂದು ಅಸಡ್ಡೆಯಾಗಿಹೋಯಿತೆ!" ಎಂದರು. ಮಗನೊಮ್ಮೆ ಅವರ ಮುಖ ನೋಡಿದ. ತಾಯಿಯ ಮನಸ್ಸಿನಲ್ಲಿದ್ದ ಸಂಕಟ, ಮುಖದಲ್ಲಿ ಕಾಣಿಸಿತೇನೊ, ಸುಮ್ಮನೆ ತಿರುಗಿ ತಲೆ ತಗ್ಗಿಸಿದ. ಅವನ ಕಣ್ಣಿನಲ್ಲಿದ್ದ ಮರುಕದ ನೋಟ ಗಂಗಮ್ಮನವರಿಗೆ ಕಾಣಲಿಲ್ಲ. ಬಾಯಲ್ಲಿ ಹಾಗೆ ಆಡಿದರೂ ಮನಸ್ಸಿನಲ್ಲಿ ಅವಲಕ್ಕಿ ಕುಟ್ಟುತ್ತಿತ್ತು. ಈಗ ಶಾಂತಳ ಜವಾಬ್ದಾರಿ ಅವಳೊಬ್ಬಳದೆ ಅಲ್ಲ. ಸೊಸೆ ಅಂದರೆ ಪ್ರೀತಿ. ಈಗ ತಮ್ಮ ಮೊಮ್ಮಗನನ್ನು ಹೊಟ್ಟೆಯಲ್ಲಿ ಹೊತ್ತ ತಾಯಿ ಜೀವ ಅವಳು. ಅದನ್ನು ಚೆನ್ನಾಗಿ ಕಾಪಿಡಬೇಕು, ಅದಕ್ಕೆ ಯಾವ ಬಗೆಯ ಆತಂಕವೂ ಆಗಬಾರದೆಂದು ಗಂಗಮ್ಮನವರು ಒದ್ದಾಡಲಾರಂಭಿಸಿದರು. ಎಂತೊ ಏನೊ ಎಂಬುವ ಗಾಬರಿ. ಹೀಗಾಗಿ ಒಂದೆರಡು ದಿನದಲ್ಲೆ ಅವರಿಗೆ ಶಾಂತಳನ್ನು ನೋಡಬೇಕೆನ್ನುವ ಹಂಬಲ ಬಂದುಹೋಯಿತು. ಯಾವಾಗಲೂ ಸೊಸೆಯ ಯೋಚನೆ. ಶಾಂತ ಹೀಗೆ ನಿಲ್ಲುತ್ತಿದ್ದಳು, ಆ ದಿನ ಹಾಗೆ ಮಾತನಾಡಿದ್ದಳು, ಈ ರೀತಿಯಲ್ಲಿ ನಗುತ್ತಿದ್ದಳು ಎಂದೆಲ್ಲ ಕಣ್ಣಮುಂದೆ ನೋಟಗಳು ಬಂದು ನೆನಪನ್ನು ಕಲಕುತ್ತಿದ್ದವು. ಮತ್ತೆ ಮತ್ತೆ ಶಾಂತಳ ಕಡೆ ಹಂಬಲ ತುಯ್ಯುತ್ತಿತ್ತು. ಮೊದಲೆರಡು ದಿನವಿದ್ದ ಅಸಮಾಧಾನವೆಲ್ಲ ಈಗ ಅರಗಿಹೋಗಿತ್ತು. ಈಗ ಒಂದೇ ಒಂದು ಯೋಚನೆ, ಒಂದೇ ಒಂದು ಆಸೆ, ಒಂದೇ ಒಂದು ಆತಂಕ: ಶಾಂತಳ ಕ್ಷೇಮಸಮಾಚಾರ ತಿಳಿದರೆ ಸಾಕು, ಹೇಗಾದರು ಸರಿ, ಅವಳು ಮತ್ತೆ ಮನೆಗೆ ಬಂದರೆ ಸಾಕು ಎನಿಸಿಬಿಟ್ಟಿತ್ತು. ಶಾಂತಳ ಹಂಬಲ ಹೆಚ್ಚಿದಂತೆ, ಅವರ ಅಸಮಾಧಾನ ಬೇರೆ ಕಡೆ ಹರಿಯಿತು. ಶಾಂತಳೇನೊ ಹೊರಟು ನಿಂತಳು, ನಿಜ. ಆಗ ತಮ್ಮ ಸಾಂತ್ವನಕ್ಕೆ, ಸಮಾಧಾನದ ಮಾತಿಗೆ ಬೆಲೆ ಕೊಟ್ಟು ಅವಳು ನಿಲ್ಲುತ್ತಿದ್ದಳು. ನಿಜಕ್ಕೂ ಶಾಂತಳಿಗೆ

ಮನೆ ಬಿಟ್ಟು ಹೋಗುವ ಇಷ್ಟವೆ ಇರಲಿಲ್ಲ. ಆ ಸಮಯದ ರೇಗಿನಲ್ಲಿ, ಮಾತಿನ ರೋಸಿನಲ್ಲಿ ಹುಚ್ಚಾಪಟ್ಟೆ ಕುಣಿದಾಡಿದ್ದಳು. ಆದರೆ ಆಗ ಕೂಡ, ಆ ಹಟದಲ್ಲಿ ಕೂಡ ತಮ್ಮ ಆದರದ ಮಾತಿಗೆ ಬೆಲೆ ಕೊಟ್ಟು ಮನೆಯಲ್ಲಿ ನಿಲ್ಲುವಂತೆ ತೋರಿತ್ತು. ಶಾಂತಳ ಮನಸ್ಸು ಅರ್ಧ ಕರಗಿತ್ತು. ಆಗ ಇನ್ನು ಒಂದೆರಡು ಒಳ್ಳೆಯ ಮಾತಾಡಿದ್ದರೆ ಶಾಂತ ಬಗ್ಗುತ್ತಿದ್ದಳು. ಈ ಅನರ್ಥ ಆಗುತ್ತಿರಲಿಲ್ಲ. ಆದರೆ ಈಗ ಹೀಗಾಗಿಹೋಗಿತ್ತು. ಎಲ್ಲಕ್ಕೂ ಮಧ್ಯೆ ಬಾಯಿ ಹಾಕಿಕೊಂಡು ಬಂದು ಸೀನು ಎಲ್ಲವನ್ನು ಹಾಳುಮಾಡಿಬಿಟ್ಟಿದ್ದ. ತಾವು ಅಷ್ಟು ಕಷ್ಟಪಟ್ಟು ಸೊಸೆಯನ್ನು ಸಮಾಧಾನಕ್ಕೆ ತಂದಿದ್ದಾಗ ಅವನು ಮತ್ತೆ ಕೆರಳುವ ಮಾತಾಡಿ, ಮತ್ತೆ ಕೋಪವನ್ನು ಬೆದಕಿದ್ದ. ಆದ್ದರಿಂದ ಸೀನು ಹೀಗೆ ಮಾಡದಿದ್ದರೆ ಸೊಸೆ ಮನೆಯಲ್ಲೇ ಉಳಕೊಳ್ಳುತ್ತಿದ್ದಳೆಂದು ಗಂಗಮ್ಮ ನವರಿಗೆ ಅನಿಸಿತು. ಇದರಿಂದಾಗಿ ಅವರ ಹೃದಯದಲ್ಲಿ ತುಂಬಿದ್ದ ಅಸಮಾಧಾನ ವೆಲ್ಲ ಸೀನುವಿನ ಕಡೆಗೆ ಹರಿಯಿತು. ಮೊದಲೆರಡು ಮೂರು ದಿನ ಶಾಂತಳ ಬಗ್ಗೆ ಇದ್ದ ಅಸಮಾಧಾನಕ್ಕಿಂತ ಈಗ ಸೀನುವಿನ ಮೇಲೆ ತೀಕ್ಷ್ಣವಾದ ಕೋಪ ಅವರಿಗೆ ಬಂದಿತು. ಅದರ ಬಿಸಿ ಸೀನುವಿಗೂ ಮುಟ್ಟಿತು. ಅವರು ಎಷ್ಟೇ ರೀತಿಯಲ್ಲಿ ಅದನ್ನು ತಡೆಯಲು ಯತ್ನಿಸಿದರೂ ಮನಸ್ಸಿನ ಆವೇಗದಲ್ಲಿ ಅವರು ಮಾತಿಗೆ ಕಟ್ಟುಹಾಕಲು ಆಗುತ್ತಿರಲಿಲ್ಲ. "ಸೀನು ಹಾಗೆ ದುಡುಕಿ ಮಾತಾಡದೆ ಹೋಗಿದ್ದರೆ ಶಾಂತ ಇವತ್ತು ಇಲ್ಲಿರುತ್ತಿದ್ದಳು" ಎಂದು ಒಂದು ದಿನ ಪಾಯಸದ ಊಟಕ್ಕೆ ಕುಳಿತಾಗ ಹೇಳಿದರು. ಎಲ್ಲರಿಗೂ ಪಾಯಸ ಕಹಿಯಾಯಿತು, ತಟ್ಟೆಗೆ ಬಡಿಸಿದುದೆಲ್ಲ ಹಾಗೆಯೆ ಉಳಿಯಿತು. "ಹುಂ, ಏನೇನು ಕರ್ಮ ಅನುಭವಿಸಬೇಕೊ. ಅರಿಯದ ಹುಡುಗರಾದರೆ, ತಪ್ಪು ಮಾಡಿದಾಗ ಎರಡು ಬಿಗಿಯಬಹುದು. ದೊಡ್ಡವರಾಗಿ, ವಯಸ್ಸಾಗಿ, ತಿಳಿದವರಿಗೆ ಹೇಳುವುದಕ್ಕೆ ನಾವು ಯಾರು? ಇಷ್ಟಕ್ಕೂ ನಾನೇನು ಓದಿದ್ದೇನೆಯೆ, ಬರೆದಿದ್ದೇನೆಯೆ" ಎಂದು ಸೂಚ್ಯವಾಗಿ ಮತ್ತೊಮ್ಮೆ ಅಂದರು. ಸಂಕಟ ಮೂಕವಾಗಿ ಉಳಿಯ ಲಾರದೆ ಹೀಗೆ ಮಾತಾಗಿ ಉರುಳುತ್ತಿತ್ತು. ಒಂದೊಂದು ಮಾತೂ ಸೀನುವಿನ ಹೃದಯಕ್ಕೆ ಸಣ್ಣ ಸೂಜಿಯಂತೆ ಚುಚ್ಚುತ್ತಿತ್ತು. ಆದರೆ ಅವನು ಕೂಡ ತನ್ನ ಮನಸ್ಸಿನಲ್ಲಿರುವುದನ್ನು ಹೇಳಿಕೊಳ್ಳಲಾರ—ಅನುಭವಿಸಲಾರ. ತಾಯಿಯ ಮಾತಿನಿಂದ ಒಂದೆರಡು ಬಾರಿ ನೊಂದುದಕ್ಕಿಂತ ಹೆಚ್ಚಾಗಿ ರೇಗಿ ಉರವಣಿಸಿ

ದುದೂ ಉಂಟು. ಆದರೆ ಅದು ಬರಿಯ ಉರವಣಿಕೆ! ತಾಯಿಗಾಗಲಿ, ಮತ್ತಾರಿಗಾಗಲಿ ತೋರದಂತಹುದು. ತನ್ನ ಮೇಲೆ ತಾಯಿಗೆ ಕೋಪ ಬರುವುದು ಸಹಜವೆ—ಆದರೆ ಆ ಕೋಪದ ಹಿಂದೆ ಎಂತಹ ನೋವು ತುಂಬಿದೆ, ಇಣಿಕಿ ಕಾಣುತ್ತಿದೆ ಎಂಬುದನ್ನು ಸೀನು ಚೆನ್ನಾಗಿ ಬಲ್ಲ. ಹೀಗಾಗಿ ಗಂಗಮ್ಮನವರು ಏನಾದರೂ ಅಂದರೆ ಕೂಡ ಸೀನು ತಲೆ ತಗ್ಗಿಸಿ ಕೇಳುತ್ತಿದ್ದು ಸುಮ್ಮನಿದ್ದುಬಿಡುತ್ತಿದ್ದ. ದೊಡ್ಡ ಮಗನಿಗೆ ಮಾತಾಡಿದರೆ ಸುಮ್ಮನಿರುವುದು ರೂಢಿ. ಆದರೆ ಸೀನು ಏನೆಂದರೂ ಉಗ್ರವಾಗಿ ರೇಗಿಬೀಳುವವನು, ಎಗರಾಡುವವನು ತೆಪ್ಪಗೆ ಮಾತಿಲ್ಲದೆ ಕೂತಿರುವುದನ್ನು ಕಂಡು ಗಂಗಮ್ಮನವರಿಗೆ ಇನ್ನೂ ಬಿಕ್ಕೊ ಎನಿಸಿತು. ಅವನೇನಾದರೂ ಎದುರು ಮಾತಾಡಿದ್ದರೆ ತಮ್ಮ ಮನಸ್ಸಿನ ಕಿಲುಬನ್ನೆಲ್ಲ ಕಿತ್ತು ಅವನ ಮುಂದೆ ಎಸೆದು, ಆಮೇಲೆ ಅತ್ತು ಕರೆದು ಸಮಾಧಾನಪಡಿಸಿ ಸಮಾಧಾನಗೊಳ್ಳುತ್ತಿದ್ದರು. ಆದರೆ ಅದಕ್ಕೆ ಅವಕಾಶವೆ ಸಿಗಲಿಲ್ಲ. ಹೀಗಾಗಿ ಮನಸ್ಸಿನಲ್ಲಿ ಬೆಂಕಿ ಹೊಗೆಯಾಡುತ್ತಲೆ ಇತ್ತು. ತಮ್ಮಷ್ಟಕ್ಕೆ ತಾವೆ ಗೊಣಗಿಕೊಳ್ಳುತ್ತಿದ್ದರು. ಐದಾರು ದಿನದ ಮೇಲೆ ಒಂದು ದಿನ "ಹಾಳು ಕ್ರಿಕೆಟ್ಟು—ಯಾವಾಗಲೂ ಕ್ರಿಕೆಟ್ಟಂತ ಹೊಡಕೊಳ್ಳುತ್ತಿದ್ದ. ಉದ್ಧಾರ ಮಾಡಿತಲ್ಲ ಇವನ ಕ್ರಿಕೆಟ್ಟು. ಮನೆಹಾಳು ಆಟ" ಎಂದು ಗೊಣಗಿದುದು ಸೀನುವಿನ ಕಿವಿಗೆ ಬಿತ್ತು. ಒಂದು ಗಳಿಗೆ—ಅದನ್ನು ಕೇಳಿದೊಡನೆ ಅವನ ಬುದ್ಧಿ ಭುಗಿಲ್ಲನೆದ್ದು ಉರಿಯಿತು. ಆದರೆ ಮರುಗಳಿಗ್ಗೆ ಎಂದೂ ಇಲ್ಲದ ಸಂಯಮ ಬಂದು ಕೈ ಹಿಡಿದು ಬೆಂಕಿಯನ್ನಾರಿಸಿತು. ತಾಯಿ ಅಂದುದು ಸರಿ ಎಂದು ಅವನಿಗೆ ಆ ಕ್ಷಣದಲ್ಲಿ ಅನ್ನಿಸಿತು. ತಾನು ತಪ್ಪು ಮಾಡಿದೆ, ತನ್ನದು ದೊಡ್ಡ ತಪ್ಪಾಯಿತೆಂದು ತಿಳಿದು ಸುಮ್ಮನಿದ್ದ. ತಾಯಿ ತನ್ನನ್ನು ಇನ್ನೂ ಹೆಚ್ಚಿಗೆ ಬೈದರೂ ಚಿಂತೆಯಿಲ್ಲ; ತನಗೆ ಆಗಬೇಕಾದ ಶಾಸ್ತಿ ಅದೇ ಎಂದೂ ಅಂದುಕೊಂಡ. ಗಂಗಮ್ಮನವರಿಗೆ ಸೀನುವಿನ ಮೇಲಿನ ಅಸಮಾಧಾನ ಕೂಡ ಬಹಳ ದಿನ ಉಳಿಯಲಿಲ್ಲ. ಕೊನೆಗೆ ಆ ಅಸಮಾಧಾನ ಎಲ್ಲರ ಮೇಲೂ ಸಿಡುಕಿನಲ್ಲಿ ಕೊನೆಗೊಂಡಿದ್ದುದು, ತಮ್ಮ ಮೇಲೆ ತಿರುಗಿತು. ಯಾವಾಗಲೂ ಈಗ ಶಾಂತಳ ಹಂಬಲವೆ ಆಗಿಹೋಯಿತು. ಹುಂ—ಇಷ್ಟು ದಿನವಾಯಿತು, ಇನ್ನೆಲ್ಲಿ ಬರುತ್ತಾಳೆ, ಕಾಗದ ಕೂಡ ಹಾಕಲಿಲ್ಲ ಎಂದು ನೊಂದುಕೊಂಡು ಕೊರಗುತ್ತಿದ್ದರು. ಒಂದು ದಿನವಂತೂ ತಮ್ಮ ಯಜಮಾನರನ್ನೆ

ಕೇಳಿಬಿಟ್ಟರು : " ನೀವಾದರೂ ಒಂದು ಕಾಗದ ಹಾಕಬಾರದೆ ? ಅರಿಯದ ಹುಡುಗಿ, ಬಸುರಿ ಬೇರೆ. ಏನೋ ಕೋಪದ ಸಮಯದಲ್ಲಿ ಹೊರಟು ಹೋಯಿತು ಅಂತ ನಾವೂ ಹಟ ಹಿಡಿಯಬೇಕೆ—ನೀವಾದರೂ ಬೀಗರಿಗೆ ಬರೆಯಿರಿ. ಇಲ್ಲದಿದ್ದರೆ ಅವಳಿಗೆ ಒಂದು ಕಾಗದ ಹಾಕಿ " ಎಂದು ಅಂಗಲಾಚಿ ಕೊಂಡರು. ರಂಗಣ್ಣನವರಿಗೂ ಶಾಂತ ಬರಬೇಕೆಂದು ಮನಸ್ಸಿದ್ದರೂ ಕಾಗದ ಹಾಕುವುದು ಸಾಧ್ಯವಿಲ್ಲವೆನಿಸಿತು. ತಾವಾಗಿಯೆ ಬೀಗರಿಗೆ ಕಾಗದ ಹಾಕುವು ದೆಂದರೆ, ತಮ್ಮಲ್ಲಿ ಏನೊ ಹುಳುಕಿದೆಯೆಂದು ಒಪ್ಪಿದಂತಾಯಿತೆಂದು ಅವರ ಠಾಯರುಬುದ್ಧಿ ವಾದ ಹೂಡಿತು. ಅಂದಮೇಲೆ ತಾವು ಬೀಗರಿಗೆ ಹೇಗೆತಾನೆ ಬರೆಯುವುದು. ಅಲ್ಲದೆ ಆಗ ಶಾಂತಳನ್ನು ಹೋಗಬೇಡವೆಂದು ತಾವು ಎಲ್ಲರೂ ಹೇಳಿರಲಿಲ್ಲವೆ ? ಆದರೂ ಅವಳು ಹಟ ಹಿಡಿದು ಹೊರಟಳು. ಅವಳದು ತಪ್ಪು. ಅವಳಾಗಿಯೆ ಕಾಗದ ಬರೆಯಬೇಕೆಂದು ವಾದ ಹೂಡಿ ಗಂಗಮ್ಮನವರ ಬಾಯಿ ಮುಚ್ಚಿಸಿದರು. ಆದರೂ ಬಾಯಿ ಹೀಗಂದರೂ ಮನಸ್ಸು ಬೇರೆ ಬಗೆಯಾಗಿತ್ತು. ಅದು ರಂಗಣ್ಣನವರಿಗೂ ಗೊತ್ತು, ಗಂಗಮ್ಮನವರಿಗೂ ಗೊತ್ತು. ಮತ್ತೆ ಒಮ್ಮೆ ಮಗನನ್ನು ಕರೆದು ಹೇಳಿದರು. ಸೊರಗಿಕೊಂಡಿದ್ದ ಅವನ ಮುಖ ನೋಡಲಾರದೆ ಅವರ ಕಣ್ಣಿನಲ್ಲಿ ನೀರಿಳಿಯಿತು. ಸೆರಗಿನಿಂದ ಕಣ್ಣೀರೊರಸಿಕೊಳ್ಳುತ್ತ " ಏನೋಪ್ಪ, ಯಾರ ಯಾರ ತಪ್ಪಿಗೆ ಯಾರು ಶಿಕ್ಷೆ ಅನುಭವಿಸಬೇಕೊ. ಅವಳೇನೊ ತಿಳಿಯದ ಹುಡುಗಿ, ಅರಿಯದವಳು. ಅವಳು ಕೋಪ ಮಾಡಿಕೊಂಡು ಹೋದಳು ಅಂತ ನಾವೂ ಕೋಪ ಮಾಡಿ ಕೊಂಡರೆ ಸಲ್ಲುವುದೆ ? ನೀನು ತಿಳಿದವನು. ತಿದ್ದಿಕೊಂಡು ಸರಿಪಡಿಸಿಕೊಳ್ಳ ಬೇಕು. ಒಂದು ಕಾಗದ ಹಾಕಿಬಿಡು, ಬಾ ಅಂತ " ಎಂದರು. ತಾಯಿ ಅಣ್ಣನಿಗೆ ಹೇಳಿದ ಈ ಮಾತು ಸೀನುವಿಗೆ ಕೇಳಿಸಿತ್ತು. ಅಣ್ಣ ಯಾವಾಗಲೂ ಹೆಚ್ಚು ಮಾತನಾಡದವನೆಂಬುದು ಸೀನುವಿಗೆ ಚೆನ್ನಾಗಿ ಗೊತ್ತಿತ್ತು. ಅಣ್ಣ ಮಾತನಾಡಲಾರನೆಂದಿದ್ದ. ಅಣ್ಣನೇನೊ ಈಗಲೂ ಮೌನ ಮುರಿಯಲಿಲ್ಲ. ಆದರೆ ತಾಯಿ ಮತ್ತೆ ಮತ್ತೆ ಕಾಗದದ ಮಾತನ್ನು ಒತ್ತಿ ಹೇಳಿದರು : " ಕಾಗದ ಹಾಕಿಬಿಡು, ಮಗು. ಬರಲಿ ಅವಳು. ಬಸುರಿ ಬೇರೆ, ಹಸಿ ಮೈ, ಕೆಟ್ಟು ಹೋದೀತು. ನನ್ನ ಮೊಮ್ಮಗನನ್ನು ನೋಡುವ ಭಾಗ್ಯ ನನಗಿಲ್ಲವೆ ! ಕಾಗದ ಹಾಕಿಬಿಡು. ಬಾ ಅಂತ ನೀನು ಬರೆದರೆ ಖಂಡಿತ ಬರುತ್ತಾಳೆ " ಎಂದರು.

ಸೀನು ಅಣ್ಣನ ಮುಖ ನೋಡಿದ. ಅಲ್ಲಿ ಯಾವ ಬಗೆಯ ವಿಕಾರವೂ ಕಾಣಲಿಲ್ಲ. ಕಣ್ಣಿನಲ್ಲಿ ನೋವು ಕಾಣುತ್ತಿತ್ತೊ ಏನೊ, ಆದರೆ ಮುಖದ ಮೇಲೆ ಬೆಳಕು ಚೆನ್ನಾಗಿ ಬೀಳದಿದ್ದುದರಿಂದ ಸೀನುವಿಗೆ ಅಣ್ಣನ ಕಣ್ಣಿನೊಳಗೆ ತುಂಬಿದ್ದ ಮರುಕ, ಮಮತೆ ಕಾಣಲಿಲ್ಲ. ಆದರೆ ಅಣ್ಣನ ದನಿಯಲ್ಲಿ ನಡುಕ ಕಂಡೂ ಕಾಣದಂತೆ ಸುಳಿಯಿತು. ಆ ನಡುಕದಲ್ಲಿ ಅಣ್ಣನ ಹೃದಯದ ವೇದನೆಯೆಲ್ಲ ಮನೆಮಾಡಿಕೊಂಡಿತ್ತು. ಸೀನುವಿನ ಎದೆಯನ್ನು ಆ ಮಾತು ಕಲಕಿತು. ಅಂತಹುದೇನೂ ಆ ಮಾತಿನಲ್ಲಿರಲಿಲ್ಲ. "ಅಮ್ಮ, ನನ್ನನ್ನು ಕೇಳಿ ಅವಳು ಹೋಗಲಿಲ್ಲ. ಬರಲಿ, ಸಂತೋಷ. ಆದರೆ ನನ್ನನ್ನು ಕೇಳಬೇಕಾಗಿಲ್ಲ." ಬೇರೆ ಯಾರಾದರೂ ಅದೇ ಮಾತಾಡಿದ್ದರೆ ಕೋಪದಲ್ಲಿ ಅಂದರೆಂದು ಭ್ರಾಂತಿ ಪಡುವುದು ಸಾಧ್ಯವಿತ್ತು. ಆದರೆ ಅಣ್ಣ ಮಾತಾಡಿದ ಆ ರೀತಿಯಲ್ಲಿ ಸೀನುವಿಗೆ ತಾನು ಅಣ್ಣನಿಗೆಂತಹ ನೋವನ್ನುಂಟುಮಾಡಿದೆನೆಂದು ಹೃದಯ ಕೆಣಕಿತು. ತಾನು ಎಂತಹ ಅಪರಾಧಿ, ತನ್ನ ಅಣ್ಣ, ಅತ್ತಿಗೆಯರನ್ನು ದೂರ ಮಾಡಲು ತಾನೇ ಕಾರಣನೆಂದು ಸೀನುವಿಗೆ ಅನಿಸಿ, ಅಣ್ಣನಿಗೆ ತಲೆಯೆತ್ತಿ ಮುಖ ತೋರಿಸಲು ಕೂಡ ಅವನಿಗೆ ನಾಚಿಕೆಯಾಗುತ್ತಿತ್ತು. ತನ್ನ ತಪ್ಪಿಗೆ ಅಣ್ಣನೂ ಅತ್ತಿಗೆಯೂ ಶಿಕ್ಷೆಯನ್ನನುಭವಿಸುತ್ತಿದ್ದಾರೆಂದು ಅವನ ಹೃದಯ ಹಿಂಡಿತು! ಗಂಗಮ್ಮನವರಂತೂ ಒಂದೆ ಸಮನೆ ಕೊರಗುತ್ತಿದ್ದರು.

ಸೀನುವಿಗೂ ಕೊರಗು ತಪ್ಪಿದ್ದಲ್ಲ. ಕ್ರಿಕೆಟ್ಟಿಗೆ ತಪ್ಪಿಸಿಕೊಂಡುದಾಗಿತ್ತು. ಅತ್ತಿಗೆಯ ಮೇಲೆ ಭಯಂಕರವಾಗಿ ರೇಗಿದ್ದುದೂ ಆಗಿತ್ತು. ಅತ್ತಿಗೆ ಅದೇ ಕಾರಣವಾಗಿ ಹೊರಟುಹೋಗಿದ್ದಳು. ಎರಡು ದಿನ ಸೀನುವಿಗೆ ಏನೂ ತೋಚಲಿಲ್ಲ. ಒಂದು ಕಡೆ ತನ್ನ ಇಷ್ಟು ದಿನಗಳ ಆಸೆ—ಕ್ರಿಕೆಟ್ ಮ್ಯಾಚು ತಪ್ಪಿಹೋದುದು. ಎಷ್ಟೋ ದಿನಗಳಿಂದ ಅದಕ್ಕೆ ಶ್ರಮಪಟ್ಟು ಪಾಡುಪಟ್ಟು ಅಭ್ಯಾಸ ಮಾಡಿ ಈಗ ಎಲ್ಲ ನೀರಿನ ಪಾಲು ಮಾಡಿಯಾಗಿತ್ತು. ಯಾರಾದರೂ ತನ್ನನ್ನು ಕೇಳಿದರೆ ತಾನೇನು ಉತ್ತರ ಕೊಡುವುದು? ತನ್ನ ಅತ್ತಿಗೆಯ ಕಾರಣವಾಗಿ ಹೋಗಲಾಗಲಿಲ್ಲವೆಂದು ಸಬೂಬು ಹೇಳಲಾದೀತೆ? ಹಾಗೆ ಹೇಳುವುದು ತನಗೇ ಅವಮಾನ. ಅಲ್ಲದೆ ಮನೆಯ ಮಾತನ್ನು ಹೊರಗೆ ಹಾಕುವುದೆಂದರೆ ಹುಚ್ಚು ಎಂದಾರು. ತನ್ನ ಮೆಚ್ಚಿನ ಅತ್ತಿಗೆಯನ್ನು ಯಾರಾದರೂ ಬೈದಾರೆಂಬ ಯೋಚನೆ ಸುಳಿದರೆ ಸಾಕು, ಸೀನು ಬೆಂಕಿಯ ಬೆಟ್ಟವಾಗು

ತ್ತಿದ್ದ. ಅಂತಹವನು ಈಗ ತಾನಾಗಿಯೆ ತನ್ನ ಅತ್ತಿಗೆಯನ್ನು ಅನ್ನಲು ಹೊರಡುವುದು ಆಗದ ಮಾತು. ಅತ್ತಿಗೆ ಹೊರಟುಹೋಗುವಳೆಂದು ಸೀನು ಕನಸಿನಲ್ಲಿಯೂ ಅಂದುಕೊಂಡಿರಲಿಲ್ಲ. ತನ್ನ ಕ್ರಿಕೆಟ್ಟು ತಪ್ಪಿತಲ್ಲ ಎನ್ನುವ ನಿರಾಶೆಯ ರೋಸಿನಲ್ಲಿ ಕೆಣಕು ಮಾತನಾಡಿದ್ದ. ಆದರೆ ಅದಿಷ್ಟು ದೊಡ್ಡದಾಗಿ ಬೆಳೆಯುವುದೆಂದು ಅವನೆಣಿಸಿರಲಿಲ್ಲ. ಈಗ ಅತ್ತಿಗೆ ಹೊರಟುಹೋದುದು ದೊಡ್ಡ ಆಘಾತವೆ ಆಗಿತ್ತು. ಒಂದೆಡೆ ನಿರಾಶೆಯ ಕತ್ತಲು ಕವಿದು ಬುದ್ಧಿ ಮಂಕಾಗಿತ್ತು. ಜತೆಗೆ ಪ್ರೀತಿಗೆ ಈ ಪೆಟ್ಟು ಬೇರೆ ಬಿದ್ದು ಸೀನುವಿನ ಹೃದಯ ತತ್ತರಿಸಿತು, ಅವನಿಗೂ ಏನೂ ಬೇಡವಾಗಿತ್ತು. ಯಾರೊಂದಿಗೂ ಮಾತುಕತೆ ಬೇಕಿಲ್ಲ. ಊಟ ಉಣಿಸಿನಲ್ಲಿ ಕೂಡ ಅವನಿಗೆ ಯಾವದೆ ಬಗೆಯ ಆಸಕ್ತಿ ಉಳಿಯಲಿಲ್ಲ. ಮೊದಲೆರಡು ದಿನ ಪ್ರೀತಿ, ಕೋಪ, ನಿರಾಶೆಗಳಲ್ಲಿ ಸೀನು ಬೆಂದು ಬಡವಾದ. ಕಾಲೇಜಿಗೆ ಹೋಗುವುದು ಕೂಡ ಅವನಿಗೆ ಬೇಕಿರಲಿಲ್ಲ. ಊಟದ ಯೋಚನೆಯನ್ನು ಬಿಟ್ಟು ತನ್ನ ಕೋಣೆಯಲ್ಲಿ ಮೇಜಿನ ಮೇಲೆ ಕೈ ಊರಿಕೊಂಡು, ಅಂಗೈಗಳಲ್ಲಿ ಮುಖ ಮುಚ್ಚಿಕೊಂಡು ಕುಳಿತುಬಿಟ್ಟ. ಒಂದು ಮೂಲೆಯಲ್ಲಿ ಅವನ ಮುದ್ದು ತಂಗಿ ವಸಂತು ಮಲಗುತ್ತಿದ್ದಳು. ಎರಡನೆಯ ದಿನ ಇಬ್ಬರಿಗೂ ಸ್ನಾನ ಇಲ್ಲ, ಪಾಠವೂ ಇಲ್ಲ. ಮೂರನೆಯ ದಿನದ ವೇಳೆಗೆ ಸೀನುವಿನ ರೋಷ ಕಡಿಮೆಯಾಗಿತ್ತು. ನಿರಾಶೆಯ ಕತ್ತಲು ಕೊಂಚ ತೆಳು ವಾಯಿತು. ಕಣ್ಣುಗಳು ಬಾತುಕೊಂಡು ಕೆಂಪಗೆ ಉರಿಗಣ್ಣಾಗಿದ್ದವು. ಮುಖ ಸಪ್ಪೆಯಾಗಿ ಮೃದುಗೊಂಡಿತ್ತು. 'ಅತ್ತಿಗೆ ಹೊರಟುಹೋದಳು, ಅತ್ತಿಗೆ ಹೊರಟು ಹೋದಳು—ಅದೂ ನನ್ನಿಂದ—ನಾನು ಹಾಗೆ ಕೆಡಕು ಮಾತಾಡದೆ ಹೋಗಿದ್ದರೆ ಹೀಗಾಗುತ್ತಿರಲಿಲ್ಲ. ನಾನು ಬಹಳ ಅವಸರಪಟ್ಟೆ. ಒಂದು ಕ್ರಿಕೆಟ್ಟು—ಒಂದು ಆಟದ ಮೋಹಕ್ಕೋಸ್ಕರ ನಾನು ಅತ್ತಿಗೆಯನ್ನು ಮನೆ ಬಿಟ್ಟು ಓಡಿಸಿದೆನಲ್ಲ' ಎಂದು ಮನಸ್ಸು ಕುದಿಯುತ್ತಿತ್ತು. ಕಾಲೇಜಿನ ಹತ್ತಿರ ಬಂದಂತೆ ಅದೇ ದಿನ ಬೆಂಗಳೂರಿನಿಂದ ಆಟ ಮುಗಿಸಿ ಬಂದ ಸ್ನೇಹಿತರು ಸಿಕ್ಕಿದರು. ಅವರ ಮುಖ ನೋಡಲು ಸೀನುವಿಗೆ ನಾಚಿಕೆ. ತಾನು ಕೊನೆಯ ಗಳಿಗೆಯಲ್ಲಿ ಅವರಿಗೆ ಬೇಸ್ತು ಬೀಳಿಸಿದೆನಲ್ಲ ಎಂದು ಬಹಳ ಒದ್ದಾಡಿದ. ಎದುರಿಗೆ ಬಂದ ಅವರನ್ನು ಬದಿಗೊತ್ತಿ ಮುಂದೆ ಹೋಗಲೂ ಸಾಧ್ಯವಿಲ್ಲ. ಅಲ್ಲದೆ ಹಾಗೆ ಮಾಡಲು ಅವನಿಗೆ ಇಷ್ಟವೂ ಇರಲಿಲ್ಲ. ಎದುರಿನಿಂದ ಬಂದವರು ಸೀನುವನ್ನು ಕಂಡೊಡನೆ

ಒಟ್ಟಿಗೆ ಮಾತನಾಡುತ್ತ ಹತ್ತಿರ ಬಂದರು. ಬಂದವರು ಒಂದೆ ಸಮನಾಗಿ ಪ್ರಶ್ನೆಗಳ ಸುರಿಮಳೆ ಹಾಕಿದರು. ಅವರ ಮಾತಿನ ಅವಾಂತರದಿಂದಲೆ ಸೀನುವಿಗೆ ತಿಳಿದುಹೋಯಿತು, ಬಾಲ ಮೇಲೆತ್ತಿಕೊಂಡ ಗೆದ್ದೆತ್ತುಗಳು ಇವರು ಎಂದು. ತಾನೂ ಅವರ ಜತೆಯಲ್ಲಿ ವಿಜಯದ ಆನಂದವನ್ನು ಅನುಭವಿಸಬೇಕಾಗಿತ್ತು, ಆದರೆ ಆಗಲಿಲ್ಲವೆಂದು ಹೃದಯ ನಿಟ್ಟುಸಿರುಗರೆಯಿತು. ತಾವು ಗೆದ್ದುದನ್ನು ಹೇಳಿಕೊಳ್ಳುತ್ತ ಜಂಬ ಕೊಚ್ಚುವ ಅವರಲ್ಲಿ ಯಾವನಾದರೂ ತನ್ನ ವಿಷಯ ಕೇಳಿಬಿಡುವನೊ ಏನೊ ಎಂದು ಹೆದರಿದ ಸೀನು. ಅದಕ್ಕೆ ಈಗ ಗಟ್ಟಿಗೊಳ್ಳುತ್ತಿದ್ದ. ತಿಮ್ಮಪ್ಪಯ್ಯ ಆ ಮಾತನ್ನೆತ್ತಿದ. ಸೀನು ನಿರೀಕ್ಷಿಸಿದಂತೆಯೆ ಅವನು ಪ್ರಶ್ನೆಹಾಕಿದ: "ಅಲ್ಲ ಕಣೊ, ಸೀನು. ಕೊನೆಯ ಗಳಿಗೆಯಲ್ಲಿ ಹಾಗೆ ಚಕ್ಕರ್ ಕೊಟ್ಟುಬಿಟ್ಟೆಯಲ್ಲ—ಏನವಸ್ಥೆಯೊ?" ಎಂದ.

"ಭಲಾವ್ಮ morning trainಗೆ (ಬೆಳಿಗ್ಗೆಯ ರೈಲಿಗೆ) ಬರ್ತೀನಿಂತ promise (ವಾಗ್ದಾನ) ಮಾಡಿದೆ. ಸಲೀಸಾಗಿ ಚಕ್ಕರ್‌ಹೊಡೆದೆ" ಎಂದ ಸಂಪತ್.

"ಎಂಥಾ handicap (ಫಜೀತಿ) ಆಯ್ತು ಗೊತ್ತ; ಶ್ರೀನಿವಾಸ್, ನೀವು ಇರಲಿಲ್ಲ. ನಮ್ಮ side (ಪಕ್ಷ) ಬೌಲಿಂಗೇ ಬಹಳ weak (ದುರ್ಬಲ) ಆಗಿಹೋಗಿತ್ತು" ಎಂದರು ಟೀಮಿನ ಕ್ಯಾಪ್ಟನ್.

"ಆದರೆ ಬಿಡೋವ್ಮ ಸೀನು—ನೀನು ಬರಲಿಲ್ಲ. ನಾನೇ ಬೌಲಿಂಗ್ ಮಾಡಿದೆ. ಐದು ವಿಕೆಟ್ಟು ನನಗೇ ಸಿಕ್ಕಿತು" ಎಂದ ಸಂಪತ್.

ಸೀನುವಿಗೆ ಈ ಮಾತಿನಿಂದ ಎದೆ ಕಳಕ್ಕೆಂದಿತು. ಇಷ್ಟೇನೆ, ಎಂದುಕೊಂಡ. ಆದರೆ ಮಾತಿನಲ್ಲಿ ಅದನ್ನು ತೋರಿಸುವಂತಿಲ್ಲ. ಮುಖದ ಮೇಲೆ ಬರಲಾರದ ನಗೆ ತರಿಸಿಕೊಂಡು ಸಂಪತ್ತುವನ್ನು ಹೊಗಳಿದ. ಈ ಹೊಗಳಿಕೆಯ ಹಿಂದಿದ್ದ ನೋವು ಯಾರಿಗೂ ಕಾಣಿಸಲಿಲ್ಲ. ಸಂಪತ್ತುವಂತೂ ಈ ಹೊಗಳಿಕೆಯಿಂದ ಉಬ್ಬಿಹೋಗಿ ತನ್ನ ಪ್ರೌಢಿಮೆಯನ್ನು, ತನ್ನ ಆಟದ ಸೊಗಸನ್ನು ಹೊಗಳಿಕೊಂಡು ಕೊಚ್ಚಿಕೊಳ್ಳಲಾರಂಭಿಸಿದ. ಸೀನುವಿಗೆ ತಾನಿಷ್ಟು ಜನರ ಮಧ್ಯದಲ್ಲಿದ್ದರೂ ಏಕಾಕಿಯೆಂದು ತಕ್ಷಣ ಅನಿಸಿತು. ಏನು ಜನ—ತಮ್ಮ ತುತೂರಿಯನ್ನು ತಾವೇ ಊದಿಕೊಳ್ಳುವರು ಎನಿಸಿ, ಎಷ್ಟು ಬೇಗನೆ ಇವರಿಂದ ತಪ್ಪಿಸಿಕೊಂಡೇನೊ ಎನಿಸಿಬಿಟ್ಟಿತು ಆದರ ಸುಮ್ಮನೆ ಓಡಿಹೋಗುವಂತೆಯೂ

ಇರಲಿಲ್ಲ. ತಾನು ಹೋಗಲಿಲ್ಲ. ಆದರೆ ತಾನು ಹೋಗದಿದ್ದುದಕ್ಕೆ ಇವರಲ್ಲಿ ಒಬ್ಬನಿಗಾದರೂ ದುಃಖವಿಲ್ಲ. ಸಂಪತ್ತುವಂತೂ ತಾನು ಹೋಗದಿದ್ದುದರಿಂದಲೆ ತನಗೆ ಒಳ್ಳೆಯ ಹೆಸರು ಬಂದಿತೆಂದು ಸಂತೋಷ ಪಡುತ್ತಿದಾನೆ. ಉಳಿದವರೂ ಅಷ್ಟೆ. ಎಲ್ಲರು ತಮ್ಮ ಮೂಗಿನ ನೇರಕ್ಕೆ ಪ್ರಪಂಚವನ್ನು ಅಳೆಯುವವರೆ ಹೊರತು, ಉಳಿದವರಿಗೆ ಹೇಗೆ ತೋರುತ್ತದೆ, ಹೇಗಿದೆ ಎಂಬ ಯೋಚನೆ ಮಾಡುವವರೆ ಅಲ್ಲ! ಥು! ಈ ಹಾಳು ಟೀಮಿಗಾಗಿ ನಾನು ಇಷ್ಟು ಒದ್ದಾಡಿದೆನಲ್ಲ ಎಂದು ಸೀನುವಿನ ಮನಸ್ಸು ಇನ್ನೂ ರೋಸಿತು. ಇಷ್ಟೆಲ್ಲ ಮಾತಾಡಿದ ಸ್ನೇಹಿತರಲ್ಲಿ ಒಬ್ಬನಾದರು ತಾನು ಯಾಕೆ ಬರಲಿಲ್ಲವೆಂದು ಕೇಳಲಿಲ್ಲ. ಹಾಗೆ ಯಾರಾದರು ಕೇಳಿದ್ದರೆ ದುಃಖ ಬೆದಕಿದ್ದರೂ ಕೊಂಚವಾದರೂ ಸಮಾಧಾನಕ್ಕೆ ಅವಕಾಶವೂ ಇರುತ್ತಿತ್ತು. ಸುಳ್ಳನ್ನಾದರೂ ಹೇಳಿ ಮನಸ್ಸು ಸಮಾಧಾನಕ್ಕೆ ಬರುತ್ತಿತ್ತು. ಯಾರಲ್ಲಿ ಹೇಳಿಕೊಳ್ಳುವುದು ಈ ಸಂಕಟವನ್ನು! ನಿಜ ಹೇಳುವುದಂತೂ ಸಾಧ್ಯವಿಲ್ಲ. ಆದರೆ ಯಾಕೆಂದು ಯಾರಾದರು ಕೇಳಿದರೆ ಸಾಕೆಂದು ಮನಸ್ಸು ತಹತಹಿಸುತ್ತಿತ್ತು. ತನ್ನ ಗೆಳೆಯರೆನಿಸಿಕೊಂಡವರೊಬ್ಬರೂ ಆ ಮಾತನ್ನು ಕೇಳದೆ ತಾನು ಮ್ಯಾಚಿಗೆ ಆ ದಿನ ಹೋಗದಿದ್ದುದೆ ಒಳ್ಳೆಯದೆ ಆಯಿತೆಂದು ಸಂತೋಷಪಟ್ಟುದನ್ನು ಕಂಡು ಸೀನುವಿನ ಹೃದಯ ಮತ್ತೂ ರೋಸಿತು. ದುಃಖದ ಭಾರ ತೀರ ತಡೆಯಲಾರದಷ್ಟು ಹೆಚ್ಚಾಯಿತು. ತಮ್ಮ ಹರಟೆಯಲ್ಲಿ ಮಗ್ನರಾದ ಅವರನ್ನು ಬಿಟ್ಟು ಸುಲಭವಾಗಿ ಜಾರಿಕೊಳ್ಳಬಹುದೆಂದು ಸೀನು ಲೆಕ್ಕ ಹಾಕಿದ. ಮುಂದೆ ನಡೆದ. ಆದರೆ ಎಲ್ಲರೂ ತಾವು ಆ ಕಡೆಗೆ ಹೊರಟಿದ್ದವರಂತೆ ಅವನ ಜತೆಯಲ್ಲಿಯೆ ಹೆಜ್ಜೆ ಹಾಕಿದರು. ಆ ಬಂಧನದಿಂದ ಬಿಡಿಸಿಕೊಳ್ಳುವುದು ಅಸಾಧ್ಯವೆಂದು ಸೀನುವಿಗೆ ತಕ್ಷಣ ಮನವರಿಕೆ ಆಯಿತು. ಆದರೆ ಅವರೊಂದಿಗೆ ಇರುವುದು ಕೂಡ ಕಷ್ಟವಾಯಿತು. ಎಲ್ಲರೂ ಮಾತನಾಡುತ್ತ ಅವನನ್ನು ಸುತ್ತುಗಟ್ಟಿಕೊಂಡಿದ್ದರು. ತಿಮ್ಮಪ್ಪಯ್ಯ ಇದ್ದಕ್ಕಿದ್ದಂತೆ ಸಂಪತ್ತುವಿನ ಕಡೆ ತಿರುಗಿದ. "ಲೊ ಸಂಪತ್ತು, ನೀನು ನಮಗೆಲ್ಲ ಕಾಫಿ ಕುಡಿಸಬೇಕು, ಕಣೊ. **Five wickets** (ಐದು ವಿಕೆಟ್ಟು) **bag** ಮಾಡಿದೆ (ಬುಟ್ಟಿಗೆ ಹಾಕಿದೆ). ಸೀನು ಬರದೆ ಇದ್ದದ್ದರಿಂದ ನಿನಗೆ ಅದು ಸಾಧ್ಯವಾದ್ದು. ಆದ್ದರಿಂದ ಮೊದಲು ನೀನು ಸೀನುವಿಗೆ ಕಾಫಿ ಕೊಡಿಸಬೇಕು" ಎಂದ.

ಎಲ್ಲರೂ ಬಾಯಿ ಹಾಕಿದರು. ಬಡಬಡಿಸುತ್ತ ಹೋಟಲಿನ ಕಡೆಗೆ ನುಗ್ಗಿದರು. ಸೀನುವಿಗೆ ಉಗುಳು ಕೂಡ ಕಹಿಯಾಯಿತು. ಇದರಿಂದ ಹೇಗಾದರೂ ತಪ್ಪಿಸಿಕೊಳ್ಳಬೇಕೆಂದು ಒದ್ದಾಡಿದ. ಆ ಹೊತ್ತಿಗೆ ಸರಿಯಾಗಿ ಗಂಟೆ ಆಯಿತು. ಅಧ್ಯಾಪಕರ ಕೋಣೆಯಿಂದ ಪಾಚು ಹೊರಕ್ಕೆ ಬರುತ್ತಿದ್ದರು. ಅವರನ್ನು ಕಂಡೊಡನೆ ಎಲ್ಲರೂ ಅವರ ಹತ್ತಿರಕ್ಕೆ ನುಗ್ಗಿದರು. ಕ್ರಿಕೆಟ್ ಮ್ಯಾಚಿನ ವರದಿಯೊಪ್ಪಿಸಿದರು. ಅವನು ಹಾಗೆ ಆಡಿದ, ಇವನು ಹೀಗೆ ಬೌಲ್ ಮಾಡಿದ, ಆಂಪೈರ್ ಎರಡು ಬಾರಿ ಎಲ್.ಬಿ.ಡಬ್ಲ್ಯೂ ಕೊಡಲೆ ಇಲ್ಲ—ಎಂದೆಲ್ಲ ಪುನಃ ಪುನಃ ಹಿಂದೆ ಹೇಳಿದುದನ್ನೆ ಮತ್ತೆ ಮತ್ತೆ ಹೇಳಿದರು. ಪಾಚು ಮಧ್ಯೆ ಮಧ್ಯೆ ತಮ್ಮ ಅಭಿಪ್ರಾಯ ಹೇಳುತ್ತಿದ್ದರು. ಸೀನು ಹಿಂದೆ ತಲೆ ತಗ್ಗಿಸಿ ನಿಂತಿದ್ದ. ಒಂದು ಮಾತಿಗು ಬಾಯಿ ಹಾಕಲಿಲ್ಲ. ಒಂದು ಸಾರಿಯು ತಲೆಯೆತ್ತಲಿಲ್ಲ. ಪಾಚು ಅದನ್ನು ಗಮನಿಸಲಿಲ್ಲ—ಎಲ್ಲರ ಹಿಂದೆ ನಿಂತುದರಿಂದ ಕಾಣಿಸಲಿಲ್ಲವೊ ಏನೊ. ಈ ಮಧ್ಯೆ ಸಂಪತ್ತು ಮತ್ತೆ ತನ್ನ ಬೆನ್ನಿಗೆ ತಾನೆ ಭೇಷ್ ಹೊಡೆದುಕೊಳ್ಳಲಾರಂಭಿಸಿದ: "ನಾನು ಆ ತಿರುಮಲೆಗೆ ವಿಕೆಟ್ ತೆಗೆದುಕೊಂಡದ್ದು ಚೆನ್ನಾಗಿತ್ತು, ಸಾರ್. ಎಲ್ಲರಿಗೂ ತಲೆನೋವಾಗಿತ್ತು. ನನ್ನ ಮೊದಲ ಬಾಲಿಗೆ ವಿಕೆಟ್ ಉರುಳಿತು. ಆಮೇಲೆ ತಪತಪನೆ ಬಿದ್ದರು" ಎಂದು ಜಂಬ ಕೊಚ್ಚಿಕೊಳ್ಳಲಾರಂಭಿಸಿಬಿಟ್ಟ. ಪಾಚು ಸುಮ್ಮನಿರಲಿಲ್ಲ. ಸಂಪತ್ತುವಿನ ಆಟವನ್ನು ಅವರು ಹೋಗಿ ನೋಡಿದ್ದರು. ಅದೇನೂ ಅವರಿಗೆ ಅಷ್ಟೊಂದು ಹಿತವಾಗಿ ಕಾಣಿಸಿರಲಿಲ್ಲ. ನೇರವಾಗಿ ಆಗಲೆ ಬೆಂಗಳೂರಿನಲ್ಲೆ ಅಂದಿದ್ದರು. ಈಗಲೂ ಮತ್ತೆ ಅದೇ ಮಾತಂದುಬಿಟ್ಟರು. "ಏನು ಮಹಾ, ಬಿಡೊ. ನಿನಗೆ ವಿಕೆಟ್ಟುಗಳು ಬಂದದ್ದು ಬರಿಯ luck (ಅದೃಷ್ಟ) ಅಷ್ಟೆ! ಪಾಪ! ಆ ತಿರುಮಲೆಗೆ ಬ್ಯಾಟ್ ಸರಿಯಾಗಿ ಹಿಡಕೊಳ್ಳೋಕ್ಕೆ ಬರತಾ ಇರಲಿಲ್ಲ. ಆಫ್(off)ಗೆ ಬರಲಿ leg (ಕಾಲಿನ) ಕಡೆಗೆ ಬರಲಿ ಎಲ್ಲದಕ್ಕು ಬೀಸತಾ ಇದ್ದ. ಅಕಸ್ಮಾತ್ ನಿನ್ನ ಬಾಲು ಸರಿಯಾಗಿ ಬಂತು. ಬೀಸಿದ್ದನ್ನ ರಾಮುಸ್ವಾಮಿ ಕ್ಯಾಚ್ ಹಿಡಿದ. ಇಲ್ಲದಿದ್ದರೆ ಕಿಸಿತಿದ್ದೆ ನೀನು. ಆ ಸೀನು ಒಬ್ಬ—ಅವನಿದ್ದಿದ್ದರೆ wonderful(ಅದ್ಭುತ)ವಾಗಿರುತಿತ್ತು. ಏಕೊ ಅವನು ಬರಲಿಲ್ಲ. ಅವನ ಬೌಲಿಂಗ್ ಮುಂದೆ ನಿನ್ನದೇನೊ! ನಿನ್ನದೆಲ್ಲ ಬರಿಯ throw (ಎಸೆದಾಟ)." ಈ ಮಾತಿನಿಂದ ಸಂಪತ್ತುವಿನ ಮುಖ ಉಗ್ರವಾಯಿತು. ಸೀನುವಿನ ಹೃದಯ ಕೊಂಚ

ಹಗುರಾಯಿತು. ಅವನೇನೂ ಇಲ್ಲವೆಂದುಕೊಂಡರೂ ಮನಸ್ಸಿಗೆ ಈ ಮಾತು ಹಿತವಾಯಿತು. ತಾನು ಅಲ್ಲಿರುವುದು ಪಾಚುವಿಗೆ ತಿಳಿಯದು, ಆದರೂ ತನ್ನ team ಅಭಿಮಾನವಿಟ್ಟು, ಅಭಿಮಾನದ ಮಾತನ್ನೆ ಆಡುತ್ತಿರುವರಲ್ಲ ಎಂದು ಅವನ ಮನಸ್ಸು ಮಿಡಿಯಿತು. ಕೊಂಚ ಕಣ್ಣೀರಾಡಿತು. ಅಷ್ಟರಲ್ಲಿ ಪಾಚು ಈ ಕಡೆ ತಿರುಗಿದರು. ಇನ್ನೊಬ್ಬರು ಅಧ್ಯಾಪಕರು ನಗುತ್ತ "ಏನು ಪಾಚು, ಇಲ್ಲೇನೆ ಇವತ್ತಿನ ಕ್ಲಾಸು. ಭೂಪತಿ ಕಣಯ್ಯಾ, ನೀನು" ಎಂದು ಪಾಚುವಿನ ಬೆನ್ನು ತಟ್ಟಿದರು. ಈ ಕಡೆ ಬರುತ್ತ ಸೀನುವನ್ನು ಕಂಡು "ಓಹೊ, ಶ್ರೀನಿವಾಸ ಇಲ್ಲೆ ಇದಾನೊ! ಏನಯ್ಯ, ಎಷ್ಟು ವಿಕೆಟ್ಟು ತೆಗೆದುಕೊಂಡೆ ನಿನ್ನೆಯ ಮ್ಯಾಚಿನಲ್ಲಿ" ಎಂದು ಸೀನುವನ್ನು ಕೇಳಿದರು. ಸೀನುವಿಗೆ ಏನು ಹೇಳಲೂ ತೋಚಲಿಲ್ಲ. ಒದ್ದಾಡಿದ. ತಲೆ ತಗ್ಗಿಸಿ ಮತ್ತೆ ಮೇಲೆತ್ತಿದ. ಪಾಚು ಈಗ ಅವನನ್ನು ನೋಡಿ—"ಓಹೊ! ಚೆನ್ನಾಗಿ ಚಕ್ಕರ್ ಕೊಟ್ಟೆ ಕಣೊ, ಸೀನು. ಸ್ಟೇಷನ್ನಿನಲ್ಲಿ ನಿನಗೋಸ್ಕರ ಕಾದು ಬೇಜಾರಾಯಿತು ನನಗೆ. ಯಾಕೊ ಬರಲಿಲ್ಲ?" ಎಂದರು. ಸೀನುವನ್ನು ನೋಡಿದ ಉಳಿದವರೆಲ್ಲ ಏನು ಹೇಳುತ್ತಾನೊ ಎಂದು ಅವನ ಕಡೆ ತಿರುಗಿದರು. ಸೀನು ಮಾತಾಡಲಿಲ್ಲ. ಹೇಗೆ ಮಾತಾಡುವುದೇ ಈಗ ತಾಪತ್ರಯವಾಯಿತು. ಹೇಳಬೇಕೆಂದಿದ್ದ ಸುಳ್ಳು ಬಾಯಿಗೆ ಬರಲಿಲ್ಲ. ಆ ಇನ್ನೊಬ್ಬ ಅಧ್ಯಾಪಕರು "ಎರಡು ದಿನ ಕಾಲೇಜಿಗೆ ಬರಲಿಲ್ಲ, ಸರಿ. ಎಂ. ಜಿ.ಎಸ್. ಆಟಗಾರ ಹೋಗಿದಾನೆ ಅಂತಿದ್ದೆ. ಯಾಕಯ್ಯಾ ಶ್ರೀನಿವಾಸ್, ಹೋಗಲಿಲ್ಲ. ನೀನು ಒಳ್ಳೆಯ ಬೌಲರ್, ಬ್ಯಾಟ್ಸ್‌ಮನ್. ಕಾಲೇಜಿಗೆಲ್ಲ ಆಟಗಾರ" ಎಂದು ತುಂಬು ಬಾಯಿಂದ ಹೊಗಳಿದರು. ಸೀನುವಿಗೆ ಈ ಮಾತು, ಹೊಗಳಿಕೆಯೆಲ್ಲ ಹಿತವಾದರೂ ಕಹಿಯಾಯಿತು. ಸಿಹಿ ಮಾತಿನೊಳಗಿನ ಬೀಜದ ಮೇಲಿನ ಹುಳಿ ಕೊನೆಯಲ್ಲಿ ನಾಲಗೆಗೆ ತಾಕಿದಂತೆ ಈ ಹಿತದ ಹಿಂದೆ ಅವನ ಹೃದಯಕ್ಕೆ ಅಸಮಾಧಾನ ಬಂದಿತು. ಅತ್ತಿಗೆ ಹೊರಟು ಹೋದುದು ಇದರಿಂದಲೆ—ಎಂದು ಮನಸ್ಸು ಹೊಡೆದುಕೊಂಡಿತು. ಬಾಯಿ ಮಾತ್ರ "ಏನೊ ಮನೆಯಲ್ಲಿ ತೊಂದರೆ" ಎಂದು ಹೇಳಿತು. ಆ ಅಧ್ಯಾಪಕರು ಸುಮ್ಮನಿರದೆ "ಇನ್ನೂ ಮದುವೆಯಿಲ್ಲ, ಮಕ್ಕಳಿಲ್ಲ. ಮನೆಯಲ್ಲಿ ಏನಪ್ಪ ತೊಂದರೆ!" ಎಂದು ನಕ್ಕರು. ಎಲ್ಲರೂ ನಕ್ಕರು. ಸೀನುವಿಗೂ ನಗು ಬಂತು. ಆ ನಗು ಮನಸ್ಸಿನ ಬಿಗುವನ್ನು ಕೊಂಚ ಸಡಲಿಸಿತು. ಅವನ ಪುಣ್ಯಕ್ಕೆ ಮಾತು

ಅಲ್ಲಿಗೆ ಕೊನೆಯಾಯಿತು.

ತನ್ನ ಗೆಳೆಯರ ವಿಜಯೋತ್ಸಾಹದಲ್ಲಿ ತನಗೆ ಭಾಗವಹಿಸಲು ಸಾಧ್ಯವಾಗಲಿಲ್ಲ, ನಿಜ. ಆದರೆ ಅದರಿಂದ ತನ್ನ ಮನಸ್ಸೇನು ಕಹಿಯಾಗಬೇಕಾಗಿಲ್ಲವೆಂದು ಸೀನುವಿಗೆ ಅನ್ನಿಸಿತು. ಮನಸ್ಸು ತಾನು ಗೆದ್ದವರ ಗುಂಪಿನವನಾಗಬೇಕಾಗಿತ್ತೆಂದೂ, ಅತ್ತಿಗೆ ಅದನ್ನು ತಪ್ಪಿಸಿದಳೆಂದೂ ಒದ್ದಾಡಲಿಲ್ಲ. ಇದರಿಂದ ಅತ್ತಿಗೆಯ ಮೇಲೆ ಕೋಪ ಉಕ್ಕಿಬರಲಿಲ್ಲ. ಅಸಮಾಧಾನ ಕೂಡ ಮಿತಿಮೀರಿ ನೆರೆಯಾಗಿ ಹರಿದು ಬಂದು ಹೃದಯವನ್ನು ಕೊಚ್ಚಿಸಿಕೊಂಡು ಹೋಗಲಿಲ್ಲ. ಯಾವುದೊ ಒಂದು ರೀತಿಯಲ್ಲಿ ಪಾಚುವಿನ ಮಾತಿನಿಂದ ಮನಸ್ಸಿಗೆ ಕೊಂಚ ಸಮಾಧಾನ ಆಯಿತು. ಮೈಯಲ್ಲಿ ಸಣ್ಣ ನೋವಾಗಿದ್ದರೆ, ಆ ನೋವಿನ ಜಾಗವನ್ನು ಮೆಲ್ಲನೆ ಮೃದುವಾಗಿ ಅಮುಕಿದಾಗ ಸಣ್ಣ ನೋವು ಜಿಲ್ಲನೆದ್ದು ಮೈ ಜುಮ್ಮೆನಿಸಿದರೂ ಆ ಜುಮ್ಮೆನಲ್ಲು ಒಂದು ಬಗೆಯ ಹಿತವಾಗುತ್ತದೆ. ಹಾಗೆ ಪಾಚುವಿನ ಮಾತು ಸೀನುವಿನ ಹೃದಯವನ್ನು ಬೆದಕಿತು. ಅತ್ತಿಗೆ ಹೊರಟುಹೋದಳೆಂಬ ಸಂಕಟ ತೋರಿಕೊಂಡಿತೆ ಹೊರತು, ತನಗೆ ಕ್ರಿಕೆಟ್ ತಪ್ಪಿತೆಂಬ ದುಃಖ ಅಷ್ಟಾಗಿ ತೋರಲಿಲ್ಲ. You have lost the chance of your life (ನಿನ್ನ ಜೀವನದ ಸುಸಮಯ ಕಳೆದುಕೊಂಡೆ)" ಎಂದ ಒಬ್ಬ ಸ್ನೇಹಿತ. ಸೀನುವಿಗೆ ಮನಸ್ಸಿನಲ್ಲಿ ನಗು ಬಂತು. ಸುಸಮಯವೇನು ಕೊಳ್ಳೆಹೋದುದು ಎಂದುಕೊಂಡ. ಆದರೆ ಇದೆ ಕ್ರಿಕೆಟ್ಟಿಗಾಗಿ ಮೂರು ದಿನಗಳ ಹಿಂದೆ ಅತ್ತಿಗೆಯೊಂದಿಗೆ ರಾದ್ಧಾಂತ ನಡೆಯಿತು. ಆಗ ತನಗೆ ಬುದ್ಧಿ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು, ಎಂದು ಮರುಗಿದ. ಹೀಗಾಗಿ ತನ್ನ ಅತ್ತಿಗೆಯನ್ನು ತಮ್ಮ ಮನೆಯಿಂದ ಓಡಿಸಲು ಕಾರಣವಾದ ಕ್ರಿಕೆಟ್ಟು ಈಗ ಆತನಿಗೆ ಅಸಡ್ಡೆಯಾಗಿ ಹೋಯಿತು.

ಆ ದಿನ ಮನೆಗೆ ಬಂದಮೇಲೆ ಮತ್ತೆ ವಸಂತುವಿನ ಗೋಳುಕರೆ—ಅವಳಂತೂ ಯಾವಾಗಲು ಅತ್ತಿಗೆಯ ಜಪವನ್ನೆ ಮಾಡುತ್ತಿದ್ದಳು. ಸೀನುವನ್ನು ಕಂಡರೆ ಸಾಕು, ಅಳುತ್ತ ಬಂದು ಹತ್ತಿರ ನಿಂತುಕೊಳ್ಳುವಳು. ಸೀನುವಿಗೆ ಎದೆ ಕಿತ್ತು ಬರುತ್ತಿತ್ತು. ಅವಳನ್ನು ಹತ್ತಿರಕ್ಕೆಳೆದು ಬಾಚಿ ತಬ್ಬಿಕೊಳ್ಳುತ್ತಿದ್ದ. ತೊಡೆಯ ಮೇಲೇರುವಷ್ಟು ಸಣ್ಣವಳಲ್ಲದಿದ್ದರೂ ಮುದ್ದಿನಲ್ಲಿ ತೊಡೆಯ ಮೇಲೇರಿಸಿಕೊಳ್ಳುತ್ತಿದ್ದ. ಅವಳು ಬಿಕ್ಕಿ ಬಿಕ್ಕಿ ಅಳುತ್ತ "ನೋಡೊ ಸೀನು, ನನ್ನ

ಜಡೆಯೆಲ್ಲ ಕೆದರಿ ಹೋಗಿದೆ. ರಿಬ್ಬನ್ನು ಹರಿದೇಹೋಯಿತು. ಅತ್ತಿಗೆ ಯಾವಾಗ ಬರುತ್ತಾಳೆ" ಎಂದು ಕೇಳುತ್ತಿದ್ದಳು. ಅವಳಿಗೆ ಏನುತ್ತರ ಕೊಡ ಬೇಕೊ ಸೀನುವಿಗೆ ತಿಳಿಯುತ್ತಿರಲಿಲ್ಲ. ಅತ್ತಿಗೆ ಯಾವಾಗ ಬರತ್ತಾಳೆಂದು ಅವನು ಹೇಗೆತಾನೆ ಹೇಳಬಲ್ಲ. ಸುಮ್ಮನೆ ಕೂತಿದ್ದರೆ ವಸಂತು ಅವನನ್ನು ಬಿಡುತ್ತಿರಲಿಲ್ಲ. "ಯಾಕೊ ಸೀನು, ಅತ್ತಿಗೆ ಬರುವುದಿಲ್ಲವೇನೊ?" ಎಂದು ಕೇಳುತ್ತಿದ್ದಳು. ಆಗ ಅವನು ಹಿಡಿದ ಕೊರಳಿನಿಂದ "ಬರತಾಳೆ ಕಣೆ. ಇನ್ನು ಕೊಂಚ ದಿನಕ್ಕೆ ಬರತಾಳೆ" ಎನ್ನುತ್ತಿದ್ದ. ಅವಳ ತಲೆಗೂದಲು ನವಿರು ನವಿರಾಗಿ ಹಾರಾಡುತ್ತಿದ್ದುದನ್ನು ನೇವರಿಸುತ್ತಿದ್ದ. ಅವಳಿಗೆ ಸಮಾಧಾನ ಹೇಳುತ್ತಿದ್ದ. ಈ ಸಣ್ಣ ಮಗುವಿಗೆ, ಅತ್ತಿಗೆಯೆಂದರೆ ಪ್ರಾಣವಾಗಿದ್ದ ತನ್ನ ತಂಗಿ ಮುದ್ದು ವಸಂತುವಿಗೆ ತಾನೆಂತಹ ನೋವನ್ನು ತಂದುಕೊಟ್ಟಂತಾಯಿತೆಂದು ಒದ್ದಾಡುತ್ತಿದ್ದ. ದಿನಕ್ಕೆ ಏನಿಲ್ಲೆಂದರು ಹತ್ತಿಪ್ಪತ್ತು ಸಲ ವಸಂತು ಸೀನುವಿನ ಹತ್ತಿರ ಬರುತ್ತಿದ್ದಳು. ಮತ್ತೆ ಮತ್ತೆ ಅದೇ ಮಾತು. ತಾಯಿಯ ಹತ್ತಿರ ಹೋಗಿ ಒಂದೆರಡು ಸಲ ಕೇಳಿದ್ದಳು. ಅವರು ಕೋಪ ಸಂಕಟದಲ್ಲಿ "ನಿನ್ನ ಅತ್ತಿಗೆ ಹಾಳಾಗಿಹೋದಳು" ಎಂದುಬಿಟ್ಟರು. ಅದನ್ನು ಕೇಳಿ ಸೀನು ಸಿಡು ಗುಟ್ಟಿದ. ತಾಯಿಯೊಂದಿಗೆ ಜಗಳವಾಡಲು ಕೂಡ ಹೊರಟ. ಆದರೆ ತನ್ನದೆ ತಪ್ಪು. ಬರಿಯ ಹೊಟ್ಟೆಯ ಸಂಕಟವಲ್ಲಿ ತಾಯಿ ಹಾಗೆ ಬಿರುಸಾಗಿ ಮಾತ ನಾಡಿದರೆಂದು ಸುಮ್ಮನಾದ. ಮತ್ತೆ ಮತ್ತೆ ತನ್ನದೆ ತಪ್ಪೆಂದು ಅವನಿಗೆ ಮನವ ರಿಕೆಯಾಗುತ್ತಿತ್ತು. ಆ ದಿನ ಕೂಡ ಹಾಗೆಯೆ ಆಯಿತು. ಕಾಲೇಜಿನಿಂದ ಬಂದ ಕೂಡಲೆ ವಸಂತುವನ್ನು ಹುಡುಕಿದ. ಅವಳು ರೂಮಿನ ಮೂಲೆಯಲ್ಲಿ ಸೊರಗಿ ಕುಳಿತು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಅಳುವಿನ ದನಿ ಕಡಿಮೆಯಾಗಿ ದ್ದುದು ಸೀನುವನ್ನು ಕಂಡೊಡನೆ ಹೆಚ್ಚಾಯಿತು. ಅವಳನ್ನು ರಮಿಸಿ ಒಳ್ಳೆಯ ಮಾತನಾಡಿ ಸಮಾಧಾನಗೊಳಿಸಬೇಕೆಂದು ಸೀನು ಹತ್ತಿರ ಹೋದರೆ ಅವಳು ಸೆಟೆದುಕೊಂಡಳು. "ಬಾಮ್ಮ, ನನ್ನ ಮುದ್ದು ಮರಿ. ಬಾ, ಯಾಕೆ ಅಳುತೀ ಹೇಳು" ಎಂದು ಎಷ್ಟೆಷ್ಟೊ ಪ್ರಯತ್ನಿಸಿ ಅವಳನ್ನೆತ್ತಿಕೊಂಡು ಬಂದು ಕುಳಿತ. ತೊಡೆಯ ಮೇಲೆ ಕುಳಿತು ವಸಂತು ಬಿಕ್ಕಿಬಿಕ್ಕಿ ಅಳುತ್ತ "ಅಮ್ಮ ಹೊಡೆದಳು" ಎಂದಳು. ಹಾಗನ್ನುತ್ತಲೆ ವಸಂತುವಿಗೆ ತಾಯಿ ಹೊಡೆದುದರ ನೆನಪಾಗಿ ಮತ್ತೆ ಬಿಕ್ಕಿಬಿಕ್ಕಿ ಜೋರಾಗಿ ಅಳಲಾರಂಭಿಸಿದಳು ತಾನು ಶಾಲೆಗೆ ಈವತ್ತು ಹೋಗಿರ

ಲಿಲ್ಲ. ತಾಯಿಯನ್ನು ಜಡೆ ಹಾಕೆಂದು ಕೇಳಿದ್ದಳು. ಗಂಗಮ್ಮನವರಾಗಲೆ ಮಡಿ ಯುಟ್ಟುಕೊಂಡಿದ್ದವರು "ಲಂಗ ತೆಗೆದು ಬಾರೆ" ಎಂದು ಉದಾಸೀನವಾಗಿ ಅಂದರು. ವಸಂತುವಿಗೆ ತಾನು ಈಗಾಗಲೆ ದೊಡ್ಡ ಹುಡುಗಿ, ಲಂಗ ತೆಗೆದು ಬರುವುದು ಅಸಹ್ಯವೆಂದು ಅನಿಸಿತು. "ಥೂ. ನಾನು ಬರಿ ಬತ್ತಲೆ ಕೂತು ಕೊಳ್ಳೊಲ್ಲ, ಅಮ್ಮ. ಅತ್ತಿಗೆ ನನಗೆ ಜಡೆ ಹಾಕುತ್ತಿರಲಿಲ್ಲವೆ" ಅಂದಳು. "ನಿನ್ನ ಅತ್ತಿಗೆಗೆ ಮಡಿ ಇಲ್ಲ ಮೈಲಿಗೆ ಇಲ್ಲ" ಎಂದು ಗಂಗಮ್ಮ ಗೊಣಗಿದರು. ವಸಂತು ಬಡಪೆಟ್ಟಿಗೆ ಲಂಗ ತೆಗೆಯಲಿಲ್ಲ. ಲಂಗ ತೆಗೆಯಲು ಒಪ್ಪಲೆ ಇಲ್ಲ. ಕೊನೆಗೆ ಗಂಗಮ್ಮನವರಿಗೆ ಬೇಸರವಾಗಿ "ಹೋಗೆ, ನಾನು ಈಗ ಮೈಲಿಗೆ ಮಾಡಿ ಕೊಳ್ಳುವುದಿಲ್ಲ. ಜಡೆ ಹೆಣೆಯದೆ ಇದ್ದರೆ ಏನು ಕಿರೀಟ ಕಡಮೆಯಾಗೋದು" ಅಂದುಬಿಟ್ಟರು. ವಸಂತುವಿನ ಮನಸ್ಸಿಗೆ ಇದ್ದುದೂ ಬೇಸರವಾಯಿತು. ಅತ್ತಿಗೆ ಈ ರೀತಿ ಅಂದಿರಲಿಲ್ಲ. ಯಾಕೆ, ಗಂಗಮ್ಮನವರು ಕೂಡ ಹೀಗೆ ಸಿಡುಕಿಕೊಂಡು ಮಾತನಾಡಿರಲಿಲ್ಲ. ಯಾವಾಗಲು ಎಲ್ಲರೂ ತನ್ನನ್ನು ಮುದ್ದಾಡುತ್ತಿದ್ದರು. ಆದರೆ ಈಗ ಯಾಕೊ ಅಮ್ಮ ಹೀಗೆ ಸಿಡುಕಿಕೊಂಡಿದಾರಲ್ಲ ಎಂದು ವಸಂತು ಒದ್ದಾ ಡಿದಳು. ಅತ್ತಿಗೆ ಇದ್ದಿದ್ದರೆ ಹೀಗೆ ಆಗುತ್ತಿರಲಿಲ್ಲವೆಂದು ಅವಳಿಗೆ ಚೆನ್ನಾಗಿ ಗೊತ್ತಿತ್ತು. ಆದರೆ ಅತ್ತಿಗೆ ಯಾಕೆ ಹೊರಟುಹೋದಳೆಂಬುದು ತಿಳಿದಿರಲಿಲ್ಲ. ಮನೆಯಲ್ಲಿ ಎಲ್ಲರು ತನ್ನಂತೆ ಒದ್ದಾಡುತ್ತಿರುವುದನ್ನು ಕಂಡು ಅವಳಿಗೂ ಮಲ ಮಲ ಎನ್ನುತ್ತಿತ್ತು, ಮನಸ್ಸು. ಈಗ ತಾಯಿ ಏಕೊ ಕೋಪಗೊಂಡಿದ್ದಾರಲ್ಲ ಎಂದು ಎಂದೂ ಕಾಣದ ಹೆದರಿಕೆಯಾಯಿತು. ಹೆಚ್ಚು ಮಾತಾಡಿದರೆ ಒಳ್ಳೆಯ ದಲ್ಲವೆಂಬುದು ಅವಳಿಗೆ ತಿಳಿಯದು. ಯಾವಾಗಲು ಹುಚ್ಚುಹುಚ್ಚಾಗಿ ಹರಟುವ ಅಭ್ಯಾಸ. ಅಂತೆಯೆ ಈಗಲು ಬಾಯಿಗೆ ಮನಸ್ಸಿನಲ್ಲಿದ್ದ ಮಾತು ಬಂದೇ ಬಂತು. "ಯಾಕಮ್ಮ, ಅತ್ತಿಗೆ ಹೊರಟುಹೋದಳು? ಯಾವತ್ತು ಬರ್ತಾಳೆ ?" ಎಂದಳು. ಗಂಗಮ್ಮನವರಿಗೆ ಈ ಪ್ರಶ್ನೆ ಚಾವಟಿಯ ಪೆಟ್ಟಿನಂತಾಯಿತೇನೊ. ತಕ್ಷಣ ಈ ಕಡೆ ತಿರುಗಿದರು. ಕಾಲು ಉಳುಕಿದಂತಾಗಿ ಗೋಡೆಯ ಪಕ್ಕದಲ್ಲಿ ಕೂತರು. ಅಲ್ಲಿ ಯಾವುದೊ ಬಟ್ಟೆಯ ಚೂರು, ವಸಂತುವಿನದೆ ಅದು, ಬಿದ್ದಿತ್ತು. ಮೈಲಿಗೆ ಯಾಗಿಹೋಯಿತು. ಮೊದಲೆ ಸಿಡಿಮಿಡಿಗೊಂಡಿದ್ದ ಮನಸ್ಸು ಈಗ ಇನ್ನೂ ರೋಸಿತು. ತಕ್ಷಣ ಕೋಪದಲ್ಲಿ ವಸಂತುವನ್ನು ಎಳೆದು ಒಂದೇಟು ಹಾಕಿ ದರು. "ಹೋಗು, ಅತ್ತಿಗೆಯನ್ನು ಓಡಿಸಿದನಲ್ಲ—ಸೀನು, ಅವನನ್ನೇ ಕೇಳು"

ಎಂದುಬಿಟ್ಟರು. ವಸಂತುವಿಗೆ ಆ ಏಟಿನ ಪೆಟ್ಟಿಗಿಂತ, ಹೊಡೆದರಲ್ಲ ಎನ್ನುವ ಪೆಟ್ಟು ದೊಡ್ಡದಾಯಿತು. ಒಂದು ದಿನವಾದರೂ ಗಂಗಮ್ಮನವರು ಅವಳನ್ನು ಹೊಡೆದಿರಲಿಲ್ಲ, ಗದರಿಸಿಕೊಂಡುದೂ ಅಪರೂಪ. ಅಂತಹುದು ಈಗ ಹೊಡೆದು ಬಿಟ್ಟರು. ವಸಂತುವಿಗೆ ದುಃಖ ಹೆಚ್ಚಾಗಿ ಅಳು ಹೆಚ್ಚಿತು. ಗಂಗಮ್ಮನವರಿಗೂ ಅರಿಯದ ಹುಡುಗಿಯ ಮೇಲೆ ಕೈಮಾಡಿಬಿಟ್ಟೆನಲ್ಲ ಎಂದು ಬಹಳ ದುಃಖ ವಾಯಿತು. ತಾವೂ ಕಣ್ಣೀರು ಹಾಕುತ್ತ ಕುಳಿತುಬಿಟ್ಟರು. ವಸಂತುವನ್ನು ಸಮಾಧಾನ ಮಾಡುವಷ್ಟು ಅವರಿಗೆ ವ್ಯವಧಾನವಿರಲಿಲ್ಲ. ವಸಂತುವಂತು ಅಳುತ್ತ ಬಂದು ಸೀನುವಿನ ರೂಮಿನಲ್ಲಿ ಮುಲುಗುಟ್ಟುತ್ತ ಕುಳಿತಿದ್ದಳು. ಇದನ್ನೆಲ್ಲ ನೆನಸಿಕೊಂಡಂತೆ ವಸಂತುವಿನ ದುಃಖ ಹೆಚ್ಚಾಯಿತು. ಸೀನುವನ್ನು ತಬ್ಬಿಕೊಂಡು ಗಳಗಳನೆ ಅತ್ತುಬಿಟ್ಟಳು. ತಾಯಿಯ ಮಾತನ್ನು ನೆನಸಿಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದ ತಂಗಿಯನ್ನು ಎಷ್ಟೆಷ್ಟೊ ಪ್ರಯಾಸದಿಂದ ಸೀನು ಸಮಾಧಾನ ಪಡಿಸಿದ. ಅವಳು ತಾನೇನು ಮಾಡದಿದ್ದರೂ ಅಮ್ಮ ಹೊಡೆದು ಬಿಟ್ಟಳೆಂದು ಹೇಳಿಕೊಂಡು ದುಃಖವನ್ನು ನೆನೆನೆನೆದು ಅಳಲಾರಂಭಿಸಿದಳು. ತಾಯಿ ಕೊನೆಯಲ್ಲಿ ಅಂದ ಮಾತನ್ನು ಮಾತ್ರ ಹೇಳಿರಲಿಲ್ಲ. ಈಗ ಇದ್ದಕ್ಕಿದ್ದ ಹಾಗೆ ಸೀನುವಿನ ಕಡೆ ತಿರುಗಿ " ಸೀನು, ಅತ್ತಿಗೆ ಯಾವಾಗ ಬರುತ್ತಾಳೊ ? " ಎಂದಳು.

ಸೀನು ಮಾತಿಲ್ಲದೆ ಸುಮ್ಮನೆ ಕುಳಿತಿದ್ದ. ತಾಯಿಯ ಇಂದಿನ ನಡವಳಿಕೆ ವಿಚಿತ್ರವಾದುದು. ಎಂದೂ ಸಮತೂಕ ತಪ್ಪದ ಅವರು ಹೀಗಾಡಬೇಕಾದರೆ ಅವರ ಮನಸ್ಸಿನ ಮೇಲೆ ಎಂತಹ ಆಘಾತವಾಗಿರಬೇಕೆಂದು ಈಗ ಅವನಿಗೆ ತಿಳಿಯಿತು. ಪಾಪ ! ತಾಯಿಯ ಹೃದಯಕ್ಕೆ ಎಂತಹ ಪೆಟ್ಟು ! ಎಲ್ಲ ತನ್ನದೆ ತಪ್ಪು, ಎಂದು ತನ್ನನ್ನು ತಾನೇ ಹಳಿದುಕೊಂಡ. ತನ್ನ ತಂಗಿ, ವಸಂತುವಿಗೆ ಎಂದೂ ಈ ರೀತಿಯಲ್ಲಿ ಏಟು ಬಿದ್ದಿರಲಿಲ್ಲ. ತಾಯಿಗಂತೂ ಕೊನೆಯ ಮಗು, ಅಲ್ಲದೆ ಬಹಳ ವರ್ಷಗಳನಂತರ ಹುಟ್ಟಿದ ಹೆಣ್ಣು ಮಗು, ಒಂದೇ ಹೆಣ್ಣು ಮಗುವೆಂದು ಯಾವಾಗಲೂ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಈಗ ಅವಳನ್ನು ಹೊಡೆಯಲು ಕೂಡ ಅವರಿಗೆ ಕೈ ಬಂದಿತೆಂದಮೇಲೆ ಎಷ್ಟು ನೋವು ಅವರ ಮನಸ್ಸಿಗಾಗಿರಬೇಕೆಂದು ಸೀನುವಿಗೆ ಅನಿಸಿತು. ತಾನೆಂತಹ ಅಪರಾಧಿಯೆಂಬುದು ಈಗ ಹೆಚ್ಚು ಹೆಚ್ಚು ಖಚಿತವಾಯಿತು. ತನ್ನಿಂದ ಎಲ್ಲ

ರಿಗೂ ನೋವು, ಕೊರಗು ಎಂದೂ ತಾನು ಪಾಪಿಯೆಂದೂ ಅನಿಸಿತು. ಈ ಯೋಚನೆಯಲ್ಲಿದ್ದ ಅವನಿಗೆ ವಸಂತು ಮಾತನಾಡಿದುದು ಕೇಳಿಸಲೆ ಇಲ್ಲ. ಅಂತೆಯೆ ಮೌನವಾಗಿದ್ದ ವಸಂತು ಮತ್ತೆ ಅದೇ ಪ್ರಶ್ನೆ ಹಾಕಿದಳು : " ಸೀನು, ಸೀನು. ಅತ್ತಿಗೆ ಯಾವತ್ತು ಬರ್ತಾಳೆ ? ಅಮ್ಮ ನಿನ್ನನ್ನೇ ಕೇಳು ಅಂದಳು " ಎಂದಳು. ತನ್ನನ್ನೆ ಕೇಳು ಅಂದಳು ಅಮ್ಮ! ಎಂತಹ ಚುಚ್ಚಿತ್ತು ಆ ಮಾತಿನಲ್ಲಿ. ಸೀನು ಈ ಮಾತಿನಿಂದ ತಲ್ಲಣಿಸಿದ. ಆದರೆ ಅಷ್ಟಕ್ಕೆ ನಿಲ್ಲಲಿಲ್ಲ. ವಸಂತು ಮತ್ತೆ " ಸೀನು, ಅಮ್ಮ ಅನ್ನತಾ ಇದ್ದಳು. ನೀನು ಅತ್ತಿಗೆಯನ್ನು ಓಡಿಸಿದೆ ಅಂತ. ಅತ್ತಿಗೆ ಯಾಕೊ ಹೋದದ್ದು ? " ಎಂದಳು. ತನ್ನ ಮಾತುಗಳ ಭೀಕರತೆಯನ್ನು ಅವಳು ಅರ್ಥಮಾಡಿಕೊಂಡಂತಿರಲಿಲ್ಲ. ಪಾಪ! ಅವಳಿಗೇನು ತಿಳಿಯಬೇಕು. ಆ ಮಾತಿಗೆ ಛಳಿ ಬಂದವರಂತೆ ಸೀನು ನಡುಗಿದ. ತಾನು ಅತ್ತಿಗೆಯನ್ನು ಓಡಿಸಿಬಿಟ್ಟವನು! ನಿಜಕ್ಕೂ ಅದು ಸತ್ಯವಾದ ಮಾತು. ತಾನು ಆ ದಿನ ಹುಚ್ಚನಂತೆ ಆಡದೆ ಹೋಗಿದ್ದರೆ ಈ ಅನರ್ಥಕ್ಕೆ ಅವಕಾಶವೆ ಇರುತ್ತಿರಲಿಲ್ಲ. ತಾನು ನಿಜವಾಗಿಯೂ ಪಾತಕಿಯೆಂದೆನಿಸಿತು. ರಕ್ತ ಗುಡು ಗುಟ್ಟಿತು. ತಲೆ ಸಿಡಿಯಲಾರಂಭಿಸಿತು !

ಸೀನುವಿಗೆ ಹುಚ್ಚು ಹಿಡಿದಂತಾಗಿ ಹೋಗಿತ್ತು, ಮೂರು ನಾಲ್ಕು ದಿನ. ಅದಾದಮೇಲೆ ಅಣ್ಣ ಕಾಗದ ಬರೆಯುವ ವಿಷಯವನ್ನು ತಾಯಿ ಪ್ರಸ್ತಾಪ ಮಾಡಿದುದು. ಅದರ ಪರಿಣಾಮವೂ ಸೀನುವಿನ ಮೇಲಾಯಿತು. ಪ್ರತಿದಿನ ಮನೆಯಲ್ಲಿ ಎಲ್ಲರೂ ಕೊರಗಿ ಕಂಗೆಟ್ಟುಹೋಗುತ್ತಿದ್ದರು. ಒಳಗೇ ಕೃಶಗೊಳಿಸು ತ್ತಿತ್ತು ಈ ಕೊರಗು. ಸೀನುವಿಗಂತೂ ತಾನು ಎಲ್ಲಿ ಹೆಜ್ಜೆ ಇಟ್ಟರೂ, ಏನು ಮಾಡಿದರೂ ತಪ್ಪೆನ್ನುವ ಭಾವನೆ ಭಯಾನಕವಾಗಿಹೋಯಿತು. ಅಣ್ಣನಂತೂ ಕಾಗದ ಬರೆಯುವಂತಿಲ್ಲ, ತಂದೆ ಬರೆಯುವುದೂ ಇಲ್ಲ, ಇನ್ನು ತಾನೇಕೆ ಬರೆಯಬಾರದೆಂದು ಮನಸ್ಸಿಗೆ ಬಂತು. ಇದಕ್ಕೆ ಕಾರಣವೂ ವಸಂತುವೆ. ತಾಯಿಯಿಂದ ಏಟು ತಿಂದ ದಿನ ವಸಂತು ಸೀನುವನ್ನು ಅತ್ತಿಗೆಗೆ ಕಾಗದ ಬರೆ ಎಂದು ಕೇಳಿದ್ದರೆ ಸೀನು ತಕ್ಷಣ ಬರೆದುಬಿಡುತ್ತಿದ್ದ. ಐದು ದಿನ ಕಳೆದು ಈಗ ಆ ದಿನದ ಆವೇಗ ಇಳಿದಿತ್ತು. ಉದ್ರೇಕ ತಣ್ಣಗಾಗಿತ್ತು. ತಾನು ಅಪರಾಧಿಯೆನ್ನುವ ಭಾವನೆ ಇದ್ದರೂ, ಅತ್ತಿಗೆಯನ್ನು ಬೇಡಿಕೊಳ್ಳುವಷ್ಟು ದೊಡ್ಡತನಕ್ಕಿನ್ನೂ ಅವನನ್ನು ಅದು ತಂದಿರಲಿಲ್ಲ. ಇದರಿಂದ ಇಳಿಮುಖವಾಗಿದ್ದ

ಉದ್ರೇಕದ ಸಮಯದಲ್ಲಿ ಅವನ ತಪ್ಪು ಹೆಚ್ಚು ಪೀಡಿಸುತ್ತಿರಲಿಲ್ಲ. ವಸಂತು ಆ ದಿನ ಮಧ್ಯಾಹ್ನ ತನ್ನ ಸ್ಲೇಟನ್ನಿಟ್ಟುಕೊಂಡು ಏನೋ ಗೀಚುತ್ತಿದ್ದುದನ್ನು ನೋಡಿ ಸೀನು "ಇದೇನೆ ವಸಂತು? ಏನು ಮಾಡತಾ ಇದ್ದೀ?" ಎಂದು ಸುಮ್ಮನೆ ಕೇಳಿದ. ವಸಂತು ಏನೋ ಪಾಠವನ್ನು ಗೀಚುತ್ತಿರಬಹುದೆಂದು ಅವನಂದುಕೊಂಡಿದ್ದ. ಆದರೆ ವಸಂತು ಕೊಟ್ಟ ಉತ್ತರದಿಂದ ತಣ್ಣಗಾಗಿಬಿಟ್ಟ. "ಅತ್ತಿಗೆಗೆ ಕಾಗದ ಬರೀತಾ ಇದೀನಿ ಕಣೊ, ಅತ್ತಿಗೆಯನ್ನು ಇಲ್ಲಿಗೆ ಬಾ ಅಂತ ಕರೀತಾ ಇದೀನಿ" ಎಂದಳು. ಸೀನು ತಬ್ಬಿಬ್ಬಾಗಿ ತನ್ನ ಮೇಜಿನ ಹತ್ತಿರ ಹೋದ. ವಸಂತುವಿಗೆ ಅತ್ತಿಗೆಯದೆ ಗಿರುಪಲು ಹಿಡಿದಿದೆ, ಯಾವಾಗಲೂ ಅತ್ತಿಗೆಯದೆ ಹಂಬಲ ಅವಳಿಗೆ ಎನಿಸಿ, ದುಃಖ ಮತ್ತೆ ಕಡೆದು ಬಂತು. ಸ್ಲೇಟಿನ ಮೇಲೆ ತಲೆತಗ್ಗಿಸಿಕೊಂಡಿದ್ದ ತಂಗಿಯನ್ನು ನೋಡಿ ಹೊಟ್ಟೆಯುರಿಯಿತು. ಎಂಟು ದಿನಕ್ಕೇ ವಸಂತು ಎಷ್ಟು ತೆಗೆದು ಹೋಗಿದ್ದಾಳೆ, ಎಂದು ಹಲುಬಿದ. ಕೂದಲೆಲ್ಲ ಮಣ್ಣು, ಧೂಳು ಬಿದ್ದು ಕೆಂಜಗವಾಗುತ್ತಿದ್ದವು. ಮುಖ ಬಡಕಲಾಗಿ ಸಣ್ಣಗಾಗಿತ್ತು. ಹಾಕಿಕೊಂಡಿದ್ದ ಜಂಪರ್, ಲಂಗ ಎಲ್ಲ ಕೊಳೆ. ಈಗ ಅವಳ ಕಡೆಗೆ ಗಮನ ಕೊಡುವವರು ಯಾರು? ಅವಳ ಬಟ್ಟೆ, ಉಡಿಗೆತೊಡಿಗೆ ನೋಡಿಕೊಳ್ಳಲು ಅತ್ತಿಗೆ ಇಲ್ಲ. ಮನೆಯಲ್ಲಿ ಯಾರಿಗೂ ಬೇಕಿಲ್ಲ. ಅಂತೂ ಹೀಗೆ ಬೀದಿಯ ಹುಡುಗಿಯರಂತಾಗಿದೆ ಅವಳ ಅವಸ್ಥೆ ಎಂದು ಸೀನುವಿನ ಕರುಳು ಕೊರಗಿತು. ಅಷ್ಟರಲ್ಲಿ ವಸಂತು ಎದ್ದು ಬಂದಳು. ಅವನ ಹತ್ತಿರ ಬಂದು ತನ್ನ ಕೈಗಳಿಂದ ಅವನನ್ನು ದೂಡಿದಳು.

"ಲೊ ಸೀನು, ಸೀನು. ನನಗೆ ಬರೆಯೋದಕ್ಕೆ ಬರೋದಿಲ್ಲ ಕಣೊ. ಅತ್ತಿಗೆಗೆ ಏನಂತ ಬರೀಬೇಕೊ, ನೀನೇ ಬರೆದುಬಿಡೊ" ಎಂದಳು.

"ಆಂ–ಉಂ–ಉಂ–ಹೂ–ಹೋಗು ನೀನು" ಎಂದು ಅವಸರವಸರವಾಗಿ ಅವಳನ್ನು ಅಲ್ಲಿಂದ ಕಳಿಸಿಬಿಟ್ಟ. "ಯಾಕೊ, ಯಾಕೊ" ಎಂದು ಅವಳು ಅನ್ನುತ್ತಿದ್ದರೂ ಬಿಡದೆ ರೂಮಿನಿಂದ ಹೊರಗೆ ಬಿಟ್ಟು, ಒಳಗೆ ಬಾಗಿಲು ಹಾಕಿಕೊಂಡು ಕುಳಿತುಬಿಟ್ಟ. ಕಾಗದ—ತಾನು ಬರೆಯಬೇಕೆ! ಬರೆಯಬೇಕೆಂದು ವಸಂತು ಅಂದಳು. ಆದರೆ ತಾನು ಬರೆಯುವುದು ಅಷ್ಟು ಸುಲಭವಾದ ಕೆಲಸವೇನು? ಅತ್ತಿಗೆ ಮುನಿಸಿಕೊಂಡು ಹೋದವಳು ಕಾಗದ ಬರೆಯಲಿಲ್ಲ. ತಾನೇಕೆ ಬರೆಯಬೇಕು ಎಂದು ಮನಸ್ಸು ಸೆಟೆಯಿತು. ಈ ಅಭಿಮಾನವೇನೊ ದೊಡ್ಡ

ದಾಗಿ ನಿಂತಿತು. ಅಲ್ಲದೆ ತಾನು ಕಾಗದ ಬರೆದರೂ ಅತ್ತಿಗೆ ಬರುತ್ತಾಳೆಂದು ತಾನೆ ಹೇಗೆ ಗೊತ್ತು. ಬರುವಳೊ ಇಲ್ಲವೊ ! ತನ್ನ ಮೇಲೆ ಅಷ್ಟೊಂದು ಕೋಪಗೊಂಡು, ಇನ್ನು ಮೇಲೆ ಈ ಮನೆಯಲ್ಲಿ ಕಾಲಿಡುವುದಿಲ್ಲವೆಂದು ಹೇಳಿ ಹೋದ ಅತ್ತಿಗೆ ತನ್ನ ಕಾಗದಕ್ಕೆ ಬೆಲೆ ಕೊಡುವಳೆಂದಾದರೂ ಹೇಗೆ ಹೇಳುವುದು ? ತನ್ನ ಮಾತಿಗೆ ಅತ್ತಿಗೆ ಯಾವ ಬೆಲೆಯನ್ನೂ ಕೊಡುವುದೇ ಇಲ್ಲ. ಅವಳು ತನ್ನ ಕಾಗದಕ್ಕೆ ಮನ್ನಣೆ ಕೊಟ್ಟು ಬರುವುದಂತೂ ಅಸಂಭವ ಎಂದುಕೊಂಡ. ಹೊರಗಡೆ ವಸಂತು ಒಂಟಿ ಸೀನು ಸೀನಿದಳು.

ಒಂದೆರಡು ಗಳಿಗೆಯಾದಮೇಲೆ ಕಾಗದ ಬರೆಯುವುದೇ ಸರಿಯೆನಿಸಿತು. ತನ್ನದೇನೊ ತಪ್ಪಿತ್ತು, ತಾನು ಹಾಗೆ ಕೆಣಕಿ ಮಾತಾಡಿದ್ದುದರಿಂದ ತಾನೆ ಅತ್ತಿಗೆ ರೇಗಿ ಹೊರಟುಹೋಗಿದ್ದುದು. ಆ ಹಾಳು ಕ್ರಿಕೆಟ್ಟಿನದಂತೂ ಅಷ್ಟರಲ್ಲೆ ಆಯಿತು. ತಾನು ಅತ್ತಿಗೆಗೆ ಕಾಗದ ಬರೆದರೆ ಖಂಡಿತವಾಗಿಯೂ ಅತ್ತಿಗೆ ಬರುತ್ತಾಳೆ. ಕ್ಷಮಾಪಣೆ ಕೇಳಿಕೊಳ್ಳುವುದೆ ಸರಿ ಎಂದುಕೊಂಡು ಮೇಜಿನ ಮುಂದೆ ಕುಳಿತ. ಆದರೆ ಮನಸ್ಸೇಕೋ ಕಾಗದ ಬರೆಯಲು ಬಗ್ಗಲಿಲ್ಲ. ಎಷ್ಟೇ ಪ್ರಯತ್ನಿಸಿದರೂ ಕಾಗದವನ್ನು ಹೇಗೆ ಬರೆಯಬೇಕೆಂಬುದೆ ತೋಚಲಿಲ್ಲ. ಹೇಗೆ ಆರಂಭಿಸಬೇಕು, ಏನು ಬರೆಯಬೇಕು ಎನಿಸಿ ಸುಮ್ಮನೆ ಒದ್ದಾಡಿದ. ಯೋಚನೆ ಮಾಡಿ ಆಮೇಲೆ ಬರೆಯುವುದೆಂದುಕೊಂಡು ಸುಮ್ಮನಾದ. ಆದರೆ ಹೆಚ್ಚು ಹೆಚ್ಚು ಯೋಚಿಸಿದಷ್ಟೂ ಹಾಗೆ ಕಾಗದ ಬರೆಯುವುದು ಬೇಡವೆಂದೆನಿಸಲು ಹತ್ತಿತು. ನೋಡೋಣ, ಇನ್ನೂ ನಾಲ್ಕು ದಿನ—ಅತ್ತಿಗೆಯೊಬ್ಬಳದೇ ಹಟವೇನು ? ನಮ್ಮದೂ ಹಟವಿಲ್ಲವೆ ! ಅಣ್ಣ ಬರುವ ತನಕವಾದರೂ ಇದ್ದು ಹೋಗಬಹುದಾಗಿತ್ತು. ಹಾಗೆ ಮಾಡದೆ ಹೊರಟುಹೋದಳು. ಅವಳದೂ ತಪ್ಪು, ಅವಳೂ ಅನುಭವಿಸಲಿ. ಅತ್ತಿಗೆ ತಾನಾಗಿಯೆ ಕಾಗದ ಬರೆಯಬೇಕು ಎಂಬ ಭಾವನೆ ಬಲಿಯುತ್ತ ಬಂತು.

ಇದಾದಮೇಲೂ ಹತ್ತು ದಿನ ಕಳೆದಿತ್ತು. ಈ ಹತ್ತು ದಿನದಲ್ಲಿ ಎಷ್ಟು ಬದಲಾವಣೆಯಾಗಿ ಹೋಗಿತ್ತು. ವಸಂತು ಕಾಗದದ ಮಾತೆತ್ತಿದ ಮರುದಿನವೆ ಕಾಲೇಜಿನಲ್ಲಿ ಒಂದು ಕ್ರಿಕೆಟ್ ಪಂದ್ಯವಿತ್ತು. ಪಾಚು, ವೈ. ಎಸ್. ಇಬ್ಬರೂ ಸೀನುವನ್ನು ಕರೆಸಿ ಅವನು ಈ ಪಂದ್ಯದಲ್ಲಿ ಆಡಲೇಬೇಕೆಂದು ಹೇಳಿದರು. ಸೀನುವಿಗೇನೊ ಮನಸ್ಸು ಬೇಸರವಾಗಿತ್ತು. ತಾನು ಆಡುವುದಿಲ್ಲವೆಂದು

ಹಟಹೂಡಿದ. ಆದರೂ ಮನಸ್ಸಿನಲ್ಲಿ ಕ್ರಿಕೆಟ್ಟಿನ ಮೋಹ ಮನೆಮಾಡಿಕೊಂಡಿತ್ತು. ಬಾಯೇನೊ ಇಲ್ಲ, ಇಲ್ಲವೆನ್ನುತ್ತಿದ್ದರೂ ಮನಸ್ಸು ಮಾತ್ರ ಅರ್ಧರ್ಧ ಆಟದ ಕಡೆ ಓಲುತ್ತಿತ್ತು. ಹೇಗೂ ಈ ಆಟಕ್ಕೂ ತನಗೂ ಸಂಪೂರ್ಣವಾಗಿ ಸಂಬಂಧ ತಪ್ಪಿಹೋಗಲಿ, ಕಡಿದು ಹೋಗಲಿ ಎಂದು ಮನಸ್ಸು ರೋಸಿನಲ್ಲಿ ಹೇಳಿತ್ತು. ಆದರೂ ಬಾಂಧವ್ಯ ಹೋಗದು. ಹಳೆಯ ವಾಸನೆ ಇನ್ನೂ ಸೆಳೆಯುತ್ತಿತ್ತು. ಪಾಚುವಂತೂ ಸೀನುವಿನ ಮೇಲೆ ರೇಗಿದಂತೆಯೆ ಮಾತನಾಡಿದರು. ಕಣ್ಣುಗಳು ದೊಡ್ಡವಾಗಿ ಹಾಗೂ ಹೀಗೂ ತೇಲಾಡಿದವು. ಮೂಗು ಕೆಂಪಾಯಿತು. "ಏನೊ ಹುಚ್ಚುಹುಚ್ಚಾಗಿ ಆಡತೀಯ. ಎಂ.ಜಿ.ಎಸ್.ಗೆ ತಪ್ಪಿಸಿಕೊಂಡೆ. ಈಗ ಮಧುರೆಯ ಕಾಲೇಜಿನವರು ಬಂದಿದಾರೆ. ಅವರಿಗೆ ಮಣ್ಣು ಮುಕ್ಕಿಸಬೇಕು ಅಂತ ನೋಡಿದರೆ ಜಂಬ ಮಾಡ್ತಾನೆ" ಎಂದರು ಪಾಚು. ತನ್ನಲ್ಲಿ ಅವರಿಟ್ಟ ಪ್ರೀತಿ ವಿಶ್ವಾಸದಿಂದ ಸೀನುವಿಗೆ ಇನ್ನೂ ಕ್ರಿಕೆಟ್ಟಿನ ಸೆಳವು ಹೆಚ್ಚಾಯಿತು. ಕೊನೆಗೆ ಆ ದಿನ ಆಡಲು ಅವನೊಪ್ಪಬೇಕಾಯಿತು. ಮುಕ್ಕಾಲು ಮನಸ್ಸಿನಿಂದ ಒಪ್ಪಿದ. ಮತ್ತೆ ಯಾವಾಗಲಾದರೂ ಹೀಗೆ ಆಟಕ್ಕೆ ತನ್ನನ್ನು ಸೇರಿಸಿಕೊಂಡರೆ ತಕ್ಷಣ ಅದನ್ನು ಅತ್ತಿಗೆಗೆ ಹೇಳಿಕೊಳ್ಳುವುದು ಅವನಿಗೆ ರೂಢಿಯಾಗಿತ್ತು. ಈಗ ಮನೆಗೆ ಬಂದಾಗ ಯಾರ ಕೈಯಲ್ಲಿ ಹೇಳಬೇಕು. ಮನಸ್ಸು ಕ್ರಿಕೆಟ್ಟಿನಿಂದ ತುಂಬಿದ್ದ ಹಾಗೆ ನೆನಪು ಅತ್ತಿಗೆಯಿಂದ ತುಂಬಿತ್ತು. ಈಗ ಅತ್ತಿಗೆ ಇದ್ದಿದ್ದರೆ ಎಷ್ಟೊಂದು ಚೆನ್ನಾಗಿತ್ತು, ಅತ್ತಿಗೆ ತನಗೆಷ್ಟು ಉತ್ತೇಜನ ಕೊಡುತ್ತಿದ್ದಳು ಎಂದುಕೊಂಡು ಮನಸ್ಸಿಗೆ ಮತ್ತೆ ದುಃಖ ಬಂತು. ಮರುಕಳಿಸಿದ ನೆನಪಿನಲ್ಲಿ ಸಂಜೆಯೆಲ್ಲ ಒದ್ದಾಡಿದ. ಏನೋ ಮಾತನಾಡಲು ಹೋಗಿ ಅರ್ಧದಲ್ಲೆ ನಿಲ್ಲಿಸಿ, ಉಳಿದುದನ್ನು ಹೇಳಲು ಕಾತರಪಡುವವನಂತಾಗಿತ್ತು ಅವನ ಅವಸ್ಥೆ. ಯಾರಿಗಾದರೂ ತನ್ನ ಮನಸ್ಸಿನಲ್ಲಿರುವುದನ್ನು ಹೇಳಿಕೊಳ್ಳಬೇಕೆಂದು ಬಹಳ ಪ್ರಯಾಸಪಟ್ಟ. ಆದರೆ ಯಾರಿಗೆ ಹೇಳಿಕೊಳ್ಳಬೇಕು ? ಹೀಗಾಗಿ ಹೃದಯದ ಭಾರ ಮೌನದ ಮಹಾಸಮುದ್ರಕ್ಕೆ ಅವನನ್ನು ಎಳೆಯಿತು. ಅದೇ ರಾತ್ರಿ ಏನೋ ಮಾತನಾಡಲು ವಸಂತು ಬಂದಾಗ 'ನಾಳೆ ಕ್ರಿಕೆಟ್ ಮ್ಯಾಚಿದೆ' ಎಂದು ತಾನಾಗಿಯೆ ಬಾಯಿಂದ ಹೊರಬಿತ್ತು. ವಸಂತುವಿಗೇನು ತಾನೆ ಆಸಕ್ತಿ ಇದ್ದೀತು ಎಂಬುದೆ ಅವನ ಗಮನಕ್ಕೆ ಬರಲಿಲ್ಲ. ಆದರೆ ಹೇಳಿಬಿಟ್ಟಮೇಲೆ ಏಕೋ ಒಂದು ಬಗೆಯ ಸಮಾಧಾನವೂ ಆಯಿತು, ಬೇಸರವೂ ಆಯಿತು.

ವಸಂತು ಸೀನುವಿನ ಹತ್ತಿರ ಬಂದು ಮುಸುಗುಟ್ಟಿದಳು. “ಯಾಕೆ ವಸಂತು —ಏನು ಹೇಳು ?” ಎಂದ ಸೀನು ಬಹಳ ಪ್ರೀತಿಯಿಂದ, ಅವಳ ಮೈದಡ ವುತ್ತ. ಅವನ ಶರಟಿನ ಗುಂಡಿಯನ್ನು ತಿರುಚುತ್ತ ವಸಂತು ಮೆಲ್ಲನೆ “ನೋಡೊ, ಸೀನು—ಸರ್ಕಸ್ ಬಂದಿದೆ. ಅತ್ತಿಗೆ ಕರಕೊಂಡುಹೋಗ್ತೀನಿ ಅಂತ ಹೇಳಿದ್ದಳು. ಈಗ ನಮ್ಮ ಕ್ಲಾಸಿನ ಹುಡುಗರೆಲ್ಲ ಹೋಗಿದಾರೆ. ತುಂಬಾ ಚೆನ್ನಾಗಿದೆಯಂತೆ” ಎಂದಳು. ಸೀನುವಿಗೆ ತಂಗಿಯ ಮೇಲೆ ಮಮತೆ ಉಕ್ಕಿಬಂದಿತು. ಪಾಪ! ಎಷ್ಟು ಆಸೆಯಿಂದಿದ್ದಳೊ ವಸಂತು. ಆ ಆಸೆ ಈಗ ಮುರಿಯಿತಲ್ಲ ಎಂದು ಮರುಗಿದ. ವಸಂತು ಮತ್ತೆ ಮಾತನಾಡಲಾರಂಭಿಸಿದಳು. ಅಣ್ಣ ಯಾಕೋ ಸುಮ್ಮನಿರುವನಲ್ಲ ಎಂದು ಅವಳಿಗೆ ಅನುಮಾನವಾಯಿತು. “ಸೀನು, ನಿಜವಾಗಿಯೂ ಬಹಳ ಚೆನ್ನಾಗಿದೆಯಂತೆ ಕಣೊ. ದೊಡ್ಡ ದೊಡ್ಡ ಹುಲಿ, ಸಿಂಹ ಎಲ್ಲ ಇದೆಯಂತೆ. ಆ ಸಿಂಹದ ಬಾಯಲ್ಲಿ ನಿಜವಾಗಿಯೂ ಹಲ್ಲಿದೆಯಂತೆ ಕಣೊ! ಅದಕ್ಕೊಬ್ಬ ಕೈಯಿಡತಾನಂತೆ! ಅಬ್ಬಾ!—ಸೀನು, ಸಿಂಹ ಕಚ್ಚೋದಿಲ್ಲವೇನೊ?” ಎಂದಳು. “ಇಲ್ಲ ಕಣೆ—ಆ ಸಿಂಹ ಕಚ್ಚೊಲ್ಲ” ಎಂದು ಸೀನು ತಂಗಿಗೆ ಸಮಾಧಾನ ಹೇಳಿದ. ವಸಂತುವಿಗೆ ಈ ವೇಳೆಗೆ ತುಂಬಾ ಧೈರ್ಯ ಬಂದಿತ್ತು. ಮೆಲ್ಲನೆ ತೊಡೆ ಏರುತ್ತ “ಸೀನು, ನನ್ನನ್ನ ಕರೆದುಕೊಂಡು ಹೋಗತೀಯೇನೊ?—ನಾಳೆ ಕೊನೆ ಆಟವಂತೆ. ಅತ್ತಿಗೆ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು, ಅಲ್ಲವೇನೊ? ಅತ್ತಿಗೆ ಜೊತೇಲಿ ಹೋಗಬಹುದಾಗಿತ್ತು. ನನ್ನನ್ನ ಕರಕೊಂಡು ಹೋಗತೀನಿ ಅಂತ ಹೇಳಿದ್ದಳು ಕಣೊ, ಅತ್ತಿಗೆ. ನೀನು ಕರಕೊಂಡು ಹೋಗತೀಯೇನೊ?” ಎಂದು ಗೋಗರೆದಳು. ಆಗ ಅವಳ ದೈನ್ಯ ಕಂಡು ಸೀನುವಿನ ಹೃದಯ ಪೂರ್ತಿ ಕರಗಿತು. ಅತ್ತಿಗೆಯ ಹಂಬಲ ತಮಗೆಲ್ಲರಿಗೂ ಎಷ್ಟೊಂದಾಗಿ ಹೋಗಿದೆಯೆಂದು ಅವನಿಗೆ ಈಗ ತಿಳಿಯಿತು. ಯಾವ ವಸ್ತುವಿನ ಬೆಲೆಯೂ ನಮಗೆ ತಿಳಿಯುವುದು ಅದನ್ನು ಕಳೆದುಕೊಂಡಾಗ ಎಂಬುದು ಈಗ ಮನವರಿಕೆಯಾಯಿತು. ಅತ್ತಿಗೆಯ ಜತೆಯಲ್ಲಿ ತಾನು, ವಸಂತು, ಗಂಗಮ್ಮನವರು ಸಿನಿಮಾಕ್ಕೆ ಹೋಗಿದ್ದುದು ಎಷ್ಟೋ ಬಾರಿ. ಸರ್ಕಸ್ಸಿಗೆ ಹೋಗಬೇಕೆಂದು ಅತ್ತಿಗೆ ವಸಂತುವಿಗೆ ಮಾತು ಕೊಟ್ಟಿದ್ದುದೂ ಸೀನುವಿಗೆ ಗೊತ್ತಿತ್ತು. ಮೂವರೂ ಹೋಗಬೇಕೆಂದು ಗೊತ್ತಾಗಿತ್ತು. ಆದರೆ ಈಗ ವಸಂತುವನ್ನು ತಾನೇ ಕರೆದು

ಕೊಂಡು ಹೋಗಬೇಕು. ಅತ್ತಿಗೆಯಿಲ್ಲ! ಈ ಯೋಚನೆಯಲ್ಲಿ ಒಂದು ಗಳಿಗೆ ಮೌನವಾಗಿದ್ದ ಸೀನು. ವಸಂತುವಿಗೆ ಆ ಮೌನ ಸಹಿಸಲಿಲ್ಲ. ತಕ್ಷಣವೆ ಅವನು 'ಹೂಂ' ಎನ್ನಲಿಲ್ಲವಲ್ಲ ಎಂದು ಮುನಿಸಿನಿಂದ "ಹೋಗೊ ಸೀನು, ನೀನು ಕೆಟ್ಟವನು. ಅತ್ತಿಗೆಯೆ ಒಳ್ಳೆಯವಳು. ಸರ್ಕಸ್ಸಿಗೆ ಕರಕೊಂಡು ಹೋಗೊ ಅಂದರೆ—ಕರಕೊಂಡು ಹೋಗ್ತೀಯೇನೊ?" ಎಂದು ಮತ್ತೆ ಬೇಡುವ ದನಿಯಲ್ಲಿ ಗಿಂಜುತ್ತ ಕೇಳಿಕೊಂಡಳು. ಸೀನುವಿಗೂ ಅವಳನ್ನು ಕರೆದುಕೊಂಡು ಹೋಗುವ ಆಸೆ ಇತ್ತು. ಆದರೆ ಈ ಕ್ರಿಕೆಟ್ ಪಂದ್ಯವೊಂದು ಅಡ್ಡಬಂದಿತ್ತು. ಕ್ರಿಕೆಟ್ ಆಟವಾಡಿಬಿಟ್ಟು ಸುಸ್ತಾಗಿರುತ್ತೆ, ಅಲ್ಲದೆ ಮಧುರೆಯ ಕಾಲೇಜಿನಿಂದ ಬಂದಿರುವವರಿಗೂ ತಮ್ಮ ಟೀಮಿಗೂ ಪಂದ್ಯವಾದ ಮೇಲೆ ಸಂಜೆಯೊಂದು ಭೋಜನಕೂಟವಿರುತ್ತೆಂದು ಪಾಚು ಹೇಳಿದ್ದರು. ಅದನ್ನು ತಪ್ಪಿಸಿಕೊಂಡರೆ ಮಾತ್ರ ವಸಂತುವನ್ನು ಸರ್ಕಸ್ಸಿಗೆ ಕರೆದೊಯ್ಯಲು ಸಾಧ್ಯ. ಆದರಿಂದ ಅಂತೂ ವಸಂತುವಿಗೆ ನಿರಾಶೆ ಎಂದುಕೊಂಡ. ಮತ್ತೆ ವಸಂತು "ಕರಕೊಂಡು ಹೋಗತೀಯೇನೊ" ಎಂದಾಗ ಸೀನು ಉತ್ತರ ಕೊಡಲು ತಬ್ಬಿಬ್ಬಾದ. "ನೋಡು ವಸಂತು, ನನಗೆ ಪುರಸತ್ತೆ ಇಲ್ಲ ಕಣೆ, ನಾಳೆ ಕ್ರಿಕೆಟ್ ಮ್ಯಾಚಿದೆ, ತಪ್ಪಿಸಿಕೊಳ್ಳುವ ಹಾಗೇ ಇಲ್ಲ. ಇಲ್ಲದಿದ್ದರೆ ಕರಕೊಂಡು ಹೋಗತಿದ್ದೆ" ಎಂದ. ಅವನ ಮಾತಿನ ರೀತಿ ಅಪರಾಧಿಯಂತಿತ್ತು. ವಸಂತು ಅಳುವಿಗೆ ತೊಡಗುವಂತೆ ನಡಗುವ ಕೋಪದ ದನಿಯಲ್ಲಿ "ಹೋಗೊ, ನಿನಗೆ ನಾವು ಯಾರೂ ಬೇಡ, ಕ್ರಿಕೆಟ್ಟೆ ಹೆಚ್ಚು. ಸಾಯುಂಕಾಲಕ್ಕೆ ಕರಕೊಂಡು ಹೋಗೊ ಅಂದರೆ—ಅತ್ತಿಗೆಯೆ ಒಳ್ಳೆಯವಳು. ನೀನು ಕೆಟ್ಟವನು, ಹೋಗೊ" ಎನ್ನುತ್ತ ಅವನ ತೊಡೆಯಿಂದಿಳಿಯಲು ಯತ್ನಿಸಿದಳು. ಸೀನು ಅವಳನ್ನು ಕಷ್ಟದಿಂದ ಅಲ್ಲಿಯೆ ಕೂಡಿಸಿ ಹಿಡಿದುಕೊಂಡ. ಒಳ್ಳೆಯ ಮಾತಾಡಿ ಸಮಾಧಾನ ಮಾಡಿದ. ಆದರೆ ವಸಂತು ಮಾತ್ರ ಹಿಡಿದ ಪಟ್ಟನ್ನು ಬಿಡಲೆ ಇಲ್ಲ. ಕೊನೆಗೆ ಅವಳನ್ನು ಮರುದಿನ ಸಂಜೆಗೆ ಮೊದಲ ಆಟಕ್ಕೆ ಸರ್ಕಸ್ಸಿಗೆ ಕರೆದುಕೊಂಡು ಹೋಗುವುದಾಗಿ ಮಾತು ಕೊಟ್ಟಮೇಲೆ ಸುಮ್ಮನಾದಳು. "ಏನು ಹಟವೆ, ನಿನ್ನದು" ಎಂದು ಅವಳನ್ನು ಮುದ್ದಾಡಿದ ಸೀನು.

ಮಾರನೆಯ ದಿನ ಕ್ರಿಕೆಟ್ ಮ್ಯಾಚಾಯಿತು. ಸೀನು ಚೆನ್ನಾಗಿ ಬೌಲ್ ಮಾಡಿದ. ಬ್ಯಾಟಿಂಗಿನಲ್ಲಿಯೂ ಸುಮಾರಾಗಿ ಆಡಿದ. ಹೊತ್ತು ಸಾಕಿಲ್ಲ

ದುದರಿಂದ ಪಂದ್ಯ ಸಮನಾಯಿತು. ಎರಡು ಕಡೆಯವರೂ ಸೀನುವನ್ನು ಚೆನ್ನಾಗಿ ಹೊಗಳಿದರು. ಆರು ವಿಕೆಟ್ಟುಗಳನ್ನು ತೆಗೆದುಕೊಂಡ ವೀರ ಅವನು. ಮಧುರೆಯ ಗುಂಪಿನ ಕ್ಯಾಪ್ಟನ್ನಂತೂ ಸೀನುವನ್ನು ತುಂಬ ಹೊಗಳಿದ. ಮ್ಯಾಚು ಮುಗಿದೊಡನೆ ಕಾಲೇಜಿನ ರೂಮಿಗೆ ಬಂದು ಮುಖ ತೊಳೆದು ಸೀನು ಹೊರಡಲು ಸಿದ್ಧನಾದ. ಆದರೆ ಉಳಿದವರು ಅವನನ್ನು ಬಿಡಲೊಲ್ಲರು. ಎಷ್ಟೆಷ್ಟೆ ಹೇಳಿದರೂ ಅವನನ್ನು ಬಿಡುಗಡೆ ಮಾಡಲು ಅವರು ಸಿದ್ಧರಿರಲಿಲ್ಲ. ಮಧುರೆಯ ಪಂಗಡದವರಂತೂ ಬಲವಂತವಾಗಿ ಅವನನ್ನು ನಿಲ್ಲಿಸಿ ಬಿಟ್ಟರು. ಮನೆಯಲ್ಲಿ ವಸಂತು ಕಾದಿರುವಳು, ಪಾಪ! ತಾನು ಅವಳನ್ನು ಸರ್ಕಸ್ಸಿಗೆ ಕರೆದುಕೊಂಡು ಹೋಗುವುದಾಗಿ ಹೇಳಿದ್ದ. ಬೆಳಗ್ಗೆ ಕೂಡ ಅವಳು ನೆನಪು ಮಾಡಿಕೊಟ್ಟಿದ್ದಳು. 'ಈಗ ಕ್ರಿಕೆಟ್ಟಿಗೆ ಹೋದರೆ ಸಂಜೆ ಬೇಗ ಬರುವುದಿಲ್ಲ ಸೀನು' ಎಂದು ಹಂಗಿಸಿದ್ದಳು. ಖಂಡಿತವಾಗಿಯೂ ಬರುತ್ತೇನೆಂದು ಹೇಳಿ ಬಂದಿದ್ದ. ಆದರೆ ಈಗ ಅವಳು ಹೊಸ ಲಂಗ ಹಾಕಿಕೊಂಡು ಮನೆಯಲ್ಲಿ ಕಾದಿರು ವಳು. ಅಲಂಕಾರ ಮಾಡಿ, ತಲೆ ಬಾಚಿ, ರಿಬ್ಬನ್ನಿನ ಸೇತುವೆಯಲ್ಲಿ ಎರಡು ಜಡೆಗಳನ್ನೂ ಕೂಡಿಸಲು ಅತ್ತಿಗೆ ಇರಲಿಲ್ಲ. ಆದರೂ ವಸಂತು ಹೊಸ ಲಂಗ ವನ್ನೇನೊ ಹಾಕಿಕೊಂಡು ಹಾಗೆಯೆ ಮುಖ ತೊಳೆದುಕೊಂಡು ತನಗಾಗಿ ಕಾದಿರುವಳು. ಅವಳಿಗೆ ಈಗ ನಿರಾಶೆಗೊಳಿಸಬೇಕಲ್ಲ ಎಂದು ಸೀನು ಒದ್ದಾಡಿದ. ಹೇಗೋ ಬೇಗ ಹೊರಟುಬಿಟ್ಟರಾಯಿತು ಎಂದು ಒದ್ದಾಡಿದ. ಪಾಚುವಿನ ಹತ್ತಿರ ಹೋಗಿ "ಸಾರ್, ನಾನು ಮನೆಗೆ ಹೋಗಬೇಕು. ನನ್ನ ತಂಗಿಯನ್ನು ಸರ್ಕಸ್ಸಿಗೆ ಕರೆದುಕೊಂಡು ಹೋಗಬೇಕು, ಸಾರ್" ಎಂದ. ಪಾಚು ಈ ಮಾತು ಕೇಳಿ ನಕ್ಕುಬಿಟ್ಟರು. ಆ ನಗೆ—ಅಷ್ಟೇ ಸೀನುವಿನ ಮನಸ್ಸನ್ನು ಕದಡಲು ಸಾಕಾಯಿತು. ಬೇರೆ ಯಾವ ಉತ್ತರವೂ ಬೇಕೇ ಆಗಲಿಲ್ಲ. ನಾಚಿಕೆಯಿಂದ ಮುಖ ಕೆಂಪೇರಿತು. 'ಸಂಸಾರ ಕಾಣದವರಲ್ಲಿ ಇಂತಹ ಮಾತು ಹೇಳಿದರೆ ಸಹಾನುಭೂತಿ ಎಲ್ಲಿ ಸಿಕ್ಕೀತು' ಎಂದು ಮನಸ್ಸು ಅಂದರೂ, ಅದು ಸರಿಯಾದ ವಿಚಾರವಲ್ಲವೆಂದು ತಕ್ಷಣ ಪಶ್ಚಾತ್ತಾಪ ಪಟ್ಟ. 'ಇಲ್ಲ ಸಾರ್, ನಾನು ಹೋಗಲೇಬೇಕು' ಎಂದನ್ನಲು ಬಾಯಿ ತೆರೆದವನು ಆಡದೆ ಸುಮ್ಮನಾದ. ಪಾಚು ತಾವಾಗಿಯೆ "ಸೀನು, ನನಗೆ ಇದೆಲ್ಲ ಹೇಳಿಕೊಂಡರೆ ಏನೂ ಅರ್ಥವಾಗುವುದಿಲ್ಲವೆಂದು ನೀನಂದುಕೊಂಡಹಾಗಿದೆ.

ಆದರೆ ನೋಡು, ಇವರೆಲ್ಲ ಇಷ್ಟೊಂದು ಹೇಳುತ್ತಿರುವಾಗ ನೀನು ಹೊರಟು ಬಿಡುವುದು ಅಷ್ಟು ಚೆನ್ನಾಗಿಲ್ಲ. ತಂಗಿಯನ್ನು ಎರಡನೆಯ ಷೋ(ಆಟ)ಕ್ಕೆ ಕರೆದುಕೊಂಡು ಹೋಗು" ಎಂದರು. ಅವರ ಮಾತಿನಲ್ಲಿದ್ದ ಮಮತೆಯಿಂದ ಸೀನು ಮತ್ತೆ ಮಾರುಹೋದ. ಅಂತೂ ಬೇಗನೆ ಮನೆಗೆ ಹೋಗಿ ಎರಡನೆಯ ಆಟಕ್ಕಾದರೂ ಅವಳನ್ನು ಕರೆದುಕೊಂಡು ಹೋಗಬೇಕೆಂದುಕೊಂಡ. ಎಂಟು ಎಂಟೂವರೆಗೆ ಹೇಗಾದರೂ ಇವರೆಲ್ಲರ ಕೈಯಿಂದ ತಪ್ಪಿಸಿಕೊಂಡು ಹೋದ ರಾಯಿತು ಎಂದುಕೊಂಡ. ಹೀಗಾಗಿ ಆಗ ಅಲ್ಲಿಯೆ ಉಳಿದುಕೊಂಡ. ಆದರೂ ಮನೆಯಲ್ಲಿ ತಂಗಿ ಕಾಯುತ್ತಿರುವಳೆಂಬ ಮಾತು ನೆನಪಾದಾಗಲೆಲ್ಲ ಮನಸ್ಸು ಒದ್ದಾಡುತ್ತಿತ್ತು, ಒಂದು ಗಳಿಗೆ ಮಾತು ಎಡವುತ್ತಿತ್ತು.

ರಾತ್ರಿ ಒಂಬತ್ತರ ವೇಳೆಗೆ "ವಸಂತು, ವಸಂತು" ಎಂದು ಕೂಗುತ್ತ ಒಳಕ್ಕೆ ಬಂದ. ಸಾಯಂಕಾಲವೆಲ್ಲ ಕಾದು ಕಾದು ಬೇಸರಗೊಂಡು, ತನ್ನ ಮೇಲೆ ಕೋಪಗೊಂಡು ಮಾತೇ ಆಡುವುದಿಲ್ಲ, ಇನ್ನು ಅವಳನ್ನು ಸಮಾಧಾನ ಪಡಿಸಬೇಕಾದರೆ ಕಲಿತ ಬುದ್ಧಿಯನ್ನೆಲ್ಲ ಖರ್ಚು ಮಾಡಬೇಕಾಗುತ್ತದೆ, ಅಂತೂ ಈಗ ಸರ್ಕಸ್ಸಿಗೆ ಕರೆದುಕೊಂಡು ಹೋಗಿಬಿಟ್ಟರೆ ಸಮಾಧಾನವಾಗು ತ್ತದೆ. ಸಾಯಂಕಾಲ ಬೇಗ ಹೋಗದಿದ್ದುದಕ್ಕೆ ತಪ್ಪುಕಾಣಿಕೆಯೆಂದುಕೊಂಡು ಎಂಟಾಣೆ ಕೊಟ್ಟು ದಾರಿಯಲ್ಲಿ ಒಂದು ಬಣ್ಣದ ಚಿಟ್ಟೆಯ ಬ್ರೋಚನ್ನು ಕೊಂಡು ಜೇಬಿನಲ್ಲಿಟ್ಟುಕೊಂಡು ತಂದಿದ್ದ. ಈಗ ವಸಂತುವನ್ನು ಹೇಗೆ ಹೇಗೆ ಸಮಾಧಾನ ಪಡಿಸಬೇಕೆಂದು ಲೆಕ್ಕಹಾಕುತ್ತಿದ್ದ. ಆದರೆ ದಾರಿ ಕಾಯುತ್ತಿರಬೇಕಾದ ಅವಳು ಅಂಗಳದಲ್ಲಿರಲಿಲ್ಲ. ನೇರ ತನ್ನ ರೂಮಿನೊಳಕ್ಕೆ ಹೋದ ಸೀನು. ಅಲ್ಲಿ ಹಾಸಿಗೆಯ ಮೇಲೆ ವಸಂತು! ಪಕ್ಕದಲ್ಲಿ ಕುಳಿತ ತಾಯಿಯನ್ನು ಕಂಡೊಡನೆ ಸೀನುವಿನ ಎದೆ ಸಿಡಿಯಿತು. ಗಾಬರಿಯಲ್ಲಿ ಎದೆಯ ಬಡಿತ ಬಹಳ ಏರಿತು. ವಸಂತುವಿಗೇನೊ ಆಗಿಹೋಗಿದೆಯೆಂದು ಒದ್ದಾಡಿದ. ತಾನು ಬರುವ ದಾರಿ ಕಾಯುತ್ತ ಕುಣಿದು ಕುಪ್ಪಳಿಸುವ ತಂಗಿ ಹಾಸಿಗೆಯಲ್ಲಿ ಮಲಗಿ ನರಳುತ್ತಿದ್ದು ದನ್ನು ಕಂಡು ಸೀನುವಿನ ಕರುಳು ಮಿಡಿಯಿತು. ಹೃದಯ ಬಿಗಿದುಬಂತು. ತನ್ನ ಅಪರಾಧಕ್ಕೆ ಇದು ಶಿಕ್ಷೆಯೇನೊ ಎನ್ನುವಷ್ಟು ದೀನವಾಯಿತು ಅವನ ರೀತಿ. ಸದ್ದು ಮಾಡದಂತೆ ಹತ್ತಿರ ಬಂದ. ತಾಯಿ ಗಂಗಮ್ಮನವರು ವಸಂತುವಿನ ಹಣೆಗೆ ಹಾಲಿನ ಪಟ್ಟು ಹಾಕುತ್ತಿದ್ದರು. ಬೆಳಿಗ್ಗೆ ತಾನು ಹೋಗುವಾಗ

ಚೆನ್ನಾಗಿ ಓಡಿಯಾಡಿಕೊಂಡಿದ್ದವಳು ಈಗ ಹೀಗೆ ಮಲಗಿಬಿಟ್ಟಳಲ್ಲ ಎಂದು ಸೀನು ಒದ್ದಾಡಿದ. ಏನಾಯಿತೆಂದು ತಾಯಿಯನ್ನು ಕೇಳುವ ಮನಸ್ಸು. ಆದರೆ ಕೇಳಲು ಯಾಕೊ ಹಿಂಜರಿಯಿತು. ವಸಂತುವಿನ ಹಾಸಿಗೆಯ ಪಕ್ಕಕ್ಕೆ ಬಂದು ಕುಳಿತ. ತಾನೆತಾನಾಗಿ ಅವನ ಕೈ ವಸಂತುವಿನ ಕೈ ಮುಟ್ಟಲು ಹೋಯಿತು. ಹಾಗೆಯೆ ಅವಳ ಎದೆಯ ಮೇಲೂ ಕೈ ಇಟ್ಟು ನೋಡಿದ. ವಸಂತು ಜರತಾರಿ ಲಂಗ, ಜರತಾರಿ ಜಂಪರ್ ಹಾಕಿಕೊಂಡಿದ್ದುದು ಸೀನುವಿಗೆ ಈಗ ಗಮನಕ್ಕೆ ಬಂತು. ಸಂಜೆ ಸರ್ಕಸ್ಸಿಗೆ ಹೋಗಲು ಸಿದ್ಧವಾದ ಮೇಲೆಯೆ ಏನೋ ಆಗಿರ ಬೇಕು, ಇಲ್ಲದಿದ್ದರೆ ಈ ಜರತಾರಿಯ ಬಟ್ಟೆಗಳನ್ನು ಹಾಕಿಕೊಳ್ಳುತ್ತಿರಲಿಲ್ಲ ಎಂದುಕೊಂಡ. ಹಣೆಯ ಮೇಲೊಮ್ಮೆ ಕೈಯಿಟ್ಟ. ವಸಂತು ಮೆಲ್ಲನೆ ನರಳಿದಳು. "ಹೂಂ–ಹೂಂ–ಉಂ–ಅಬ್ಬಾ–ಸೀನು–ಅತ್ತಿಗೆ-ಸರ್ಕಸ್ಸು-ಉಂ-ಉಂ" ಎಂದು ಮುಲುಗುಟ್ಟಿದಳು ಗಂಗಮ್ಮನವರು ಹಣೆಯ ಮೇಲಿನ ಪಟ್ಟನ್ನು ಮತ್ತೆ ಹಾಲಿನಲ್ಲಿ ಒದ್ದೆ ಮಾಡಿ ಹಣೆಗೆ ಹಾಕಿದರು. "ಏನಾಗುತ್ತಮ್ಮ, ವಸಂತು. ವಸಂತು, ವಸಂತು, ಏನಾಗುತ್ತೆ" ಎಂದು ಕಾತರದಿಂದ ಕೇಳಿದರು ತಾಯಿ. ತಾಯಿಯ ಕರುಳು ತುಡಿಯುತ್ತಿತ್ತು. ಸೀನುವಿಗೂ ಕಣ್ಣಿನಲ್ಲಿ ಕಾತರ. ತನ್ನ ಪ್ರೀತಿಯ ತಂಗಿ, ಮುದ್ದು ವಸಂತು ಜ್ವರದಲ್ಲಿ ಬೇಯುತ್ತಿದಾಳೆ. ಮುಖ ಧುಮುಗುಟ್ಟುತ್ತಿತ್ತು. ಜ್ವರದ ಕಾವು ಬಹಳ ಏರಿತ್ತು. ಸಪ್ಪಗಾಗುತ್ತಿತ್ತು ಮುಖ. "ಮೈ ತುಂಬಾ ಬೆಚ್ಚಗಿದೆ, ಅಮ್ಮ. ಯಾವಾಗ ಮಲಗಿದಳು?" ಎಂದು ಸೀನು ತಾಯಿಯನ್ನು ಕೇಳಿದ.

"ಏನೋಪ್ಪ, ಸಾಯಂಕಾಲವೆಲ್ಲ ಓಡಾಡುತಿದ್ದಳು. ಸೀನು ಸರ್ಕಸ್ಸಿಗೆ ಕರಕೊಂಡುಹೋಗ್ತಾನೆ ಅಂತ ಕುಣಿದಾಡಿದಳು. ನನ್ನ ಹತ್ತಿರ ಜಡೆ ಹಾಕಿಸಿ ಕೊಂಡಳು. ನನಗೆ ಎರಡು ಜಡೆ ಹಾಕೋಕೆ ಬರೋಲ್ಲ, ಒಂದೇ ಹಾಕಿಸಿಕೊ ಅಂದೆ. ಹೂಂ, ಅಂತ ಕೂತುಕೊಂಡು ಹಾಕಿಸಿಕೊಂಡಳು. ಇಷ್ಟು ದಿವಸಕ್ಕೆ ಈವತ್ತೆ ನೋಡಪ್ಪ, ಅವಳು ಕುಣೀತಾ ಆಡತಾ ಇದ್ದದ್ದು. ಸುಮ್ಮನೆ ಹೋಗಿ ಬೀದಿ ಬಾಗಿಲು ಕಾಯತಾ ಇದ್ದಳು. ಸೀನು ಇನ್ನೂ ಬರಲಿಲ್ಲ, ಅಮ್ಮ, ಸೀನು ಬರಲಿಲ್ಲ ಅಂತ ನೂರು ಸಾರಿ ಒಳಕ್ಕೂ ಹೊರಕ್ಕೂ ಓಡಿಯಾಡುತಿದ್ದಳು. ಸಾಯಂಕಾಲ ದೀಪ ಹಚ್ಚುವ ಹೊತ್ತಾದರೂ ಸೀನು ಬರಲಿಲ್ಲ."

ಸೀನು ತಂಗಿಯ ನಿರಾಶೆಯನ್ನು ಮನಸ್ಸಿನಲ್ಲಿಯೆ ಅನುಭವಿಸಿದ.

ಹೊರಗೆ ಕಾದು ಕಾದು ಕುತೂಹಲದಿಂದ ಕಣ್ಣಿನಲ್ಲಿ ಕಣ್ಣಾಗಿ ಬೀದಿಯನ್ನೆ ನೋಡಿರಬೇಕು ವಸಂತು. ಯಾವ ಕ್ಷಣಕ್ಕೆ ಸೀನು ಬರುವನೊ, ಯಾವ ಹೊತ್ತಿಗೆ ತಾನು ಸರ್ಕಸ್ಸಿಗೆ ಹೋದೇನೊ ಎಂಬ ಕಾತರಭರಿತ ಆಸೆ ಅವಳ ಹೃದಯದಲ್ಲಿ ತುಂಬಿ ಮುಖದಲ್ಲಿ ತುಳುಕಿತ್ತು. ಆದರೆ ಗಳಿಗೆ ಗಳಿಗೆಗೂ ಅನುಮಾನ. ಸೀನು ಬರುತ್ತಾನೊ ಇಲ್ಲವೊ ? ಎಷ್ಟು ಹೊತ್ತು ಮಾಡಿಬಿಡು ತ್ತಾನೊ ಏನೊ, ಆಮೇಲೆ ಹೊತ್ತಾಗಿ ಹೋದರೆ ಎಂಬ ಅನುಮಾನ. ಈ ಅನುಮಾನ ಒದ್ದಾಟ ನಿಮಿಷ ನಿಮಿಷಕ್ಕೂ ಹೆಚ್ಚಿತು. ಹೊತ್ತು ಕಳೆದಂತೆ ಒದ್ದಾಟ ಮಿತಿಮೀರಿತು. ಪದೆಪದೆ ಒಳಕ್ಕೆ ಹೋಗಿ ಗಡಿಯಾರವನ್ನು ನೋಡಿರಬೇಕು. ವಸಂತುವಿಗೆ ಗಂಟೆ ನೋಡುವುದನ್ನು ಅತ್ತಿಗೆ ಕಲಿಸಿಕೊಟ್ಟಿದ್ದಳು. ಸಣ್ಣ ಮುಳ್ಳು ಇಲ್ಲಿದೆ, ದೊಡ್ಡ ಮುಳ್ಳು ಅಲ್ಲಿದೆ, ಆದ್ದರಿಂದ ಇಷ್ಟು ಗಂಟೆಯೆಂದು ವಸಂತು ಲೆಕ್ಕ ಮಾಡಿ ಹೇಳುತ್ತಿದ್ದಳು. ಈಗ ಸೀನು ಬರಲಿಲ್ಲ ಎಂದು ನಿಮಿಷ ನಿಮಿಷಕ್ಕೂ ಒಳಕ್ಕೆ ಹೋಗಿ ಗಡಿಯಾರದ ಲೆಕ್ಕ ಮಾಡಿ ಬರುವಳು. ಹೊರಗಡೆ ಕಾಲಿನ ಸಪ್ಪಳವಾದರೆ ಸೀನು ಬಂದನೇನೊ ಎಂದು ಓಡುವಳು. ಕೊನೆಗೆ ದೀಪ ಹಚ್ಚುವ ಹೊತ್ತಾದರೂ ಸೀನು ಬರಲಿಲ್ಲ. ಇದರಿಂದ ಅವಳ ಮನಸ್ಸಿಗೆ ಪೂರ್ತಿ ನಿರಾಶೆಯಾಯಿತು. ಒದ್ದಾಟ ಹೆಚ್ಚಾಯಿತು. ಸರ್ಕಸ್ಸು ತಪ್ಪಿಹೋಯಿತು, ಸೀನು ಬರಲಿಲ್ಲವೆನ್ನುವ ದುಃಖ ಉಮ್ಮಳಿಸಿ ಮೇಲೇರಿತು. ಸೀನು ಬರುತ್ತೇನೆಂದು ಹೇಳಿ ಹೀಗೆ ಮೋಸ ಮಾಡಿದ. ಅವನು ಬಹಳ ಕೆಟ್ಟವನು, ಎಂದುಕೊಂಡಳು. ಸುತ್ತಲೂ ಹರಡಿದ ಕತ್ತಲು ಅವಳ ಮನಸ್ಸಿನಲ್ಲೂ ತುಂಬಿತು. ಬಿಕ್ಕಿಬಿಕ್ಕಿ ಅಳಬೇಕೆನಿಸಿತು. ಆದರೆ ಈ ನಿರಾಶೆಯ ನಡುವೆ ಕೂಡ ಅವಳಿಗೆ ಸೀನು ಬಂದುಬಿಟ್ಟರೆ ಎಂಬ ಆಸೆ. ಅವನು ಬರುತ್ತಾನೆಂಬ ಸುಳ್ಳು ಭ್ರಮೆ—ಈಗಲೊ ಆಗಲೊ ಬರುತ್ತಾನೆಂದು ಮತ್ತೆ ಮತ್ತೆ ಕಾದಳು. ಒಳಗಿನಿಂದ ತಾಯಿ "ಅವನೆಲ್ಲಿ ಬರ್ತಾನೆ. ಹಾಳು ಕ್ರಿಕೆಟ್ಟಿನ ಹುಚ್ಚು ಹಿಡಿದಿದೆ ಅವನಿಗೆ. ನೀನು ಬಾಮ್ಮ ಒಳಕ್ಕೆ" ಎಂದು ಹತ್ತು ಸಾರಿ ಕರೆದರೂ ಮನೆಯ ಬಾಗಿಲನ್ನು ಬಿಟ್ಟು ಒಳಕ್ಕೆ ಬರಲಿಲ್ಲ ವಸಂತು. ಸಂಜೆ ಏಳು ಏಳೂವರೆಯ ಹೊತ್ತಿಗೆ ವಸಂತುವಿಗೆ ಹಸಿವೆಯಾಯಿತು. ಆದರೆ ಈ ಆತಂಕದಲ್ಲಿ ಅವಳಿಗೆ ಹಸಿವೆಯ ಚುರುಕು ಕೂಡ ನೆನಪಾಗಲಿಲ್ಲ. ತಾಯಿ ಊಟಕ್ಕೆ ಕರೆದರೂ ಹೋಗಲಿಲ್ಲ. ಅಲ್ಲಿಯೆ ಕಾದು ನಿಂತಿದ್ದಳು. ಅಷ್ಟು

ಹೊತ್ತಿಗೆ ಅವಳ ದೊಡ್ಡಣ್ಣ ಬಂದರು. ಬಂದೊಡನೆ ಅವರಿಗೆ ವಸಂತು ಯಾಕೆ ಹೀಗೆ ಬಾಗಿಲಲ್ಲಿ ಕುಳಿತಿದ್ದಾಳೆ ಎಂದು ಯೋಚನೆಯಾಯಿತು. ತಾಯಿ ಏನಾದರೂ ಅಂದು ಮುನಿಸಿನಿಂದ ವಸಂತು ಹೊರಗೆ ಕುಳಿತಿರಬಹುದೆಂದು ಎನಿಸಿತು. ಕೂಡಲೆ ಪ್ರೀತಿಯಿಂದ ಬಾಗಿ ವಸಂತುವನ್ನು ಎತ್ತಿಕೊಂಡರು. "ಯಾಕಮ್ಮ ಮಗು, ಸಂಜೆ ಹೊತ್ತಿನಲ್ಲಿ ಇಲ್ಲಿ ಕತ್ತಲಲ್ಲಿ ಕೂತಿದ್ದೀ. ಅಮ್ಮ ಬೈದಳೆ?" ಎಂದರು. ವಸಂತು ಅಣ್ಣನ ಹೆಗಲ ಮೇಲೊರಗಿಕೊಂಡು, ತಲೆ ಗೂವಲನ್ನು ಕೈಯಲ್ಲಿ ತಿರುಚುತ್ತ, "ನೋಡಣ್ಣ, ಸೀನು ಸರ್ಕಸ್ಸಿಗೆ ಕರೆದು ಕೊಂಡು ಹೋಗತೀನಿ ಅಂತ ಹೇಳಿದ. ಸಂಜೆ ಬಂದುಬಿಡತೀನಿ ಅಂತ ಕ್ರಿಕೆಟ್ ಮ್ಯಾಚಿಗೆ ಹೋದ. ಇನ್ನೂ ಬರಲೆ ಇಲ್ಲ, ನೋಡಣ್ಣ. ಸೀನು ಬಹಳ ಕೆಟ್ಟವನು. ನೀನು ಒಳ್ಳೆಯವನು, ಅಣ್ಣ" ಎಂದು ಅವರನ್ನು ಗಟ್ಟಿಯಾಗಿ ತಬ್ಬಿಕೊಂಡಳು. ಅವರು ಮೆಲ್ಲನೆ ಒಂದು ಸಣ್ಣ ನಗು ನಕ್ಕು, ಅವಳನ್ನು ಒಳಕ್ಕೆತ್ತಿಕೊಂಡು ಹೋದರು. "ಬಾ, ಮಗು. ಊಟವಾಯಿತೇನಮ್ಮ ವಸಂತುವಿನದು?" ಎಂದು ಕೇಳಿದರು. ಗಂಗಮ್ಮನವರು "ಇನ್ನೂ ಊಟ ಎಲ್ಲಿ, ಆ ಸೀನು ಬರ್ತೀನೀಂತ ಹೇಳಿದನಂತೆ,ಅದಕ್ಕೋಸ್ಕರ ಹೊರಗಡೇನೆ ಕಾದು ಕುಳಿತಿದ್ದಾಳೆ. ಅವನಿಗೆ ಯಾವಾಗಲೂ ಆ ಕ್ರಿಕೆಟ್ಟಿನದೆ ಧ್ಯಾನ, ಆ ಸುಡುಗಾಡು ಕ್ರಿಕೆಟ್ಟು" ಎಂದು ಗೊಣಗಿದರು. ವಸಂತುವನ್ನು ತಮ್ಮ ರೂಮಿಗೆತ್ತಿಕೊಂಡುಹೋಗಿ ಅವಳ ಅಣ್ಣ ಮೇಜಿನ ಮೇಲೆ ಅವಳನ್ನಿಳಿಸಿದರು. ಮೇಜಿನ ಮೇಲೆ ಶಾಂತಳ ಮದುವೆಯಲ್ಲಿ ದಂಪತಿಗಳನ್ನು ನಿಲ್ಲಿಸಿ ತೆಗೆದ ಚಿತ್ರವಿತ್ತು. ಅದನ್ನು ನೋಡಿದ ಒಡನೆ ವಸಂತುವಿನ ದುಃಖ ಮರುಕಳಿಸಿತು. ಅತ್ತಿಗೆ ಹೊರಟುಹೋದಳು, ಯಾವಾಗ ಬರುತ್ತಾಳೊ ಇನ್ನು, ಎಂದು ಕಾತರಿಸಿತು ಅವಳ ಮನಸ್ಸು. ಕೂಡಲೆ ಅಣ್ಣನನ್ನು ಕುರಿತು "ಅಣ್ಣ, ಅತ್ತಿಗೆ ಯಾವಾಗ ಬರತಾಳೆ?" ಎಂದಳು. ಅಣ್ಣನಿಗೆ ಅದರಿಂದ ದುಃಖವಾದೀತೆಂದು ಅವಳು ಹೇಗೆತಾನೆ ತಿಳಿದಾಳು. ಅವಳ ಅಣ್ಣ ಅಂಗಿಯನ್ನು ಕಳಚಿಡುತ್ತಿದ್ದವರು ಒಂದು ಕ್ಷಣ ಅವಾಕ್ಕಾದರು. ಇದ್ದಕ್ಕಿದ್ದಂತೆ ವಿದ್ಯುತ್‌ಲಹರಿ ಮೈಮುಟ್ಟಿದಂತಾಗಿ ಮೈ ಜುಮ್ಮೆಂದಿತು, ಮತ್ತೆ ಮಾಯವಾಯಿತು. ಮೆಲ್ಲನೆ ಅಂಗಿಯ ಜೇಬಿನಿಂದ ಒಂದು ಚಾಕಲೇಟಿನ ಪೊಟ್ಟಣ ತೆಗೆದು ವಸಂತುವಿನ ಹತ್ತಿರ ಬಂದು "ಬಾಯಿ ತೆಗೆ—ಆ ಅನ್ನು" ಎಂದು ಬಾಯಿ ತೆರೆಯಿಸಿದರು. ಚಾಕಲೇಟನ್ನು ಬಿಚ್ಚಿ ಬಾಯಿಗೆ ಹಾಕಿದರು.

ವಸಂತು ಕೈಯಲ್ಲಿ ಚಾಕಲೇಟು ತೆಗೆದುಕೊಂಡು "ನಿನಗೆ, ಅಣ್ಣ" ಎಂದಳು. "ನನಗೆ ಬೇಡಮ್ಮ, ನೀನು ತಿನ್ನು" ಎಂದರು ಅಣ್ಣ. "ಉಹುಂ, ಹೋಗಣ್ಣ. ಅತ್ತಿಗೆಯೂ ಹೀಗೇ ಮಾಡತಾ ಇದ್ದಳು. ಎಲ್ಲಿ ಬಾಯಿ ತೆಗೆ, ಅಣ್ಣ" ಎಂದಳು. ಕೈಯನ್ನು ಬಾಯ ಹತ್ತಿರ ತಂದು ಬಾಯಿಗೆ ತುರುಕಿ ಜೋರಾಗಿ ನಕ್ಕಳು. "ಥೂ ತುಂಟಿ. ಚಾಕಲೇಟನ್ನು ತಿಂದುಬಿಟ್ಟು ಖಾಲಿ ಕಾಗದ ನನ್ನ ಬಾಯಿಗೆ ಹಾಕಿದೆಯಾ" ಎಂದು ಅಣ್ಣ ಮುದ್ದಾಡಿದರು. ವಸಂತು ಕಿಲಕಿಲನೆ ನಗುತ್ತ ಒಂದು ಚಾಕಲೇಟನ್ನು ಅವರ ಬಾಯಿಗೆ ಹಾಕಿದಳು. ಗಡಿಯಾರದಲ್ಲಿ ಎಂಟು ಗಂಟೆ ಹೊಡೆಯಿತು. ಒಳಗಿನಿಂದ ತಾಯಿ ಊಟಕ್ಕೆ ಕರೆದರು. ಅಣ್ಣ ಹೊರಡಲು ಸಿದ್ಧರಾದರು. ಆ ವೇಳೆಗಾಗಲೆ ವಸಂತು ಚಾಕಲೇಟನ್ನೆಲ್ಲ ಮುಗಿಸಿ ಒಂದನ್ನು ಮಾತ್ರ ಇಟ್ಟುಕೊಂಡಿದ್ದಳು. "ಅಣ್ಣ, ಇದು ಸೀನುವಿಗೆ. ಪಾಪ, ಅವನಿಗೂ ಒಂದು" ಎಂದು ಅದನ್ನು ಕೈಯಲ್ಲೆ ಇಟ್ಟುಕೊಂಡಿದ್ದಳು. ಇದ್ದಕ್ಕಿದ್ದಂತೆ ಬಾಗಿಲ ಹತ್ತಿರ ಕಾಲಿನ ಸಪ್ಪಳವಾಯಿತು. "ಸೀನು ಬಂದ, ಸೀನು ಬಂದ" ಎಂದು ಕುಣಿಯುತ್ತ ವಸಂತು ಬೀದಿಯ ಕಡೆ ಓಡಿದಳು. ಹೊಸಲಿನ ಹತ್ತಿರ ಕಾಲಿಗೆ ಲಂಗ ತೊಡರಿಕೊಂಡು ಮುಂದಕ್ಕೆ ಮುಗ್ಗರಿಸಿ ಬಿದ್ದು ಬಿಟ್ಟಳು. ಅವಳು ಬಿದ್ದ ಸದ್ದು ಕೇಳಿ ಅಣ್ಣ ಓಡಿಬಂದು ನೋಡಿದರೆ ವಸಂತು ಅಂಗತ್ತಾಗಿ ಕೆಳಕ್ಕೆ ಬಿದ್ದುಬಿಟ್ಟಿದ್ದಳು. ಮೇಲಕ್ಕೆತ್ತಿಕೊಂಡು ನೋಡಿದರೆ ತುಟಿಯಿಂದ ಒಂದೆ ಸಮನಾಗಿ ರಕ್ತ ಸುರಿಯುತ್ತಿತ್ತು. "ಅತ್ತಿಗೆ, ಅತ್ತಿಗೆ" ಎಂದು ವಸಂತು ಅಳುತ್ತಿದ್ದಳು. ಬಳೆಗಳೆರಡು ಒಡೆದು ಚೂರುಚೂರಾಗಿದ್ದವು. ಪುಣ್ಯಕ್ಕೆ ಹೆಚ್ಚಿಗೆ ಏನೂ ಗಾಯವಾಗಿರಲಿಲ್ಲ. ಆದರೆ ಬಿದ್ದ ಗಾಬರಿಯಿಂದಲೊ ಏನೊ ವಸಂತುವಿಗೆ ಮೈ ಬೆಚ್ಚಗಾಗಲು ಆರಂಭವಾಯಿತು. ಅರ್ಧ ಗಂಟೆಯ ಒಳಗಾಗಿ ಮೈ ಕಾದು ವಸಂತುವಿಗೆ ಅರಿವು ತಪ್ಪಿತು. ಜ್ಞಾನ ತಪ್ಪಿದಂತಾಗಿ ಸುಮ್ಮನೆ "ಅತ್ತಿಗೆ, ಸರ್ಕಸ್ಸು, ಸೀನು" ಎಂದಷ್ಟೆ ಅನ್ನುತ್ತಿದ್ದಳು. ಅಣ್ಣನಿಗೆ ಹೆದರಿಕೆಯಾಯಿತು. ವಸಂತುವನ್ನು ಎತ್ತಿ ತಂದು ಸೀನುವಿನ ರೂಮಿನಲ್ಲಿ ಹಾಸಿಗೆಯ ಮೇಲೆ ಮಲಗಿಸಿದ್ದುದೂ ಅವರೇ. ಈಗ ಏನು ಮಾಡಬೇಕೆಂದು ತೋಚಲಿಲ್ಲ. ಆದರೆ ಎಂದೂ ಸಮತೂಕ ತಪ್ಪಿರಲಿಲ್ಲ, ಅವರ ಮನಸ್ಸು. ನಿಧಾನವಾಗಿ ಮೆಲ್ಲನೆ ವಸಂತುವಿನ ಹಣೆ ಮುಟ್ಟಿ ನೋಡಿದರು. ತುಂಬಾ ಸಿಡಿಯುತ್ತಿತ್ತು. "ನಾನು ಡಾಕ್ಟರನ್ನು ಕರೆದುಕೊಂಡು ಬರ್ತೀನೆ, ಅಮ್ಮ"

ಎಂದು ತಾಯಿಗೆ ಹೇಳಿ ಹೊರಟುಹೋಗಿದ್ದರು. ಗಂಗಮ್ಮನವರು ವಸಂತುವಿನ ಹಾಸಿಗೆಯ ಪಕ್ಕದಲ್ಲಿ ಕುಳಿತು ಹಾಲಿನ ಪಟ್ಟು ಹಾಕುತ್ತ ಕುಳಿತಿದ್ದರು.

ಸೀನು ತಾಯಿಯಿಂದ ಎಲ್ಲವನ್ನೂ ಕೇಳಿದ. ಡಾಕ್ಟರನ್ನು ಕರೆತರಲು ಹೋದ ಅಣ್ಣ ಇನ್ನೂ ಬಂದಿರಲಿಲ್ಲ. ತನ್ನ ಬಟ್ಟೆಗಳನ್ನು ಕಳಚದೆ ವಸಂತುವಿನ ಹಾಸಿಗೆಯ ಪಕ್ಕದಲ್ಲಿ ಕುಳಿತು ಸೀನು ಅವಳ ಹಣೆಗೆ ಪಟ್ಟು ಹಾಕಲಾರಂಭಿಸಿದ. ಗಂಗಮ್ಮನವರು ಎದ್ದು ಒಳಕ್ಕೆ ಹೋದರು. ರಂಗಣ್ಣನವರು ಅದೇ ತಾನೆ ಮನೆಗೆ ಬಂದರು. ಗಂಗಮ್ಮನವರು ವಸಂತು ಮಲಗಿಬಿಟ್ಟಿದಾಳೆಂದು ಹೇಳಿದುದು ಕೇಳಿ ಗಾಬರಿಯಿಂದ ಒಳಕ್ಕೆ ಬಂದರು. ಏನು ಮಾತನಾಡಲೂ ತೋರಲಿಲ್ಲ. ಸಪ್ಪೆ ಮುಖ ಹಾಕಿಕೊಂಡು ಒಂದೆರಡು ನಿಮಿಷ ನಿಂತಿದ್ದರು. ಆದರೆ ಏನು ಮಾಡಲೂ ತೋಚದೆ ಮೆಲ್ಲನೆ ಹೊರಕ್ಕೆ ಬಂದರು. ಹಾಸಿಗೆಯ ಪಕ್ಕದಲ್ಲಿ ಕುಳಿತಿದ್ದ ಸೀನುವಿಗೆ ಹೊರಗೆ ತಾಯಿ ತಂದೆ ಮಾತನಾಡುತ್ತಿದ್ದುದು ಕೇಳಿಸಿತು. ತಾಯಿಯನ್ನು ತಂದೆ ವಸಂತುವಿನ ಮೈ ವಿಷಯ ವಿಚಾರಿಸಿದರು.

" ತುಂಬಾ ಜ್ವರ ಬಂದಿದೆಯೇನು ? " ಎಂದರು ರಂಗಣ್ಣ, ಕಾತರದಿಂದ.

" ಸೀನು ಬಂದ ಬಂದ ಅಂತ ಓಡಿಬಂದಳು. ಕಾಲೆಡವಿ ಬಿದ್ದಳು. ಆಗಿನಿಂದ ಜ್ವರ. ಈಗಂತೂ ಅವಳಿಗೆ ಜ್ಞಾನವೆ ಇಲ್ಲ" ಎಂದರು ಅಳುವ ದನಿಯಲ್ಲಿ ಗಂಗಮ್ಮ.

" ಬಿದ್ದು ಬೀಳೇನಾದರೂ ಆಗಿದೆಯೊ ಏನೊ. ನಿವಾಳಿಸಿ ನೋಡು " ಎಂದರು ರಂಗಣ್ಣ.

" ಸರಿ, ನೀವು ಹೇಳೋದು. ಅವಳೇನು ಎಳೆಯ ಮಗುವೆ, ಬಿದ್ದು ಬೀಳಾಗೋದಕ್ಕೆ. ಕಾಯಿಲೆ ಬೀಳೋದಕ್ಕೆ ಇದೊಂದು ನೆವ, ಅಷ್ಟೆ " ಎಂದರು ಗಂಗಮ್ಮ.

ಒಂದು ನಿಮಿಷ ಯಾರೂ ಮತ್ತೆ ಮಾತಾಡಲಿಲ್ಲ. ಸೀನುವಿಗೆ ತಂದೆ ಒಂದು ದೊಡ್ಡ ನಿಟ್ಟುಸಿರು ಬಿಟ್ಟುದು ಕೇಳಿಸಿತು. ಆ ಗಳಿಗೆಯಲ್ಲಿ ಅವನ ಮನಸ್ಸಿನಲ್ಲಿ ಬಂದ ಭಾವನೆ ರಂಗಣ್ಣನವರ ಬಾಯಿಂದ ತಕ್ಷಣ ಮಾತಾಗಿ ಹೊರಬಿತ್ತು. ಇಬ್ಬರ ಮನಸ್ಸಿನಲ್ಲೂ ಆ ಗಳಿಗೆಯಲ್ಲಿ ಒಂದೇ ಬಗೆಯ ಯೋಚನೆ ಹರಿದಿತ್ತು.

" ಹುಂ ! ಶಾಂತ ಇದ್ದಿದ್ದರೆ ಚೆನ್ನಾಗಿತ್ತು " ಎಂದರು ರಂಗಣ್ಣ.

" ಏನೋ, ಎಲ್ಲಾ ಕರ್ಮ. ಅವಳಂತೂ ಜ್ವರದಲ್ಲೆ ಅತ್ತಿಗೆ, ಅತ್ತಿಗೆ ಅಂತ ಕೂಗತಾ ಇದಾಳೆ. ಅತ್ತಿಗೆ, ಸೀನು—ಅಂತಲೆ ಮಾತು. ಇನ್ನೇನೂ ಇಲ್ಲವೆ ಇಲ್ಲ. ದೇವರೆ ಕಾಪಾಡಬೇಕು ಅವಳನ್ನು " ಎಂದು ಅಮುಕಿದ ಕೊರಳಿನಿಂದ ಗಂಗಮ್ಮ ಅಂದರು.

" ಇನ್ನೂ ಡಾಕ್ಟರು ಬರಲಿಲ್ಲವೆ? ಎಷ್ಟು ಹೊತ್ತಾಯಿತು " ಎಂದು ರಂಗಣ್ಣ ಒಳಕ್ಕೆ ಹೋದರು.

ಸೀನುವಿನ ಮನಸ್ಸು ಇನ್ನೂ ತಾಕಲಾಡಿತು. ವಸಂತು ಅರೆ ಎಚ್ಚರದಲ್ಲಿ ' ಅತ್ತಿಗೆ, ಅತ್ತಿಗೆ ' ಅಂತ ಅನ್ನುತ್ತಲೆ ಇದ್ದಳು. ತನ್ನಿಂದಾಗಿ ವಸಂತುವಿನ ಮನಸ್ಸಿಗೆ ದೊಡ್ಡ ಆಘಾತವೆ ಆಗಿದೆಯೆಂದು ಸೀನು ತನ್ನನ್ನು ತಾನೆ ಬೈದು ಕೊಂಡ. ಅತ್ತಿಗೆಗಾಗಿ ಮೊದಲಿನಿಂದಲೆ ಒದ್ದಾಡುತ್ತಿದ್ದ ವಸಂತುವಂತೂ ಈಗ ಅದೊಂದೇ ಜಪವನ್ನಾರಂಭಿಸಿಬಿಟ್ಟಿದ್ದಳು. ಸರ್ಕಸ್ಸಿಗೆ ಹೋಗುವ ಅವಳ ಆಸೆಯೂ ತನ್ನಿಂದ ಮುರಿಯಿತು. ತಾಯಿ ಅಂದಂತೆ ಸುಡುಗಾಡು ಆಟದಿಂದ ಹೀಗೆಲ್ಲ ಆಯಿತು. ಎಷ್ಟು ಕುತೂಹಲದಿಂದ, ಆಸೆಯಿಂದ ವಸಂತು ಕಾದಿದ್ದಳು. ಈಗ ತನಗಾಗಿ ಕಾದಿದ್ದಳು, ತಾನು ಬಂದೆನೆಂದು ತಿಳಿದು ಓಡಿಬಂದು ಬಿದ್ದು ಗಾಯ ಮಾಡಿಕೊಂಡಳು. ಸೀನು ಆ ಕಡೆ ತಿರುಗಿ ನೋಡಿದ—ವಸಂತುವಿನ ಮೇಲಿನ ತುಟಿ ಬೆರಳು ದಪ್ಪಕ್ಕೆ ಊದಿಕೊಂಡಿತ್ತು. ಅದರಿಂದ ಆ ಮುದ್ದು ಮುಖ ವಿಕಾರಗೊಂಡಿತ್ತು. ಜ್ವರದ ಕಾವಿಗೆ ಬಾಡಿದ ಬದನೆಯಂತಾಗಿತ್ತು ಕೆನ್ನೆ. ಹಣೆಯ ಮೇಲಿದ್ದ ಪಟ್ಟಿ ಆಗಲೆ ಆರಿಹೋಗಿತ್ತು. ಮತ್ತೆ ಸೀನು ಹಾಲಿನ ಪಟ್ಟಿ ಹಾಕಿದ. ಸದ್ಯ ಇವಳಿಗೆ ವಾಸಿಯಾಗಲಪ್ಪ ಎಂದು ಅವನ ಹೃದಯ ಮೊರೆಯಿಟ್ಟಿತು.

ಡಾಕ್ಟರು ಬಂದು ನೋಡಿದರು. ಅಣ್ಣ ಆ ಕಡೆ ಕಾತರದ ಮುಖ ಹೊತ್ತು ನಿಂತಿದ್ದರು. ತಾಯಿಯಂತೂ ಗಾಬರಿಯಿಂದ ಇಳಿದೇ ಹೋಗಿದ್ದರು. ರಂಗಣ್ಣ ನವರು ಕೂಡ ಭಯದಿಂದ ಒದ್ದಾಡುತ್ತಿದ್ದರು. ಸೀನು ಹಾಸಿಗೆಯ ಪಕ್ಕದಲ್ಲಿ ಕುಳಿತಿದ್ದ. ಡಾಕ್ಟರು ಪರೀಕ್ಷಿಸಿದರು. ಎಲ್ಲರಿಗೂ ಯುಗ ಯುಗದ ಭಾರ ಎದೆಯ ಮೇಲೆ ಕುಳಿತಂತಾಗಿತ್ತು. ಏನಾಗಿಹೋಗಿದೆಯೊ, ಡಾಕ್ಟರು ಏನು ಹೇಳುವರೊ ಎಂದು ಎಲ್ಲರೂ ಬಿಚ್ಚುಬಾಯಾಗಿ ನಿಂತಿದ್ದರು. ಸೀನುವಂತೂ ತಲೆಯೆತ್ತುವ ಧೈರ್ಯ ಕೂಡ ಮಾಡಲಿಲ್ಲ. ಪೂರ್ತಿ ಗಾಬರಿಯಲ್ಲಿ, ನಾಚಿಕೆ

ಯಲ್ಲಿ ತಲೆ ತಗ್ಗಿಸಿ ಹಾಸಿಗೆಯ ಪಕ್ಕದಲ್ಲಿ ಕುಳಿತವನು ಹಾಸಿಗೆಯ ಮೇಲೆ ಮಲಗಿದ್ದ ತಂಗಿಯ ಮುಖವನ್ನೆ ದಿಟ್ಟಿಸುತ್ತಿದ್ದ. ಅವನಿಗೂ ಡಾಕ್ಟರು ಏನು ಹೇಳಿಬಿಡುವರೊ ಎಂದು ಬಹಳ ಯೋಚನೆ. ಡಾಕ್ಟರು ಮುಖದಲ್ಲಿ ಯಾವುದೆ ರೀತಿಯ ಭಾವನೆಯನ್ನೂ ತೋರ್ಪಡಿಸಲಿಲ್ಲ. ಪರೀಕ್ಷೆ ಮುಗಿಸಿ ತಮ್ಮ ಚೀಲ ಬಿಚ್ಚಿದರು. ಹಾಗೆ ಹೀಗೆ ಹುಡುಕಿದರು. ಏನನ್ನೊ ಹುಡುಕಿ, ಅದು ಸಿಗದೆ ಹೋಗಲು, ಸೀನುವಿನ ಕಡೆ ತಿರುಗಿ "ನನ್ನ ಷಾಪಿಗೆ ಹೋಗಿ ತಕ್ಷಣ ಈ ಔಷಧಿ ತರಬೇಕು" ಎಂದು ಒಂದು ಚೀಟಿ ಬರೆದುಕೊಟ್ಟರು. ಸೀನು ಹೊರಡಲು ಸಿದ್ಧನಾದ. . ಚೀಟಿ ಬರೆದು ಮುಗಿಸಿ ಡಾಕ್ಟರು ಗಂಗಮ್ಮನವರ ಕಡೆ ತಿರುಗಿ "ಕುದಿಯುವ ನೀರು ಬೇಕು. ಇಂಜಕ್ಷನ್ ಕೊಡಬೇಕು" ಎಂದರು. ಈ ತನಕ ತಡೆದಿದ್ದ ಗಂಗಮ್ಮನವರ ದುಃಖ ಬಿಕ್ಕಳಿಸಿ ಹೊರಕ್ಕೆ ಬಂತು. ತಕ್ಷಣ ಡಾಕ್ಟರು "ಏನೂ ಗಾಬರಿ ಇಲ್ಲಮ್ಮ. ನೀವೇನೂ ಹೆದರಿಕೊಳ್ಳಬೇಡಿ. ಇವತ್ತು ಇಂಜಕ್ಷನ್ ಕೊಡತೀನಿ. ಬೆಳಿಗ್ಗೆ ಎಂಟು ಗಂಟೆ ಹೊತ್ತಿಗೆ ಬರತೀನಿ. ನೀವೇನೂ ಯೋಚಿಸಬೇಡಿ. ಎಲ್ಲಾ ಸರಿಹೋಗುತ್ತೆ. ಹಾಲು ಕೊಡಿ ರಾತ್ರಿಗೆ, ಇನ್ನೇನೂ ಬೇಡ. ಷಾಪಿಗೆ ಈಗ ನನ್ನ ಜತೇಲಿ ಯಾರಾದರೂ ಬಂದರೆ ರಾತ್ರಿಗೆ ಔಷಧಿ ಕೊಡತೀನಿ. ರಾತ್ರಿ ಹನ್ನೆರಡು ಗಂಟೆಗೆ, ಬೆಳಗಿನ ಜಾವ ನಾಲ್ಕು ಗಂಟೆಗೆ ಕುಡಿಸಬೇಕು. ಬೆಳಿಗ್ಗೆ ನಾನೇ ಬಂದು ನೋಡಿಕೊಂಡು ಹೋಗತೀನಿ. ಏನೂ ಗಾಬರಿ ಇಲ್ಲ" ಎಂದರು. ಆದರೂ ಗಂಗಮ್ಮನವರು ಸೀರೆಯ ಸೆರಗಿನಿಂದ ಕಣ್ಣೊರಸಿಕೊಳ್ಳುತ್ತ ಆ ಕಡೆ ಹೊರಟರು. ನೀರು ಕಾಯಿಸಿ ತಂದುಕೊಡಬೇಕೆಂಬುದನ್ನು ನೆನಪು ತಂದುಕೊಂಡು ಅಡಿಗೆಮನೆಗೆ ಹೊರಟರು.

ನೀರು ಕಾಯಿಸಿ ತರುವಲ್ಲಿ ಸೀನು ಇಂಜಕ್ಷನ್ ತೆಗೆದುಕೊಂಡು ಬಂದಿದ್ದ. ಡಾಕ್ಟರು ವಸಂತುವಿನ ಕೈಗೆ ಇಂಜಕ್ಷನ್ ಸೂಜಿ ಚುಚ್ಚಿದೊಡನೆ ವಸಂತು ನೋವಿನಲ್ಲಿ "ಹೊ!" ಎಂದು ಕಿರಿಚಿಕೊಂಡಳು. ಆ ನೋವಿನಿಂದ ತಿಳಿವು ಬಂತೊ ಏನೊ—ತಕ್ಷಣ "ಅತ್ತಿಗೆ, ಅತ್ತಿಗೆ, ನೋವು, ನೋವು" ಎಂದು ಕೂಗಿಕೊಳ್ಳಲಾರಂಭಿಸಿದಳು. ಸೀನುವಿಗೆ ದಿಕ್ಕೇ ತೋಚಲಿಲ್ಲ. ಅಲ್ಲಿ ನಿಂತಿದ್ದ ಅಣ್ಣ ಹಾಸಿಗೆಯ ಹತ್ತಿರ ಬಂದು ವಸಂತುವಿನ ತಲೆಯನ್ನು ನಿಧಾನವಾಗಿ ನೇವರಿಸುತ್ತ ಕುಳಿತರು. ಅಣ್ಣನ ಕಣ್ಣಿನಲ್ಲಿ ನೀರು ತುಂಬಿದ್ದುದನ್ನು ಕಂಡು

ಸೀನುವಿನ ಹೃದಯದಲ್ಲಿ ಕಲ್ಲೋಲವಾಯಿತು. ತನ್ನ ತಪ್ಪು ಎಲ್ಲಿಯವರೆಗೆ ಹೋಯಿತೆಂದು ಈಗ ತಿಳಿದು ಮನಸ್ಸು ಇನ್ನೂ ಮಿಡುಕಿತು. ಅಷ್ಟರಲ್ಲಿ ಡಾಕ್ಟರು ಕರೆದುದರಿಂದ ವಸಂತುವಿಗಾಗಿ ಔಷಧಿ ತರಲು ಅವರ ಜತೆಯಲ್ಲಿ ಹೊರಟುಬಿಟ್ಟ. ಅವರೊಂದಿಗೆ ಹೋಗುವಾಗ, ಔಷಧಿಯನ್ನು ತರುವಾಗ, ಅವನಿಗೆ ಇದೊಂದೆ ಯೋಚನೆ. ವಸಂತುವಿಗೆ ವಾಸಿಯಾದರೆ ಸಾಕಪ್ಪ ಎಂದು ಒದ್ದಾಡಿದ. ಹೇಗೊ ಅಂತೂ ಅವಳು ಆರೋಗ್ಯವಾದರೆ ಸಾಕು ಎಂದಷ್ಟೆ ಅವನ ಮನಸ್ಸು ಮಿಡಿಯುತ್ತಿತ್ತು.

ರಾತ್ರಿಯೆಲ್ಲ ವಸಂತುವಿನ ಹಾಸಿಗೆ ಪಕ್ಕದಲ್ಲಿ ಸೀನು ಕಾವಲು ಕಾದ. ಆಟವಾಡಿ ಸುಸ್ತಾಗಿತ್ತು. ಆದರೆ ತಂಗಿಯ ಕಾಯಿಲೆ ಹೀಗಿರುವಾಗ ನಿದ್ರೆ ಯಾದರೂ ಎಲ್ಲಿ ಬರುತ್ತದೆ. ರಾತ್ರಿ ಮನೆಯಲ್ಲಿ ಯಾರೊಬ್ಬರಿಗೂ ನಿದ್ರೆಯಿಲ್ಲ. ಎಲ್ಲರೂ ಅರ್ಧರ್ಧ ಗಂಟೆಗೊಮ್ಮೆ ಬಂದು ವಸಂತುವನ್ನು ನೋಡಿಕೊಂಡು ಹೋಗುವವರೆ. ಗಂಗಮ್ಮನವರಂತೂ ಮೊದಲೆ ಮಗಳ ಹಾಸಿಗೆಯ ಪಕ್ಕದಲ್ಲಿ ಕುಳಿತುಬಿಟ್ಟಿದ್ದರು. ಯಾರಿಗೂ ರಾತ್ರಿಯ ಊಟ ಬೇಕಾಗಲೆ ಇಲ್ಲ. ಗಾಬರಿ ಯಲ್ಲಿ, ಉದಾಸ ಭಾವ ಎಲ್ಲರ ಮುಖದ ಮೇಲೂ ತೆರೆಯೆಳೆದಿತ್ತು. ಊಟಕ್ಕೆ ಒಬ್ಬರೂ ಏಳಲೆ ಇಲ್ಲ. ರಂಗಣ್ಣನವರು ಕೂಡ ಊಟದ ಮಾತು ಎತ್ತಲಿಲ್ಲ. ಮಗಳು ಮಲಗಿದ್ದ ಕೋಣೆಯ ಹತ್ತಿರ ಬಂದು, ಹತ್ತು ನಿಮಿಷ ಬಾಗಿಲ ಬಳಿ ನಿಂತು ನೋಡುವರು. ಸೀನು ಪಟ್ಟು ಹಾಕುತ್ತಿದ್ದುದನ್ನು ನೋಡುತ್ತ "ಈಗ ಹೇಗಿದೆ ?" ಎಂದು ಕೇಳುವರು. ಸೀನು "ಹಾಗೆಯೆ ಇದೆ, ಜ್ವರ ಇಳಿದಿಲ್ಲ" ಎಂದೊಡನೆ ಒಂದು ನಿಟ್ಟುಸಿರು ಬಿಟ್ಟು ಎರಡು ನಿಮಿಷ ಹಾಗೆಯೆ ಮೂಕವಾಗಿ ನಿಲ್ಲುವರು. ಮೂಕವೇದನೆಯಲ್ಲಿ ತಾಕಲಾಡುವ ತಂದೆಯನ್ನು ನೋಡಿ ಸೀನುವಿಗೆ ಕರುಣೆ ಕಡೆದುಬರುತ್ತಿತ್ತು. ಐದಾರು ನಿಮಿಷ ಕಳೆದಮೇಲೆ ಮತ್ತೆ ತಂದೆ ಹಿಂದಿರುಗುತ್ತಿದ್ದರು. ರಾತ್ರಿಯೆಲ್ಲ ಪದೆ ಪದೆ ಹತ್ತು ನಿಮಿಷಕ್ಕೊಮ್ಮೆ ಗಾಬರಿಯಿಂದ ಬಂದು ಬಂದು ವಿಚಾರಿಸಿಕೊಂಡು ಹೋಗುವರು. "ರಾತ್ರಿ ಹನ್ನೆರಡಕ್ಕೆ ಔಷಧಿ ಕುಡಿಸುವುದು. ನಾನು ಬರತೀನಿ ಬೇಕಾದರೆ" ಎಂದು ಮೂರು ನಾಲ್ಕು ಸಾರಿ ಹೇಳಿದರು. ಸೀನು ಮಲಗಿಬಿಡುವನೆಂಬ ಅನುಮಾನ ವೇನೂ ಅವರಿಗಿರಲಿಲ್ಲ. ಆದರೆ ಮಗಳು ಮಲಗಿಬಿಟ್ಟ ಕಾತರ ಅವರ ಬಾಯಿಂದ ಹಾಗೆ ಆಡಿಸುತ್ತಿತ್ತು. ಹನ್ನೆರಡು ಗಂಟೆ ಹೊಡೆಯುವುದರಲ್ಲಿ ಸೀನುವಿನ ಅಣ್ಣ

ಕೂಡ ರೂಮಿಗೆ ಬಂದು ನಿಂತರು. ಗಂಗಮ್ಮನವರಂತೂ ಹತ್ತು ಗಂಟೆಯ ವರೆಗೂ ವಸಂತುವಿನ ಪಕ್ಕದಿಂದ ಕದಲಿರಲೆ ಇಲ್ಲ. ಈಗ ಒಳಕ್ಕೆ ಹೋಗಿ ಪಾತ್ರೆ ಪರಡಿಗಳನ್ನೆಲ್ಲ ತೊಳೆದಿಟ್ಟು, ಕಸ ಮುಸುರೆ ಮಾಡಿಕೊಂಡು, ಹನ್ನೊಂದರ ವೇಳೆಗಾಗಲೆ ಮತ್ತೆ ಸೀನುವಿನ ರೂಮಿಗೆ ಬಂದುಬಿಟ್ಟರು. ಅಣ್ಣನಂತೂ ತನ್ನ ರೂಮಿನಲ್ಲಿ ಎಚ್ಚರವಾಗಿಯೆ ಇದ್ದು ಓಡಾಡುತ್ತಿದ್ದ ಸದ್ದು ಸೀನುವಿಗೆ ಕೇಳಿಸುತ್ತಿತ್ತು. ಅಣ್ಣ ಬಂದು ಪದೆ ಪದೆ ಕೇಳದಿದ್ದರೂ ತಂಗಿಯ ಬಗ್ಗೆ ಅವರಿಗೆಷ್ಟು ಕಾತರ, ಪ್ರೀತಿ ಇದೆ ಎಂಬುದು ಸೀನುವಿಗೆ ಚೆನ್ನಾಗಿ ತಿಳಿದಿತ್ತು. ತಂದೆ ಬಂದು ಬಾಗಿಲ ಹತ್ತಿರ ನಿಂತು 'ಈಗ ಹೇಗಿದೆ' ಎಂದು ಕೇಳುವಾಗ ಅಣ್ಣನ ರೂಮಿನಲ್ಲಿ ನಡಗೆಯ ಸಪ್ಪಳ ಕೇಳುತ್ತಿರಲಿಲ್ಲ. ತಾವು ವಸಂತುವಿನ ಬಗ್ಗೆ ಆಡುವ ಮಾತು ಕೇಳಲೆಂದು ಅಣ್ಣ ಹಾಗೆಯೆ ನಿಂತಿರಬೇಕೆಂದು ಸೀನುವಿಗೆ ಅನಿಸುತ್ತಿತ್ತು. ಮಾತು ಮುಗಿದಮೇಲೆ ಸಣ್ಣಗೆ ಕಾಲ ಸಪ್ಪಳ ಮತ್ತೆ ಕೇಳಿಸುತ್ತಿತ್ತು. ಈಗ ವಸಂತುವಿಗೆ ಔಷಧಿ ಕುಡಿಸುವ ಹೊತ್ತಾಯಿತು. ರಂಗಣ್ಣನವರೂ ಒಳಕ್ಕೆ ಬಂದರು. ಸೀನುವಂತೂ ಹಾಸಿಗೆಯ ಪಕ್ಕದಲ್ಲಿ ಕಣ್ಣಿಗೆ ಕಣ್ಣಾಗಿ ಕಾವಲು ಕಾಯುತ್ತಿದ್ದವನು ಅಣ್ಣನೂ ಬಂದುದನ್ನು ಕಂಡ. ಗಂಗಮ್ಮನವರು ವಸಂತುವಿನ ಹಾಸಿಗೆಯ ಪಕ್ಕಕ್ಕೆ ಗೋಡೆಗೆ ಒರಗಿಕೊಂಡು ಹಾಗೆಯೆ ಜೊಂಪಿನಲ್ಲಿದ್ದವರು ಫಕ್ಕನೆ ಎಚ್ಚರಗೊಂಡರು.

"ಹನ್ನೆರಡಾಯಿತೇನು ನೋಡು, ಸೀನು. ಔಷಧಿ ಕುಡಿಸೋಣ" ಎಂದರು ರಂಗಣ್ಣ. ಸೀನು ಗಡಿಯಾರ ನೋಡಿದರೆ ಹನ್ನೊಂದುಮುಕ್ಕಾಲು ಗಂಟೆಯಾಗಿತ್ತು. ಆದರೆ ಎಲ್ಲರಿಗೂ ಗಾಬರಿ. ಹೀಗಾಗಿ ಕಾಲು ಗಂಟೆಗೆ ಮೊದಲೆ ಬಂದುಬಿಟ್ಟಿದ್ದರು. ಅಣ್ಣ ಬಂದು ಬಾಗಿಲಲ್ಲಿ ನಿಂತು ಬೆದರುಗಣ್ಣಿನಿಂದ ವಸಂತುವಿನ ಕಡೆ ನೋಡುತ್ತಿದ್ದರು. ಸೀನು ಅಣ್ಣನ ಕಡೆ ನೋಡಿದ. ನೀಳಾಗಿ ನಿಲುವುಳ್ಳ ಆಕೃತಿ. ಗಂಭೀರವಾಗಿ ನಿಂತ ಅಣ್ಣನ ಮುಖದಲ್ಲಿ ಪ್ರೀತಿ, ಶಾಂತಿ ತುಂಬಿತ್ತು. ಈಗ ವಸಂತುವಿನ ಬಗ್ಗೆ ಕಾತರವೂ ಇತ್ತು. ಆದರೆ ಮುಖ ಕೊಂಚ ಕೊರಗಿ ಕೊರಗಿ ಸಣ್ಣಗಾಗಿದೆ ಎಂದು ಸೀನುವಿಗೆ ತೋರಿತು. ಎಲ್ಲರೂ ವಸಂತುವಿಗಾಗಿ ಈಗ ತಹತಹಿಸುತ್ತಿದ್ದರು. ಅತ್ತಿಗೆ ಈಗ ಇಲ್ಲಿಲ್ಲವಲ್ಲ ಎನ್ನುವುದು ಎಲ್ಲರ ಮನಸ್ಸಿನಲ್ಲೂ ಕೊರೆಯುತ್ತಿತ್ತು. "ಈಗ ಶಾಂತ ಇದ್ದಿದ್ದರೆ ಚೆನ್ನಾಗಿತ್ತು" ಎಂದು ಗಂಗಮ್ಮನವರೇನೊ ಅಂದುಕೊಂಡರು. ಅವರ

ಮಾತು ಕೇಳಿದ ಉಳಿದವರು ಮನಸ್ಸಿನಲ್ಲಿಯೆ ನೊಂದುಕೊಂಡರು. ಮುಖಕ್ಕೆ ನೋವು ಸೇರಿದರೂ ಮಾತಿನಲ್ಲಿ ತೋರಗೊಡಲಿಲ್ಲ. ಸೀನು ಮತ್ತೆ ಗಡಿಯಾರ ನೋಡಿದ. ಇನ್ನೂ ಹನ್ನೆರಡಕ್ಕೆ ಹದಿಮೂರು ನಿಮಿಷವಿತ್ತು. ಅಣ್ಣನಂತೂ ಬಾಗಿಲ ಚೌಕಟ್ಟಿಗೆ ವಿಗ್ರಹದಂತೆ ನಿಂತಿದ್ದರು. ರಂಗಣ್ಣನವರು ನಿಂತಲ್ಲಿಯೆ ಚಡಪಡಿಸುತ್ತಿದ್ದರು. ಸೀನು ಹಾಸಿಗೆಯ ಪಕ್ಕದಲ್ಲಿ ಕುಳಿತಿದ್ದವನು ಎದ್ದು ತಂದೆಗೆ ಆರಾಮ ಕುರ್ಚಿಯನ್ನಾದರೂ ಹಾಕಲೆ ಎಂದುಕೊಂಡು, ಆರಾಮ ಕುರ್ಚಿಯಿದ್ದ ಮೂಲೆಯ ಕಡೆ ನೋಡಿದ. ಅವನ ಮುಖ ನೋಡಿಯೊ ಏನೊ, ಅವನ ಯೋಚನೆಯನ್ನು ಊಹಿಸಿ ಅವನ ಅಣ್ಣ ತಕ್ಷಣ ಮೂಲೆಗೆ ಹೋಗಿ ಆ ಕುರ್ಚಿಯನ್ನು ತಂದು ತಂದೆಗೆ ಹಾಕಿಕೊಟ್ಟರು. ಬೇಡ ಬೇಡವೆನ್ನುತ್ತಲೆ ರಂಗಣ್ಣನವರು ಕುರ್ಚಿಯ ಮೇಲೊರಗಿಕೊಂಡರು. ಕುರ್ಚಿಯ ಬೆನ್ನಿಗೆ ಅಣ್ಣ ನಿಂತ. ಸೀನು ಹಾಸಿಗೆಯ ಪಕ್ಕದಲ್ಲಿ ಹಾಗೆಯೆ ಕುಳಿತಿದ್ದವನು ಅಣ್ಣನ ಕಡೆಗೆ ಮುಖವೆತ್ತಲು ನಾಚಿಕೆಯಾಗಿ, ಮುಖ ತಗ್ಗಿಸಿಕೊಂಡೇ ಕುಳಿತಿದ್ದ. ಬಹಳ ಸುಸ್ತಾಗಿದ್ದ ರಂಗಣ್ಣನವರಿಗೆ ಆರಾಮ ಕುರ್ಚಿಯಲ್ಲಿ ಹಾಗೆಯೆ ಜೂಗರಿಕೆ ಬಂದಿತ್ತು. ಗಂಗಮ್ಮನವರು ಮತ್ತೆ ತೂಕಡಿಸಿದರು. ಬಾಗಿಲ ಹತ್ತಿರ ವಿಗ್ರಹದಂತೆ ಎಚ್ಚರವಾಗಿ ಕಣ್ಣು ತೆರೆದು ನಿಂತಿದ್ದ ಅಣ್ಣ, ಹಾಸಿಗೆ ಹತ್ತಿರ ಎಚ್ಚರವಾಗಿ ಕಣ್ಣು ತೆರೆದು ಕುಳಿತಿದ್ದ ತಮ್ಮ—ಇಬ್ಬರ ಹೃದಯವೂ ಕಳವಳದಿಂದ ತುಂಬಿತ್ತು. ಇಬ್ಬರಿಗೂ ವಸಂತುವಿನ ಬಗ್ಗೆ ಕಾತರ, ಪ್ರೀತಿಯ ಕಳವಳ, ಶಾಂತ ಇದ್ದಿದ್ದರೆ ಚೆನ್ನಾಗಿತ್ತು ಎಂಬ ಭಾವನೆ. ತಮ್ಮ ಸೀನುವಿಗೆ ಅಣ್ಣನಲ್ಲಿ ತಾನೊಬ್ಬ ಅಪರಾಧಿಯೆಂಬ ಭಾವನೆಯೂ ಇತ್ತು. ಅಣ್ಣನ ಮನಸ್ಸಿನಲ್ಲಿ ಸೀನುವಿನ ಬಗ್ಗೆ ತುಂಬಾ ಪ್ರೀತಿ ಸಹಾನುಭೂತಿ ತುಂಬಿತ್ತು. ಇಬ್ಬರ ಹೃದಯವೂ ಒಬ್ಬರ ಹತ್ತಿರ ಒಬ್ಬರು ಹೋಗಲೆಂದು ಸೆಳೆಯುತ್ತಿದ್ದವು. ನಿಧಾನವಾಗಿ ಧೈರ್ಯ ಮಾಡಿಕೊಂಡು, ಸೀನು ಅಣ್ಣನ ಮುಖದ ಕಡೆ ನೋಡಿದ. ಆಗ ಅವನ ಕಣ್ಣುಗಳಲ್ಲಿ ದೈನ್ಯವಿತ್ತು. 'ನಾನು ತಪ್ಪುಮಾಡಿದವನು. ನನ್ನ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಂಡು ನೀನು ಕ್ಷಮಿಸಬೇಕು' ಎಂದು ಆ ಕಣ್ಣುಗಳು ಬೇಡಿಕೊಂಡವು. ಅಣ್ಣನ ಕಣ್ಣು ಇದನ್ನು ಕಂಡಿತು. ಹೃದಯ ಅರಿಯಿತು. ನಗೆಯೊಂದು ಕಣ್ಣಿನಲ್ಲಿ ಸುಳಿದು ಕ್ಷಮೆಯನ್ನು ಸೂಸಿತು. ನಿನ್ನದೇನೂ ತಪ್ಪಿಲ್ಲ, ಯಾಕೆ ಕೊರಗುವೆಯೆಂದು ಸೀನುವಿಗೆ ಆ ಕಣ್ಣುಗಳು

ಸೂಚಿಸಿದಂತಾಯಿತು. ಈ ಕಣ್ಣುಗಳ ಸೆಳೆತ ಹಾಗೆಯೆ ಬಹಳ ಹೊತ್ತು ಇದ್ದರೆ ಸೀನು ಎದ್ದುಹೋಗಿ ಅಣ್ಣನ ಕಾಲು ಹಿಡಿದುಬಿಡುತ್ತಿದ್ದನೊ ಏನೊ—ಆದರೆ ಬಹಳ ಕಾಲ ಅವರಿಬ್ಬರೂ ಈ ಮಂಪರದಲ್ಲಿ ಇರಲಾಗಲಿಲ್ಲ. ಹಜಾರದಲ್ಲಿ ಹಾಕಿದ್ದ ಒಸಾಕಾ ಗಡಿಯಾರ 'ಢಣ್, ಢಣ್' ಎಂದು ಹನ್ನೆರಡು ಹೊಡೆಯ ಲಾರಂಭಿಸಿತು. ಮಂಪರ ಕಳೆಯಿತು. ಇಬ್ಬರೂ ನಿಧಾನವಾಗಿ ಈ ಜಗತ್ತಿಗೆ ಇಳಿದರು. ಗಂಗಮ್ಮನವರೂ ಜೊಂಪಿನಲ್ಲಿಯೆ ಗುನಗುಟ್ಟುತ್ತಿದ್ದರು. ರಂಗಣ್ಣ ನವರು ಧಿಗ್ಗನೆ ಎಚ್ಚರಗೊಂಡರು. ಕಣ್ಣು ತಿಕ್ಕಿಕೊಳ್ಳುತ್ತ "ಹನ್ನೆರಡು ಗಂಟೆ, ಔಷಧಿ ಕುಡಿಸಬೇಕು" ಎಂದರು. ಗಂಗಮ್ಮನವರಿಗೂ ಎಚ್ಚರ ವಾಯಿತು. "ಸೀನು, ಔಷಧಿ ಕುಡಿಸುವ ಹೊತ್ತಾಯಿತಲ್ಲವೇನೊ?" ಎಂದರು ಗಾಬರಿಯಿಂದ. ಅಣ್ಣ ನಿಧಾನವಾಗಿ ಹಾಸಿಗೆಯ ಹತ್ತಿರ ಬಂದು ವಸಂತುವಿನ ಹಣೆಯ ಮೇಲೆ ಕೈಯಿಟ್ಟು ನೋಡಿದರು. ಮುಖದಲ್ಲಿ ಒಂದು ಕ್ಷಣ ನೋವು ಕಾತರವಾಗಿ ಕಾಣಿಸಿಕೊಂಡಿತು. ಸೀನುವಿಗೆ ಗೊತ್ತು, ಜ್ವರ ಏರಿದೆಯೆಂದು. ಡಾಕ್ಟರು ಅವನಿಗೆ ಹೇಳಿದ್ದರು: ಜ್ವರ ಏರಿದರೂ ಏರ ಬಹುದು, ಆದರೆ ಗಾಬರಿಪಟ್ಟುಕೊಳ್ಳಬೇಡಿ—ಬೆಳಿಗ್ಗೆಯ ಹೊತ್ತಿಗೆ ಸರಿಯಾ ಗುತ್ತೆ, ಎಂದು. ಡಾಕ್ಟರು ಅವನಿಗೆ ಸಮಾಧಾನ ಹೇಳಿದ್ದರು. ವಸಂತುವಿಗೆ ತಿಳಿವು ಮಾತ್ರ ಬಂದಿರಲಿಲ್ಲ. ನಿದ್ರೆಯಂತೂ ಆ ಜ್ವರದಲ್ಲಿ ಬರುವಂತೆಯೆ ಇರಲಿಲ್ಲ. ನೋವಿನಲ್ಲಿ ಆಗಾಗ ನರಳುತ್ತಿದ್ದಳು. ಈಗ ಹತ್ತು ಹದನೈದು ನಿಮಿಷದಲ್ಲಿ ನರಳಿರಲಿಲ್ಲ. ನಿದ್ರೆ ಬಂದಿದೆಯೊ ಏನೊ ಎಂದು ಸೀನು ಅಂದು ಕೊಂಡಿದ್ದ. ಈಗ ಔಷಧಿ ಕುಡಿಸಲು ಹೇಗೆತಾನೆ ಎಚ್ಚರಿಸುವುದು? ಹೇಗೂ ಕೊಂಚ ನಿದ್ರೆ ಬಂದಿದ್ದರೆ ನಿದ್ರೆಮಾಡಲಿ, ಆಮೇಲೆ ಎಚ್ಚರವಾದಾಗ ಕುಡಿಸು ವುದು ಎಂದುಕೊಂಡ ಸೀನು. ಆದರೆ ಹನ್ನೆರಡು ಗಂಟೆಗೆ ಔಷಧಿ ಕುಡಿಸಬೇಕು —ಅಷ್ಟರಲ್ಲೆ ವಸಂತು ಪಕ್ಕಕ್ಕೆ ಹೊರಳುತ್ತ ನರಳಿದಳು. ಬಾಯಿ ಒಣಗಿ ಹೋಗಿತ್ತು. ಕಣ್ಣು ತೆರೆಯಲು ಯತ್ನಿಸಿದಂತಿತ್ತು. ಆದರೆ ಎಷ್ಟೇ ಪ್ರಯತ್ನಿ ಸಿದರೂ ಆಗದು ಎನ್ನುವಂತಿತ್ತು. ಮತ್ತೆ ನರಳಿದಳು. ಗಂಗಮ್ಮನವರು ಹತ್ತಿರ ಸರಿದು ಹಣೆಯ ಮೇಲೆ ಕೈ ಇಟ್ಟರು. "ಬಹಳ ಸುಡುತ್ತೆ ಇನ್ನೂ" ಎಂದು ಕಳವಳದಿಂದ ಹೇಳಿದರು. "ಏನೂ ಹೆದರಿಕೆಯಿಲ್ಲ, ಡಾಕ್ಟರು ಹೇಳಿದರು —ಬೆಳಿಗ್ಗೆಯ ತನಕ ಜ್ವರವಿರುತ್ತೆ ಅಂತ" ಎಂದು ಸೀನು ಸಮಾಧಾನ

ಪಡಿಸಲು ಯತ್ನಿಸಿದ. ಆದರೆ ಅವನ ದನಿಯೂ ಕಾತರದಿಂದ ಒಡಕಾಗಿತ್ತು. ರಂಗಣ್ಣನವರು ಕುರ್ಚಿಯನ್ನು ಮುಂದಕ್ಕೆಳೆದುಕೊಂಡು ಮಗಳನ್ನೇ ನೋಡುತ್ತ ಮುಂದಕ್ಕೆ ಬಾಗಿಕೊಂಡಿದ್ದರು. "ಏನೊ, ದೇವರೇ ಕಾಪಾಡಬೇಕು. ಹೇಗೆ ಆಗಿಬಿಟ್ಟದಾಳೆ" ಎಂದರು. ಸೀನು ಔಷಧಿಯನ್ನು ಗ್ಲಾಸಿಗೆ ಬಗ್ಗಿಸುತ್ತಿದ್ದ. ವಸಂತುವಿನ ಕಾಲಿನ ಹತ್ತಿರ ಕುಳಿತು ಅಣ್ಣ ನೋಡುತ್ತಿದ್ದುದನ್ನು ಕಂಡ. ಅವರು ಎದ್ದುಬಂದು ಔಷಧಿಯನ್ನು ಕೈಗೆತ್ತಿಕೊಂಡರು. ಸೀನು ಮೆಲ್ಲನೆ ವಸಂತುವಿನ ಬಾಯಿ ತೆರೆಯಲು ಯತ್ನಿಸಿದ. ಯಾವುದೋ ಕೈ ತನ್ನನ್ನು ಮುಟ್ಟಿದುದು ಮಾತ್ರ ಅರೆ ಎಚ್ಚರದಲ್ಲಿ ವಸಂತುವಿಗೆ ಭಾಸವಾಯಿತು. ಬಲು ಸಣ್ಣಗೆ ಬಾಯಿ ಅಲುಗಾಡಿತು. ಮಾತೇನೂ ಹೊರಡದಿದ್ದರೂ ಎಲ್ಲರಿಗೂ ಅದು ದೊಡ್ಡದಾಗಿಯೆ ಕೇಳಿಸಿದಂತಾಯಿತು. ಅತ್ತಿಗೆ! ಎನ್ನಲು ವಸಂತುವಿನ ತುಟಿ ಪ್ರಯತ್ನಿಸಿ ವಿಫಲಗೊಂಡಿತ್ತು. ಔಷಧಿ ಹಿಡಿದಿದ್ದ ಅಣ್ಣನ ಕೈ ನಡುಗಿತೆಂಬುದು ಗ್ಲಾಸಿನೊಳಗಿನ ಔಷಧಿ ಅಲುಗಿದುದರಿಂದ ತಿಳಿದುದು. ಉಳಿದವರಿಗಂತೂ ವಿದ್ಯುತ್‌ಲಹರಿ ಮುಟ್ಟಿಸಿದಂತಾಗಿತ್ತು. ಸೀನುವಿನ ಮುಖ ಬಿಳಿಚಿಕೊಂಡಿತು, ಗಂಗಮ್ಮನವರ ಕಣ್ಣಿನಲ್ಲೂ ನೀರಿಳಿಯಿತು. ಮೆಲ್ಲನೆ ಮಗಳ ತಲೆಯನ್ನು ತೊಡೆಯ ಮೇಲಿಟ್ಟುಕೊಳ್ಳಲು ಸವರಿಸಿಕೊಂಡರು. ಆದರೆ ಮಲಗಿದ್ದವಳನ್ನು ಹಾಗಿ ಅಲುಗಾಡಿಸುವುದು ಬೇಡವೆಂದು ಹೇಳಿ ಸೀನು ಔಷಧಿಯ ಗ್ಲಾಸನ್ನು ಬಲಗೈಯಲ್ಲಿ ತೆಗೆದುಕೊಂಡ. "ವಸಂತು, ವಸಂತು" ಎಂದು ಮೆಲ್ಲನೆ ಕರೆದ. ವಸಂತು ಅರೆ ಎಚ್ಚರದಲ್ಲಿ ಮುಸುಗುಟ್ಟಿದಳು. ಎಲ್ಲರೂ ಕೈಯಲ್ಲಿ ಜೀವ ಹಿಡಿದುಕೊಂಡು ನಿಂತಿದ್ದರು. "ಏನಾಗುತ್ತಮ್ಮ, ವಸಂತು, ಏನಾಗುತ್ತೆ" ಎಂದರು ಗಂಗಮ್ಮ. ವಸಂತುವಿಗೆ ಇದೊಂದೂ ಕೇಳಿಸುವಂತಿಲ್ಲವೆಂಬುದು ಕಾತರ ತುಂಬಿದ ಅವರ ಮನಸ್ಸಿಗೆ ತೋಚಲಿಲ್ಲ. ಸೀನು ಮೆಲ್ಲನೆ ಮೃದುವಾಗಿ ಅವಳ ಹಣೆಯನ್ನು ನೇವರಿಸಿ, "ವಸಂತು, ವಸಂತು. ಕೊಂಚ ಔಷಧಿ ಕುಡಿದು ಬಿಡಮ್ಮ" ಎಂದು ಬಾಯಿ ತೆರೆಸಲು ಪ್ರಯತ್ನಿಸಿದ. ಆದರೆ ವಸಂತು ಮುಸುಗುಟ್ಟಿದ್ದೆಷ್ಟೊ ಅಷ್ಟೆ. ಬಾಯೊಳಗೆ ಗ್ಲಾಸು ತಂದು ಕೆಳತುಟಿಯ ಮೇಲೆ ಅದನ್ನೊತ್ತಿ ಮೇಲಿನ ತುಟಿಯನ್ನು ಬಿಡಿಸಿದ. ಕೊಂಚ ಔಷಧಿಯನ್ನು ಬಾಯಿಗೆ ಬಗ್ಗಿಸಿದ. ಅದು ಬಾಯಿಗೆ ಬಿದ್ದೊಡನೆ ವಸಂತು ಕೆಮ್ಮಿದಳು. ಔಷಧಿಯೆಲ್ಲ ಕೆಳಕ್ಕೆ ಬಿತ್ತು. ಆದರೆ ಒಂದೆರಡು ಹನಿ ಮಾತ್ರ ಹಾಗೆ

ಬಿದ್ದುದು. ಉಳಿದುದನ್ನು ನಿಧಾನವಾಗಿ ಕುಡಿಸಿದ. ಮುಖ ಕಹಿಯಾದರೂ ಹೇಗೊ ವಸಂತು ಗುಟುಕರಿಸಿದಳು. ಔಷಧಿ ಕಹಿಯೆಂಬುದು ಅವಳು ಮುಖ ಕಹಿ ಮಾಡಿದುದರಲ್ಲೆ ಗೊತ್ತಾಯಿತು. ಈಗ ಔಷಧಿ ಬಿದ್ದುದರಿಂದಲೊ ಏನೊ ಅವಳಿಗೆ ಬಾಯಾರಿಕೆಯಾಯಿತು. ಒಣಗಿದ್ದ ತುಟಿಯನ್ನಾಡಿಸಲು ಯತ್ನಿಸಿದಳು. "ಹಾಲು ಕುಡೀತೀಯಾ, ವಸಂತು ?" ಎಂದು ಸೀನು ಅವಳ ತಲೆ ನೇವರಿಸಿದ. ಗಂಗಮ್ಮನವರು ಹಾಲು ಬಿಸಿ ಮಾಡಲೆಂದು ಒಳಕ್ಕೆ ಹೋದರು. ರಂಗಣ್ಣನವರು ಹಾಗೆಯೆ ಕುಳಿತಿದ್ದರು. "ನೀವು ಹೋಗಿ ಮಲಗಿಕೊಳ್ಳಿ" ಸೀನು ತಂದೆಯನ್ನೂ ಅಣ್ಣನನ್ನೂ ಉದ್ದೇಶಿಸಿ ಎಂದ. ಹಿಂದು ಮುಂದು ನೋಡಿ ರಂಗಣ್ಣನವರು ಎದ್ದುನಿಂತರು. ಒಂದು ಗಳಿಗೆ ಹಾಗೆಯೆ ನಿಂತಿದ್ದು, ತಲೆ ಕೊಡವಿಕೊಳ್ಳುತ್ತ ರೂಮಿನಿಂದ ಹೊರಟರು. ಸೀನು ಅಣ್ಣನೂ ಹೋಗಬಹುದೆಂದಿದ್ದ. ಆದರೆ ಅಣ್ಣ ಕದಲಲಿಲ್ಲ. ವಸಂತು ವಿನ ಹಾಸಿಗೆಯ ಪಕ್ಕದಲ್ಲಿ ಇಬ್ಬರೂ ಒಂದೊಂದು ಕಡೆ ಕುಳಿತಿದ್ದರು. ಇಬ್ಬರ ಹೃದಯವೂ ತುಂಬಿತ್ತು. ಸೀನುವಿನ ಹೃದಯದಲ್ಲಂತೂ ಬಿರುಗಾಳಿ ಇತ್ತು. ಇದ್ದಕ್ಕಿದ್ದಂತೆ ವಸಂತು ಮುಲುಗುಟ್ಟಿದಳು. ಪಕ್ಕಕ್ಕೆ ಸರಿಯಲು ಕೂಡ ಅವಳಿಂದಾಗದು. ಒದ್ದಾಡುತ್ತಿದ್ದುದನ್ನು ನೋಡಿ ಅಣ್ಣ ಹೊದಿಕೆಯನ್ನು ಸರಿಮಾಡಲು ನೋಡಿದರೆ ಹಾಸಿಗೆಯಲ್ಲಿ ಉಚ್ಚೆ ಹುಯ್ದುಕೊಂಡಿದ್ದಳು. ಲಂಗ ಒದ್ದೆಯಾಗಿತ್ತು. ಸೀನುವೂ ಅದನ್ನು ನೋಡಿದ. ತಕ್ಷಣ ಬೇರೆ ಬಟ್ಟೆ ಹಾಕಬೇಕು, ಕೆಳಗಿನ ಬೆಡ್‌ಷೀಟನ್ನು ಬದಲಾಯಿಸಬೇಕು. ವಸಂತು ವಿನ ಲಂಗ, ಬಟ್ಟೆಯೆಲ್ಲ ಇದ್ದುದು ಅತ್ತಿಗೆಯ ಹತ್ತಿರವೆ. ಈಗ ಅಣ್ಣನ ರೂಮಿನೊಳಕ್ಕೆ ಹೋಗಿ ಅದನ್ನೆಲ್ಲ ತರಬೇಕು. ತಾನು ತರಬೇಕೆ, ಅಣ್ಣ ಹೋಗುವನೊ ಎಂದು ಸೀನು ಯೋಚಿಸಿದ. ಅಣ್ಣ ಹಾಸಿಗೆಯಿಂದ ಮೆಲ್ಲನೆ ಮೃದುವಾಗಿ ವಸಂತುವನ್ನು ಎತ್ತಿಕೊಂಡೊಡನೆ ಸೀನು ಅಣ್ಣನ ರೂಮಿಗೆ ಹೋದ. ಅಲ್ಲಿ ಲಂಗವೇನೊ ಸಿಕ್ಕಿತು. ಆದರೆ ಹಾಸಿಗೆ ಹಾಸುವ ದುಪಟಿ ಸಿಕ್ಕಲಿಲ್ಲ. ಬರಿಯ ಲಂಗವನ್ನೆ ಹಿಡಿದುಕೊಂಡು ಬಂದು ಸೀನು ಅಣ್ಣನಿಗೆ "ದುಪಟಿ ಸಿಕ್ಕಲಿಲ್ಲ" ಎಂದ. ಲಂಗವನ್ನು ತೆಗೆದುಕೊಂಡು ಹಾಕುತ್ತ ಅಣ್ಣ "ನನ್ನ ಹಾಸಿಗೆಯಲ್ಲಿದೆ, ಅದೇ ತಗೊಂಡು ಬಾ" ಎಂದರು. ಸೀನು ಒಳಕ್ಕೆ ಹೋಗಿ ಬರುವ ವೇಳೆಗೆ ಲಂಗ ಹಾಕಿ ವಸಂತುವನ್ನು ಅಣ್ಣ ಹೆಗಲ ಮೇಲೆ

ಮಲಗಿಸಿಕೊಂಡಿದ್ದುದನ್ನು ನೋಡಿದ. ತಕ್ಷಣ ಹಾಸಿಗೆಯ ಬಟ್ಟೆಯನ್ನು ಸರಿಮಾಡಿದ. ವಸಂತುವನ್ನು ಅಣ್ಣ ಮೆತ್ತಗೆ ಮಲಗಿಸಿದ ಕೂಡಲೆ ಹೊದಿಕೆಯನ್ನು ಸರಿಯಾಗಿ ಹೊದಿಸಿದ. ಸೆಕೆಯಾಗಲಾರಂಭವಾಯಿತೊ ಏನೊ, ವಸಂತು ಹೊದಿಕೆಯನ್ನು ಕಾಲಿನಿಂದ ಒದೆಯಲು ಯತ್ನಿಸಿದಳು. ಕಾಲನ್ನು ಹಾಗೂ ಹೀಗೂ ಜಾಡಿಸಿದಳು. ಅಣ್ಣ ಮೃದುವಾಗಿ ಮತ್ತೆ ಹೊದಿಕೆಯನ್ನು ಹೊದಿಸಿ ತಲೆ ನೇವರಿಸುತ್ತ ಕುಳಿತರು. ಸೀನುವೂ ಪಕ್ಕದಲ್ಲಿ ನಿಂತ. ವಸಂತು ಮತ್ತೆ ತುಟಿಯಾಡಿಸಿದಳು. “ ಅತ್ತಿಗೆ ” ಎಂಬುದಷ್ಟೆ ಸೀನುವಿಗೂ ಸೀನುವಿನ ಅಣ್ಣನಿಗೂ ಕೇಳಿಸಿತು. ಮತ್ತೆ ಮುಲುಗುಟ್ಟುತ್ತ ವಸಂತು ಹೊದಿಕೆಯಲ್ಲೆ ಒದ್ದಾಡಲಾರಂಭಿಸಿದಳು. ಸೀನುವಿಗೆ ಅಣ್ಣನ ಮುಖ ನೋಡಲು ಕೂಡ ನಾಚಿಕೆಯಾಯಿತು. “ ಜ್ವರ ಇಳಿಯುತ್ತೆ ಅಂತ ಕಾಣುತ್ತೆ, ಅಣ್ಣ. ಅದಕ್ಕೇ ಇಷ್ಟೊಂದು ಸೆಕೆಯಾಗತಾ ಇರಬೇಕು ” ಎಂದು ಮೆಲ್ಲನೆ ಅಂದ. “ ಹೂಂ. ನೋಡು, ಅಮ್ಮ ಇನ್ನೂ ಹಾಲು ತರಲೆ ಇಲ್ಲ. ಮಗುವಿಗೆ ಎಷ್ಟು ಬಾಯಾರಿಕೆಯೊ ” ಎಂದರು ಅಣ್ಣ. ಸೀನು ತಕ್ಷಣ ಹೊರಟುಬಿಟ್ಟ. ಹೊಸಲು ದಾಟುವುದರಲ್ಲೆ ತಾಯಿ ಎರಡು ಲೋಟ ತಂದರು. ಬಿಸಿ ಹಾಲಿನ ವಾಸನೆ ಔಷಧಿಯ ಘಾಟಿನ ಜತೆಗೆ ರೂಮಿನಲ್ಲಿ ಸೇರಿಕೊಂಡಿತು. ಕಷ್ಟಪಟ್ಟು ಒಂದೊಂದು ಬೊಟ್ಟು ಹಾಲು ಕುಡಿಸಿದರು. ದೊಡ್ಡದಾಗಿ ಬಾಯಿ ಬಿಡಿಸಲು ಆಗುತ್ತಿರಲಿಲ್ಲ. ಮೇಲಿನ ತುಟಿ ಊದಿಕೊಂಡಿದ್ದುದು ಬಹಳ ನೋವು ಕೊಡುತ್ತಿತ್ತು. ಅದರ ಊದಲೇನೊ ಕೊಂಚ ಇಳಿದಿತ್ತು. ಆದರೂ ಚಮಚವನ್ನು ಅದಕ್ಕೆ ತಾಕಿಸಿದಾಗ ವಸಂತು ಜೋರಾಗಿ ನರಳುತ್ತಿದ್ದಳು. ಅಣ್ಣನೆ ಚಮಚ ತೆಗೆದುಕೊಂಡು ನಿಧಾನವಾಗಿ ಒಂದೊಂದೆ ಬೊಟ್ಟಾಗಿ ಹಾಲು ಕುಡಿಸಿದರು. ನಾಲ್ಕೈದು ಚಮಚ ಕುಡಿದಮೇಲೆ ವಸಂತು ನರಳುತ್ತ ಪಕ್ಕಕ್ಕೆ ಹೊರಳಿದಳು. ಕೈಕಾಲೆಲ್ಲ ಬೆವರುತ್ತಿತ್ತು. ಹಣೆಯ ಮೇಲೆಲ್ಲ ಬೆವರು ನಿಂತಿತು. ಸೀನು ಒಂದು ಬಟ್ಟೆಯಲ್ಲಿ ಅದನ್ನೆಲ್ಲ ಒರಸಿದ. ಒದ್ದಾಡುತ್ತ ವಸಂತು ಕಣ್ಣು ತೆರೆಯಲು ಯತ್ನಿಸಿದಳು. ಗಂಗಮ್ಮನವರು ದಿಕ್ಕುಗಾಣದವರಂತೆ ಕುಳಿತಿದ್ದರು. ಗಾಬರಿಯಿಂದ “ ವಸಂತು, ವಸಂತು, ಏನಾಗುತ್ತಮ್ಮ ” ಎಂದು ಹತ್ತಿರ ಬಂದರು. ಕೈಯನ್ನು ಕೈಯಲ್ಲಿ ಹಿಡಿದುಕೊಂಡರು. ವಸಂತು ಕಣ್ಣು ತೆರೆದರೆ ಮಂಕಾಗಿ ಹಳದಿಗೆಂಪಾಗಿತ್ತು ಕಣ್ಣು. ನೀಲಿಯಾಗಿದ್ದುದೆಲ್ಲ ಹಳದಿಗೆಂಪಾಗಿ ಕಂದಿ

ಹೋಗಿತ್ತು. ತೇಲುಗಣ್ಣಾಗಿ ಕಾಣಿಸಿತು. ಗಂಗಮ್ಮನವರಿಗೆ ದುಃಖ ತಡೆಯ ಲಾಗದೆ ಬಿಕ್ಕಿಬಿಕ್ಕಿ ಅಳಲಾರಂಭಿಸಿದರು. ಹೇಗೊ ಕಷ್ಟಪಟ್ಟು ಸೆರಗಿನಂಚಿಗೆ ಅತ್ತರು. ವಸಂತು ಅಲ್ಲಿ ಇಲ್ಲಿ ನೋಡಿ ಅಣ್ಣನ ಕಡೆ ತಿರುಗಿದಳು. ತುಟಿ ಮತ್ತೆ ಬಹಳ ಪ್ರಯಾಸದಿಂದ "ಅತ್ತಿಗೆ" ಅಂದಿತು. ಸೀನುವಿನ ಹೃದಯದಲ್ಲಿ ಜ್ವಾಲಾಮುಖಿಯ ಸ್ಫೋಟ ಆದಂತಾಯಿತು. ಅಣ್ಣನೇನೆನ್ನುವನೊ ಎಂದು ಮನಸ್ಸು ಗಾಬರಿಗೊಂಡಿತು. ಗಂಗಮ್ಮನವರ ಮನಸ್ಸು ವಿಹ್ವಲಗೊಂಡಿತು. ಅಣ್ಣ ಒಂದು ಗಳಿಗೆ ಸುಮ್ಮನಿದ್ದು "ಮಲಗಿಕೊಂಡು ನಿದ್ರೆಮಾಡು, ಮಗು. ಮಾತಾಡಿ ಆಯಾಸ ಮಾಡಿಕೊಳ್ಳಬೇಡ" ಎಂದರು. ಸೀನುವಿಗೆ ಮತ್ತೆ ಮನಸ್ಸಿಗೆ ತ್ರಿಶೂಲ ನೆಟ್ಟಂತಾಯಿತು. ಅಣ್ಣ ತನ್ನಿಂದಾಗಿ ಈ ದುಃಖವನ್ನು ಅನುಭವಿಸಿದರೂ ಒಂದು ಸಾರಿಯೂ ತನ್ನನ್ನು ಅನ್ನಲಿಲ್ಲವಲ್ಲ ಎಂದುಕೊಂಡು ಅವನ ಹೃದಯ ಬಿರಿಯಿತು.

ರಾತ್ರಿಯೆಲ್ಲ ವಸಂತುವಿನ ಹಾಸಿಗೆಯ ಪಕ್ಕದಲ್ಲಿ ಜಾಗರಣೆಯಾಯಿತು. ಸೀನುವಿನ ಅಣ್ಣ ಬೆಳಗಿನ ಜಾವ ನಾಲ್ಕು ಗಂಟೆಗೆ ಔಷಧಿ ಕುಡಿಸಿದಮೇಲೆ ವಸಂತುವಿನ ಜ್ವರ ಪೂರಾ ಇಳಿದಂತೆ ತೋರಿತು. ಆಗ ಅವರು "ನಾನು ಇನ್ನು ಕೊಂಚ ಮಲಗಿಕೊಳ್ಳತೀನಿ. ನೀನು ನೋಡಿಕೊ" ಎಂದು ಹೇಳಿ ಹೊರಟು ಹೋದರು. ಆದರೆ ಅವರಿಗೂ ಮಲಗುವಷ್ಟು ಮನಶ್ಶಾಂತಿ ಎಲ್ಲಿ ಬರಬೇಕು. ಐದು ಗಂಟೆಯ ಹೊತ್ತಿಗೆ ಬಂದು ವಸಂತುವನ್ನು ನೋಡಿದರು. ವಸಂತುವಿಗೆ ನಿದ್ರೆ ಬಂದಿತ್ತು. ಮುಖ ಚೆನ್ನಾಗಿ ಬೆವರಿನಲ್ಲಿ ಕಮರಿದಂತಿತ್ತು. ಸೀನು ಜಾಗರಿಸುತ್ತ ಕುಳಿತಿದ್ದ. ಮಮತೆಯ ಕರೆ ಬಂದು ಅವರ ಹೃದಯ ಕಲಕಿತು. ಸೀನುವನ್ನು "ನೀನು ಮಲಗಿಕೊ" ಎಂದರು. ಸೀನು ಎಚ್ಚರಾಗಿ "ಆಂ, ಏನು?" ಎಂದ. "ನೀನು ಮಲಗಿಕೊ" ಎಂದರು ಅಣ್ಣ ಮತ್ತೆ. "ಅಣ್ಣ, ನೀನು ಮಲಗಿಕೊಳ್ಳಲೆ ಇಲ್ಲವೆ?" ಎಂದು ಸೀನು ಮಲಗಲು ಹೊರಟ. ಅಣ್ಣ ವಸಂತುವಿಗೆ ಇನ್ನೂ ಒಂದು ಹೊದಿಕೆಯನ್ನು ಹೊದಿಸಿ, ಆರಾಮ ಕುರ್ಚಿಯ ಮೇಲೆ ಒರಗಿಕೊಂಡುದನ್ನು ನೋಡಿದುದರ ಮಸಕು ಮಸಕು ನೆನಪು ಸೀನುವಿಗೆ.

ಬೆಳಿಗ್ಗೆ ಸೀನುವಿಗೆ ಎಚ್ಚರವಾದಾಗ ಎಂಟು ಗಂಟೆಯ ಮೇಲಾಗಿತ್ತು. ಅಣ್ಣ ಯಾವಾಗಲೊ ಅಲ್ಲಿಂದ ಹೊರಟುಹೋಗಿದ್ದರು. ವಸಂತುವಿಗೆ ಇನ್ನೂ

ಎಚ್ಚರವಾಗಿರಲಿಲ್ಲ. ಒಳಗಡೆ ತಾಯಿ ಅಡಿಗೆಮನೆಯಲ್ಲಿ ಓಡಿಯಾಡುವ ಸದ್ದು ಕೇಳಿಬರುತ್ತಿತ್ತು. ರಂಗಣ್ಣನವರು ಆದೆ ತಾನೆ ಒಳಕ್ಕೆ ಬಂದು ವಸಂತು ಎದ್ದಿರುವಳೆ ಎಂದು ನೋಡಿಕೊಂಡು ಹೊರಕ್ಕೆ ಕಾಲಿಡುತ್ತಿದ್ದರು. ವಸಂತುವಿನ ಮುಖ ಜ್ವರದ ಆವೇಶದಿಂದ ಪೂರ್ತಿ ಕಂದಿಹೋಗಿತ್ತು. ಸೀನು ಆ ಕಡೆ ತಿರುಗಿ ಏಳುವ ವೇಳೆಗೆ ವಸಂತು ಎಚ್ಚರಗೊಂಡು ನರಳಿದಳು. "ಏನು ವಸಂತು, ಏನಾಗುತ್ತೆ" ಎನ್ನುತ್ತ ಸೀನು ಅವಳ ಹತ್ತಿರ ಬಂದು ಕೈ ಹಿಡಿದು ನೋಡಿದ. ಜ್ವರ ಕೊಂಚವೂ ಇರಲಿಲ್ಲ. ಕೈ ತಣ್ಣಗಾಗಿ ಹೋಗಿತ್ತು. ವಸಂತುವಿನ ತುಟಿಯ ಊದಲು ಈಗ ಇಳಿದುಹೋಗಿ, ತುಟಿ ಮೊದಲಿನಂತೆಯೆ ಆಗಿತ್ತು. ಆದರೆ ಮುಖವೆಲ್ಲ ಸಪ್ಪೆಯಾಗಿ ಹೋಗಿತ್ತು. ಸೀನುವಿನ ಕಡೆ ತಿರುಗಲು ಕೂಡ ಅವಳಿಗೆ ತ್ರಾಣವಿರಲಿಲ್ಲ. ಜ್ವರ ಅವಳ ಶಕ್ತಿಯನ್ನೆಲ್ಲ ಹಿಂಡಿ ಹಿಪ್ಪೆ ಮಾಡಿದ ಹಾಗಿತ್ತು. ಬಾಯಿ ತೆರೆದು ನಾಲಗೆಯಿಂದ ತುಟಿಗಳನ್ನೊದ್ದೆಮಾಡಿಕೊಂಡು ಬಹು ಪ್ರಯಾಸದಿಂದ "ಅತ್ತಿಗೆ, ಸೀನು, ಅತ್ತಿಗೆ" ಎಂದಳು. ಸೀನುವಿಗೆ ಮುಖದ ಮೇಲೆ ಫಟೀರನೆ ಹೊಡೆದಂತಾಯಿತು. ಏನು ಹೇಳಬೇಕೊ ತೋಚಲಿಲ್ಲ. ರಾತ್ರಿ ಜ್ವರದಲ್ಲಿ ಅತ್ತಿಗೆಯ ಜಪ, ಈಗ ಎಚ್ಚರವಾದೊಡನೆ ಅತ್ತಿಗೆಯ ಜಪ ಆರಂಭ. ಅತ್ತಿಗೆಯಲ್ಲಿ ಪ್ರಾಣವನ್ನಿಟ್ಟ ತನ್ನ ತಂಗಿಗೆ ತಾನೆಂತಹ ಕಟುಕನೆಂಬ ಭಾವನೆ ಬಂದಿರಬೇಕೆಂದುಕೊಂಡ.

"ಕಾಫಿ ಕುಡಿತೀಯ, ವಸಂತು. ಬಚ್ಚಲುಮನೆಗೆ ಹೋಗಬೇಕೆ ?" ಎಂದು ಕೇಳಿ ಅವಳನ್ನು ಬಾಚಿ ತಬ್ಬಿ ಎತ್ತಿಕೊಂಡು ಬಚ್ಚಲುಮನೆಗೊಯ್ದ. ಕುಳಿತುಕೊಳ್ಳಲು ಕೂಡ ಅವಳಿಗೆ ಶಕ್ತಿಯಿರಲಿಲ್ಲ. ಮೆಲ್ಲನೆ ಅವಳನ್ನು ಹಿಡಿದುಕೊಂಡಿದ್ದು, ತಾನೇ ಬಿಸಿನೀರಿನಲ್ಲಿ ಅವಳ ಮುಖ ತೊಳೆದು ಎತ್ತಿಕೊಂಡು ಮತ್ತೆ ತನ್ನ ರೂಮಿಗೆ ಬಂದ. ರಂಗಣ್ಣನವರು ಕೂಡಲೆ ಬಂದು ವಿಚಾರಿಸಿದರು. ಹಾಲು ಕುಡಿಸಬೇಕೆಂದು ಡಾಕ್ಟರು ಹೇಳಿದ್ದರು. ಹಾಲು ತರಲು ಗಂಗಮ್ಮನವರಿಗೆ ಹೇಳಿದರು ರಂಗಣ್ಣ. ಆದರೆ ವಸಂತು ಹಾಲು ಬೇಡವೆಂದು ಹಟ ಹಿಡಿದುಬಿಟ್ಟಳು. ಎಷ್ಟೆಷ್ಟು ಹೇಳಿದರೂ ಹಾಲು ಕುಡಿಯಲು ಒಪ್ಪಲಿಲ್ಲ. ಬಡಪೆಟ್ಟಿಗೆ ಅವಳು ಅವರ ಮಾತಿಗೆ ಬಗ್ಗಲಿಲ್ಲ. ತಮ್ಮ ಬುದ್ಧಿವಂತಿಕೆಯನ್ನೆಲ್ಲ ಖರ್ಚುಮಾಡಿದರೂ ರಂಗಣ್ಣನವರಿಗೆ ವಸಂತುವನ್ನು ಒಪ್ಪಿಸಲಾಗಲಿಲ್ಲ. ಮಗಳ ಮೇಲೆ ರೇಗುವ ಹಾಗಿಲ್ಲ. ಹೀಗಾಗಿ ರಂಗಣ್ಣನವರಿಗೆ ಸೊಸೆಯಿದ್ದಿದ್ದರೆ

ಚೆನ್ನಾಗಿತ್ತೆನಿಸಿತು. "ಹುಂ! ಶಾಂತ ಇರಬೇಕಾಗಿತ್ತು" ಎಂದು ಬಾಯಿಂದ ಬಂದೂ ಬಿಟ್ಟಿತು. ಈ ಮಾತು ಕೇಳಿದೊಡನೆಯೆ ವಸಂತು "ಅತ್ತಿಗೆ ಯಾವಾಗ ಬರುತ್ತಾಳೆ, ಅಪ್ಪ?" ಎಂದು ಕೇಳಿದಳು. ರಂಗಣ್ಣನವರಿಗೆ ಏನು ಹೇಳಲೂ ತೋಚದೆ ತಬ್ಬಿಬ್ಬಾಯಿತು. ಸೀನು ಹಾಲಿನ ಲೋಟದಿಂದ ತಲೆಯನ್ನು ಮೇಲೆತ್ತಲಿಲ್ಲ. ಗಂಗಮ್ಮನವರು "ಯಾವಾಗ ನೋಡಿದರೂ ಅತ್ತಿಗೆ, ಅತ್ತಿಗೆ ಅಂತ ಪ್ರಾಣ ಬಿಡುತ್ತಾಳೆ. ಅವಳು ಅಲ್ಲಿ ಮಲಾಮೆಯಿಂದಿದಾಳೆ. ಒಂದು ಕಾಗದ ಕೂಡ ಹಾಕಿಲ್ಲ" ಎಂದು ಗೊಣಗಿದರು. ವಸಂತುವಿಗೆ ಸೀನು ಹಾಲು ಕುಡಿಸಲು ಮಾಡಿದ ಪ್ರಯತ್ನವೆಲ್ಲ ವಿಫಲವಾಯಿತು. ಕಾಫಿ ಬೇಕೆಂದು ಹಟ ಹಿಡಿದ ಅವಳಿಗೆ ಕೊನೆಗೆ ಹೆಚ್ಚು ಹಾಲು ಬೆರಸಿದ ಕಾಫಿ ಕುಡಿಸಿದರು. ಎಲ್ಲರಿಗೂ ಈಗ ಕೊಂಚ ಸಮಾಧಾನವಾಯಿತು. ವಸಂತುವಿಗೆ ಈಗ ಜ್ವರ ತಗ್ಗಿತ್ತು. ಹೊಟ್ಟೆಗೆ ಕಾಫಿ ಬಿದ್ದುದರಿಂದ ಇನ್ನೇನೂ ಚಿಂತೆ ಇಲ್ಲವೆಂದುಕೊಂಡರು.

ಡಾಕ್ಟರು ಒಂಬತ್ತು ಗಂಟೆಯಾದರೂ ಬರಲಿಲ್ಲ. ವಸಂತು ತೆಪ್ಪನೆ ಮಲಗಿದ್ದವಳು ಹಸಿವು ಎನ್ನಲಾರಂಭಿಸಿದಳು. ಹಾಲು ಕುಡಿಯಲು ಒಪ್ಪುತ್ತಿರಲಿಲ್ಲ. ಒಂದು ದಿನದ ಜ್ವರದಿಂದ ಆಗಲೆ ಅವಳ ನಾಲಗೆ ಕೆಟ್ಟಿತ್ತು. ಚಕ್ಕುಲಿ ಬೇಕು ಅಂತ ಹಟ ಆರಂಭಿಸಿಬಿಟ್ಟಳು. ಗಂಗಮ್ಮನವರು ಸೀನು ಎಷ್ಟೇ ಸಮಾಧಾನ ಪಡಿಸಿದರೂ ಸಮಾಧಾನಗೊಳ್ಳಲಿಲ್ಲ. "ನೀನು ಕೆಟ್ಟವಳು, ಹೋಗಮ್ಮ. ನೀನೂ ಕೆಟ್ಟವನು ಹೋಗೊ, ಸೀನು. ಅತ್ತಿಗೆ ಒಳ್ಳೆಯವಳು. ಆವೊತ್ತು ನನಗೆ ನಾಲ್ಕು ಚಕ್ಕುಲಿ ಕೊಟ್ಟಳು" ಎಂದು ಆರಂಭಿಸಿಬಿಟ್ಟಳು ವಸಂತು. ಹಸಿವು ಎಂದ ಮಗುವಿಗೆ ಏನು ಕೊಡಲೆಂದು ಗಂಗಮ್ಮನವರಿಗೆ ತೋಚಲಿಲ್ಲ. ಡಾಕ್ಟರಾದರೂ ಈಗ ಬಂದಿದ್ದರೆ ಅವರನ್ನು ಕೇಳಿ ಅನ್ನವಾದರೂ ಹಾಕಬಹುದಾಗಿತ್ತು ಎಂದುಕೊಂಡರು. ಆದರೆ ಡಾಕ್ಟರು ಬರುವ ಸೂಚನೆ ಕಾಣಲಿಲ್ಲ. ಕೊನೆಗೆ ಸೀನು ಅವರನ್ನು ಕರೆತರಲು ಹೋದ. ಡಾಕ್ಟರು ಬರಲಿಲ್ಲ. ವಸಂತುವಿಗೆ ಜ್ವರ ಇಳಿದಿದೆ ಎಂದು ಕೇಳಿ, "ಇನ್ನೇನೂ ಯೋಚಿಸಬೇಕಾಗಿಲ್ಲ. ಈ ಔಷಧಿ ಕೊಡಿ" ಎಂದು ಔಷಧಿ ಕೊಟ್ಟು, "ಮಧ್ಯಾಹ್ನ ತಿಳಿಸಾರಿನಲ್ಲಿ ಅನ್ನ ಹಾಕಿ, ಪರವಾಗಿಲ್ಲ" ಎಂದು ಹೇಳಿದರು. ಕಾಫಿ ಕೊಟ್ಟರೂ ಪರವಾಗಿಲ್ಲವೆಂದು ಭರವಸೆ ಕೊಟ್ಟರು.

ಮಧ್ಯಾಹ್ನ ಸೀನು ಕಾಲೇಜಿಗೆ ಹೊರಡಲು ಆಗಲೆ ಇಲ್ಲ. ವಸಂತು ಬಿಟ್ಟರೆ ತಾನೆ ಅವನು ಹೊರಡುವುದು. ಊಟ ಮಾಡಿದಮೇಲೆ ಅವಳಿಗೆ ಔಷಧಿ ಕುಡಿಸಿ ಸೀನು ಆರಾಮಕುರ್ಚಿಯ ಮೇಲೆ ಮಲಗಿದ. ವಸಂತುವೂ ನಿದ್ರೆಹೋಗಿದ್ದಳು. ರಾತ್ರಿಯೆಲ್ಲ ಕಾದು ಕುಳಿತು ನಿದ್ರೆ ಕಾಣದಿದ್ದ ಸೀನುವಿಗೆ ಚೆನ್ನಾಗಿ ನಿದ್ರೆ ಬಂದಿತು. ಎಚ್ಚರವಾದಾಗ ಸಂಜೆ ಆಗಿತ್ತು. ಕಣ್ಣೆಲ್ಲ ಉರಿ, ಆ ಕಡೆ ತಿರುಗಿದರೆ ವಸಂತು ನರಳುತ್ತಿದ್ದಳು. ಮುಖದಲ್ಲಿ ಮತ್ತೆ ಜ್ವರ ಕುದಿಯುತ್ತಿತ್ತು. ಸೀನುವಿಗೆ ಮತ್ತೂ ಗಾಬರಿಯಾಯಿತು. ಇನ್ನೇನು ಗತಿ ಎಂದುಕೊಂಡ. ವಸಂತು ಸಂಕಟದಲ್ಲಿ ಹೀಗಿಂದ ಹಾಗೆ ಹೊರಳುತ್ತಿದ್ದಳು, ನರಳುತ್ತಿದ್ದಳು. ಒಳಗೆ ಮಲಗಿ ಗೊರಕೆ ಹೊಡೆಯುತ್ತಿದ್ದ ಗಂಗಮ್ಮನವರು ಅವಳ ನರಳಿಕೆ ಕೇಳಿ ಎದ್ದು ಬಂದರು. ಜ್ವರದ ಕಾವು ಮಿತಿಮೀರಿದಂತೆ ವಸಂತುವಿನ ನರಳಿಕೆ ಹೆಚ್ಚಿತು. ಗಂಗಮ್ಮನವರಿಗೂ ತಬ್ಬಿಬ್ಬಾಯಿತು. ಕಣ್ಣುಗಳಲ್ಲಿ ಮತ್ತೆ ಭೀತಿ ಮೂಡಿತು. ಎದೆ ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಒಳಗಿನಿಂದ ಮತ್ತೆ ಹಾಲು ತಂದು ಹಣೆಗೆ ಪಟ್ಟು ಹಾಕಲು ಕುಳಿತರು. ಸೀನು ಪಟ್ಟು ಹಾಕುತ್ತ ಕುಳಿತ. ಗಂಗಮ್ಮನವರು ಆ ಕಡೆ ಕುಳಿತು ಕಣ್ಣು ಕಣ್ಣು ಬಿಡುತ್ತ "ವಸಂತು, ಏನಾಗುತ್ತಮ್ಮ?" ಎನ್ನುತ್ತಿದ್ದರು. ಸಂಜೆಯೆಲ್ಲ ಹೀಗೆ ಕಳೆಯಿತು. ರಂಗಣ್ಣನವರು ಮನೆಗೆ ಬಂದಮೇಲೆ ಸೀನು ಡಾಕ್ಟರ ಬಳಿಗೆ ಹೋದ. ಅವರು ಏನೂ ಹೆದರಿಕೆಯಿಲ್ಲವೆಂದು ಹೇಳಿ ಮತ್ತೆ ಅದೇ ಔಷಧಿಯನ್ನು ಕೊಡುವಂತೆ ಹೇಳಿಕಳಿಸಿದರು. ವಸಂತುವಿನ ಮೈಜ್ವರ ಏರುತ್ತಲೆ ಇತ್ತೇ ಹೊರತು ಇಳಿಯಲಿಲ್ಲ. ಅಂದು ಆರಂಭವಾದ ನರಳಿಕೆ ಎಂಟು ದಿನ ನಿಲ್ಲಲಿಲ್ಲ. ಎಂಟು ದಿನವೂ ಜ್ವರ ಚೆನ್ನಾಗಿ ಬೇಯಿಸಿತು. ಬರಿಯ ಮೂಳೆಯ ಹಂದರವಾಗಿಹೋದಳು ವಸಂತು. ಆ ಸಂಜೆ ಡಾಕ್ಟರು ಬರಲೇ ಇಲ್ಲ. ರಾತ್ರಿಯೆಲ್ಲ ಹಿಂದಿನ ರಾತ್ರಿಯಂತೆ ಎಲ್ಲರೂ ಹಾಸಿಗೆಯ ಬಳಿ ಕಾದರು. ಒಬ್ಬರಿಗೂ ಕಣ್ಣು ಮುಚ್ಚಲಾಗಲಿಲ್ಲ. ಕಳವಳದಲ್ಲಿ ಎಲ್ಲರ ಮುಖವೂ ಕಡೆದಂತೆ ಆಗಿತ್ತು. ಸೀನು, ಅಣ್ಣ ಇಬ್ಬರೂ ಹಾಸಿಗೆಯ ಬಳಿ ರಾತ್ರಿಯೆಲ್ಲ ಕಾದರು. ವಸಂತುವಿನ ನರಳಾಟ ಮಾತ್ರ ನಿಲ್ಲಲಿಲ್ಲ. ಅವಳಿಗೂ ಒಂದು ಗಳಿಗೆಯೂ ನಿದ್ರೆ ಹತ್ತಲಿಲ್ಲ. ಮೈ ಸುಡುವುದಂತೂ ಹೆಚ್ಚಾಗುತ್ತಿತ್ತು. ಬೆಳಗಾಗುವ ಹೊತ್ತಿಗೆ ಗಾಬರಿ ಇನ್ನೂ ಹೆಚ್ಚಾಯಿತು. ಜ್ವರ ತಗ್ಗಲಿಲ್ಲ. ಸೀನುವಿನ

ಅಣ್ಣ ತಕ್ಷಣ ಡಾಕ್ಟರಲ್ಲಿಗೆ ಓಡಿಹೋಗಿ ಅವರನ್ನು ಕರೆತಂದರು. ಡಾಕ್ಟರು ನೋಡಿ ಹೇಳಲು ಹಿಂದೆ ಮುಂದೆ ನೋಡಿದರು. ಮತ್ತೆ ಮೈ ಸರಿಯಾಗಿ ಪರೀಕ್ಷೆ ಮಾಡಿ ನೋಡಿ, ಸೀನುವಿನ ಅಣ್ಣನನ್ನು ಆ ಕಡೆ ಕರೆದು, “ ಇದು, ಟೈಫಾಯಿಡ್. ಹುಷಾರಾಗಿ ನೋಡಿಕೊಳ್ಳಿ. ಜ್ವರ ಹೀಗೆಯೆ ಕಾಯುತ್ತೆ. ಎಂಟು ದಿನವೊ, ಹದಿನೈದು ದಿನವೊ, ಇಪ್ಪತ್ತೊಂದು ದಿನವೊ ಕಾಯುತ್ತೆ. ನಾನು ಈವೊತ್ತು ಇಂಜಕ್ಷನ್ ಕೊಡುತ್ತೇನೆ, ನೋಡೋಣ. ಹಾಲು ಕಾಸಿ ನಿಂಬೆಹಣ್ಣು ಹಾಕಿ—ಗಡ್ಡೆಯನ್ನೆಲ್ಲ ಸೋಸಿ ಹಾಕಿ. ಉಳಿದ ನೀರನ್ನು ಮಾತ್ರ ಕುಡಿಸಿ. ಇನ್ನೇನೂ ಆಹಾರ ಕೊಡಬೇಡಿ ” ಎಂದು ಹೇಳಿದರು. ಮತ್ತೆ ವಸಂತುವಿಗೆ ಇಂಜಕ್ಷನ್ ಕೊಟ್ಟಾಯಿತು. ಅವಳಿಗಂತೂ ಬರಿಯ ನರಳಾಟವೆ ಆಯಿತು, ಜ್ಞಾನವೇ ಬರಲಿಲ್ಲ. ಹಾಗೆಯೆ ನೀರನ್ನು ಕುಡಿಸುತ್ತಿದ್ದ ಸೀನು. ರಾತ್ರಿಯ ಹೊತ್ತು ಅಣ್ಣ, ತಂದೆ ಇವರ ಸರದಿಯಾಗಿತ್ತು. ಹಾಸಿಗೆ ಹತ್ತಿರ ಹಗಲು ರಾತ್ರಿ ಯಾರಾದರೂ ಇದ್ದೇ ಇರುತ್ತಿದ್ದರು. ಮನೆಯಲ್ಲಿದ್ದ ನಗುವೆಲ್ಲ ಮಾಯವಾಗಿ ಈಗ ಕಳವಳ ಎಲ್ಲ ಕಡೆಗೂ ಹಬ್ಬಿಕೊಂಡಿತ್ತು. ಎಲ್ಲರೂ ಕೊಂಚಕೊಂಚವಾಗಿ ಕಂದಿಹೋಗುತ್ತಿದ್ದರು. ನಿದ್ರೆಯಿಲ್ಲದುದು, ಮನಸ್ಸಿನ ಆತಂಕ, ಅಲ್ಲದೆ ಎಂತೊ ಏನೊ ಎಂಬ ಕಳವಳ. ಯಾರಿಗೂ ಅನ್ನ ನೀರು ಬೇಕಿಲ್ಲ. ಎಲ್ಲರ ಕಣ್ಣು ಗುಳಿಬಿದ್ದಿತ್ತು. ಸೀನುವಿನ ಅಣ್ಣನ ಮುಖ ದಲ್ಲಂತೂ ಕಣ್ಣು ಪಾತಾಳಕ್ಕೆ ಇಳಿದಂತಾಗಿತ್ತು. ಸೀನುವಿಗೂ ಈ ನೋವಿನ ಭಾರ ತಡೆಯುವುದಾಗಲಿಲ್ಲ. ಕಾಲೇಜಿಗೆ ಒಂದು ದಿನ ಹೋದರೆ ಎರಡು ದಿನ ಇಲ್ಲ. ಒಂದು ವಾರ ಕಳೆಯುವುದು ಒಂದು ನರಕಯುಗ ಕಳೆದಂತಾಗಿ ಹೋಯಿತು, ಎಲ್ಲರಿಗೂ. ವಾರದ ಕೊನೆಯವರೆಗೂ ಡಾಕ್ಟರು ದಿನಕ್ಕೆರಡು ಬಾರಿ ಬಂದು ವಸಂತುವನ್ನು ನೋಡಿಕೊಂಡು ಹೋಗುತ್ತಿದ್ದರು. ಏಳನೆಯ ದಿನ ರಾತ್ರಿ ಜ್ವರ ಇಳಿಯಲಾರಂಭವಾಯಿತು. ವಸಂತುವಿಗೆ ಕೊಂಚ ಅರಿವು ಬರಲಾರಂಭವಾಯಿತು. ಎಲ್ಲರಿಗೂ ಒಂದು ರೀತಿಯ ಸಮಾಧಾನ. ಇಷ್ಟು ದಿನ ತಾವೆಲ್ಲ ಒದ್ದಾಡಿದರೂ ಸದ್ಯ ಮಗು ಬದುಕಿಕೊಂಡರೆ ಸಾಕೆಂದು ಹಗಲು ರಾತ್ರಿ ಪ್ರಾರ್ಥಿಸುತ್ತಿದ್ದರು. ಗಂಗಮ್ಮನವರಂತೂ ಎಲ್ಲ ದೇವರಿಗೂ ಹರಕೆ ಹೊತ್ತಿದ್ದರು, ಮುಡಿಪು ಕಟ್ಟಿದ್ದರು. ರಂಗಣ್ಣನವರಂತೂ ಅರ್ಧಕ್ಕರ್ಧವಾಗಿ ಬಿಟ್ಟಿದ್ದರು. ಕೋರ್ಟಿಗೆ ಹೋಗುವಷ್ಟು ಕೂಡ ಅವರಿಗೆ ಮನಸ್ಸು ಶಾಂತವಾಗಿ

ಇರಲಿಲ್ಲ. ಸೀನು, ಅವರ ಅಣ್ಣ ಇಬ್ಬರಂತೂ ತೇದುಹೋಗಿದ್ದರು. ಈಗ ಎಲ್ಲರಿಗೂ ಒಂದು ಬಗೆಯ ಮನಸ್ಸಮಾಧಾನವಾಯಿತು.

ಜ್ವರ ಇಳಿದೊಡನೆಯೆ ಸ್ವಲ್ಪ ಸ್ವಲ್ಪ ಜ್ಞಾನ ಬಂತು, ವಸಂತುವಿಗೆ. ಪೂರ್ತಿ ಬತ್ತಿಹೋಗಿತ್ತು, ಅವಳ ದೇಹ. ಮಾತನಾಡಲು ಕೂಡ ಶಕ್ತಿ ಇಲ್ಲವೆನ್ನುವಂತೆ ತೋರುತ್ತಿತ್ತು. ಸೀನುವಾಗಲಿ, ಅಣ್ಣನಾಗಲಿ ಹಾಲು ಗಂಜಿ ಕುಡಿಸಲು ಹೋದರೆ ಗಲಾಟೆ ಮಾಡುತ್ತಿದ್ದಳು. ಒಂದು ಗುಟುಕು ಹಾಲನ್ನು ಅವಳು ನುಂಗುವಂತೆ ಮಾಡಲು ಅವರಿಗೆ ಶತಪ್ರಯತ್ನವಾಗುತ್ತಿತ್ತು. ಎಷ್ಟೆಷ್ಟು ಹೇಳಿದರೂ ವಸಂತು ಹಿಡಿದ ಹಟ ಬಿಡುತ್ತಿರಲಿಲ್ಲ. ಹಾಲು ಬೇಡ, ಗಂಜಿ ಬೇಡವೆಂದು ಆರಂಭವಾದ ಹಟ ಅವಳನ್ನು ಸುಸ್ತುಮಾಡಿಬಿಡುತ್ತಿತ್ತು. ಡಾಕ್ಟರಂತೂ ಎಲ್ಲರಿಗೂ ಎಚ್ಚರಿಕೆ ಕೊಟ್ಟಿದ್ದರು. "ಈಗ ಜ್ವರ ಇಳಿದಿದೆ, ವಿಪರೀತ ಸುಸ್ತಾದರೂ ಮತ್ತೆ ಜ್ವರ ಮರುಕಳಿಸಿಬಿಡುತ್ತದೆ. ಹಾಗೇನಾದರೂ ಟೈಫಾಯಿಡ್ ಜ್ವರ ಮರುಕಳಿಸಿದರೆ ಜೀವ ಉಳಿಯುವುದು ಬಹಳ ಕಷ್ಟ, ಹುಷಾರಾಗಿರಿ" ಎಂದು ಡಾಕ್ಟರು ಹೇಳಿದರು. ಈಗ ವಸಂತು ಮಾತ್ರ ಎಲ್ಲಕ್ಕೂ ಹಟ ಹಿಡಿಯುತ್ತಿದ್ದಳು. ಅವಳಿಗೆ ಒಂದೊಂದು ಚಮಚ ಔಷಧಿ ಕುಡಿಸುವುದೂ ಒಂದೊಂದು ಕೋಟೆ ಗೆದ್ದಂತಾಗುತ್ತಿತ್ತು. ಸೀನುವಿಗಂತೂ ಇದೊಂದು ದೊಡ್ಡ ಸಮಸ್ಯೆಯಾಗಿ ಕೂತಿತು. ಉಳಿದವರಿಗಿಂತಲೂ ಹೆಚ್ಚಾಗಿ ಅವನೇ ವಸಂತುವಿನ ಹತ್ತಿರ ಇರುತ್ತಿದ್ದುದು. ಅವಳ ಉಪಚಾರ, ಔಷಧಿಯನ್ನೆಲ್ಲ ಅವನೇ ನೋಡಿಕೊಳ್ಳುತ್ತಿದ್ದುದು. ಬಹಳ ಮೃದುವಾಗಿ "ನೋಡು, ವಸಂತು. ನೀನು ಕಾನ್ವೆಂಟಿಗೆ ಹೋಗಬೇಡವೆ. ಮೈ ಸರಿಯಾದರೆ ತಾನೆ ? ಎಲ್ಲಮ್ಮ, ಜಾಣೆ. ಈ ಔಷಧಿ ಕುಡಿದುಬಿಡು" ಎಂದು ಪುಸಲಾಯಿಸುತ್ತಿದ್ದ. ಆದರೆ ಅವಳು ಅದಕ್ಕೆಲ್ಲ ಜಗ್ಗುತ್ತಲೆ ಇರಲಿಲ್ಲ. "ನೋಡಮ್ಮ, ಈ ಹಾಲಷ್ಟು ಕುಡಿದುಬಿಡು. ಆಮೇಲೆ ನಿನಗೆ ಇನ್ನೇನೂ ಕೊಡುವುದಿಲ್ಲ" ಎಂದು ಒಳ್ಳೆಯ ಮಾತಿನಲ್ಲಿ ತಲೆ ನೇವರಿಸಿ ಹೇಳುತ್ತಿದ್ದ. ಆದರೆ ಅವಳು ಒಲ್ಲೆನೆಂದು ಮುಖ ತಿರುಗಿಸಿಕೊಳ್ಳುತ್ತಿದ್ದಳು. ಬಿರುಸಾಗಿ ಮಾತಾಡುವಂತಿಲ್ಲ. ಒಂದು ಸಾರಿ "ಕುಡೀತೀಯೆ ಇಲ್ಲವೆ" ಎಂದು ರಂಗಣ್ಣನವರು ಗದರಿಕೊಂಡುದಕ್ಕೆ ಗಡಗಡ ನಡುಗಿ ಅಳಲಾರಂಭಿಸಿಬಿಟ್ಟಿದ್ದಳು. ಅವಳನ್ನು ಮತ್ತೆ ಸಮಾಧಾನಗೊಳಿಸಲು ಸೀನು ಪಟ್ಟಪಾಡು ದೇವರಿಗೇ ಗೊತ್ತು! ಹೀಗಾಗಿ ವಸಂತುವಿನ ಪೋಷಣೆಯದೆ

ಒಂದು ಮಹಾಸಮಸ್ಯೆಯಾಗಿಬಿಟ್ಟಿತು. ಎಂಟು ದಿನದಿಂದಲೂ ಸುಡುವ ಜ್ವರದಲ್ಲಿ ಜ್ಞಾನವಿರಲಿಲ್ಲ. ಮಾತೇನೂ ಆಡಲು ತ್ರಾಣವಿರಲಿಲ್ಲ. ಈಗ ಕೊಂಚ ಶಕ್ತಿಯೂ ಬಂದಿತ್ತು. ವಸಂತು ಪುನಃ "ಅತ್ತಿಗೆ, ಅತ್ತಿಗೆ" ಎಂದು ಆರಂಭಿಸಿಬಿಟ್ಟಳು. ಸೀನು ಹಾಲು ಕುಡಿಸಲು ಹೋದಾಗ "ಹೋಗೊ, ನನಗೆ ಹಾಲು ಬೇಡ ಕಣೊ" ಎಂದು ಸರಿಸುತ್ತಿದ್ದಳು. "ನನ್ನ ಚಿನ್ನ, ನನ್ನ ರಾಸೆ ಕುಡಿಯಮ್ಮ" ಎಂದು ಪುಸಲಾಯಿಸಿದರೆ, "ಉಹುಂ! ಹಾಲು ಬೇಡ. ಅತ್ತಿಗೆ ಕಾಫಿ ಕೊಡತಾ ಇದ್ದಳು. ನೀನು ಕೆಟ್ಟವನು, ಹಾಲು ಕೊಡತೀಯ" ಎಂದು ಹಂಗಿಸಿ ಮುಖ ತಿರುಗಿಸಿಕೊಳ್ಳುತ್ತಿದ್ದಳು. ಮತ್ತೆ ಸೀನು ಬಲವಂತಪಡಿಸಿದರೆ "ಅತ್ತಿಗೆ ಬಂದರೇ ನಾನು ಕುಡಿಯೋದು" ಎಂದು ಹಟ ಮಾಡುತ್ತಿದ್ದಳು. ಬಲವಂತವಾಗಿ ಹಾಲನ್ನು ಬಾಯಿಗೆ ಬಿಟ್ಟು ನೋಡಿದ ಒಂದು ಸಾರಿ. ಅದನ್ನೆಲ್ಲ ಕಾರಿ ವಾಂತಿ ಮಾಡಿಕೊಂಡಿದ್ದಳು. ಆ ದಿನವೆಲ್ಲ ಅತ್ತು ಕರೆದು ಗೋಳಾಡಿದಳು. ಸೀನುವಿನ ಕಡೆಗೆ ತಿರುಗಲಿಲ್ಲ. "ಅತ್ತಿಗೆ, ಅತ್ತಿಗೆ" ಎಂದು ಪದೆ ಪದೆ ಮುಲುಗುಟ್ಟುತ್ತ ಅಳುತ್ತಿದ್ದಳು.

ಈ ಹತ್ತು ದಿನಗಳ ನೋವು ಸೀನುವನ್ನು ಹಣ್ಣಾಗಿಸಿತ್ತು. ಅತ್ತಿಗೆ ಇದ್ದಿದ್ದರೆ ಹೀಗೆಲ್ಲ ಆಗುತ್ತಿರಲಿಲ್ಲ, ಹಾಯಾಗಿರುತ್ತಿತ್ತು, ಎಂದು ಪದೆ ಪದೆ ಅವನ ಮನಸ್ಸಿಗೂ ಬರುತ್ತಿತ್ತು. ಆದರೆ ಹೋಗಿ ಹದಿನೇಳು ದಿನಗಳಾಗಿತ್ತೊ ಏನೊ. ಈಗ ಅತ್ತಿಗೆಯನ್ನು ಎಲ್ಲಿಂದ ತರುವುದು? ಆದರೆ ಅತ್ತಿಗೆ ಬಂದರೆ ಚೆನ್ನ. ಬರುವಳೊ ಇಲ್ಲವೊ! ಯಾರಿಗೆ ಗೊತ್ತು? ಇಷ್ಟು ದಿನವಾದರೂ ಒಂದು ಕಾಗದ ಕೂಡ ಹಾಕದಿದ್ದ ಅತ್ತಿಗೆ ಇನ್ನೆಲ್ಲಿ ಬರುತ್ತಾಳೆಂದು ಹೃದಯ ಗೋಳುಗುಟ್ಟಿತು. ಇನ್ನು ಅತ್ತಿಗೆಗೂ ಈ ಮನೆಗೂ ಸಂಬಂಧ ಕಡಿದು ಹೋದಂತೆಯೆ ಎಂದು ಮನವರಿಕೆಯಾಗಿ ಸೀನುವಿನ ಹೃದಯ ಬಿಕ್ಕಿಬಿಕ್ಕಿ ಅತ್ತಿತು. ತನ್ನಿಂದ ಈ ಮನೆಯ ಸುಖ, ತೃಪ್ತಿಯೆಲ್ಲ ಹಾಳಾಯಿತೆಂಬ ಭಾವನೆ, ತಾನು ಮಹಾಪರಾಧಿಯೆಂಬ ಸಂದೇಹ ಅವನ ಹೃದಯದಲ್ಲಿ ಈಗ ಬಲವಾಗಿ ಮೂಡಿತ್ತು. ಅಣ್ಣನಿಗೆ ಮುಖ ತೋರಿಸಲು ನಾಚಿಕೆಯಾಗುತ್ತಿತ್ತು. ತನ್ನಿಂದ ಅಣ್ಣನಂತಹ ಒಳ್ಳೆಯವರಿಗೂ ದುಃಖ ಬಂದೊದಗುವುದಲ್ಲ ಎಂದು ತನ್ನನ್ನು ತಾನೇ ಹಳಿದುಕೊಂಡ. ತಾಯಿ ಗಂಗಮ್ಮನವರಾಗಲಿ, ತಂದೆ ರಂಗಣ್ಣನವರಾಗಲಿ ಎದುರಿಗೆ ಒಂದು ಮಾತನ್ನು ಆಡದಿದ್ದರೂ ಅವರ ಮನಸ್ಸಿನಲ್ಲಿ ತನ್ನ

ಬಗ್ಗೆ ನಿರಾದರವಿದೆಯೆಂದು ಸೀನುವಿಗೆ ಖಚಿತವಾಗಿ ಅನಿಸಿತ್ತು. ಆ ಕ್ರಿಕೆಟ್ಟ್ಟು–ಅದೂ ಕಳೆಯಿತು. ಆದರೆ ಅತ್ತಿಗೆ ತಮ್ಮಿಂದ ದೂರವಾದಳು. ತನ್ನದೇ ತಪ್ಪು. ತಾನ್ನೇ ಆ ದಿನ ಸಂಯಮವಿಲ್ಲದೆ ಹುಚ್ಚುಹುಚ್ಚಾಗಿ ಆಡಿದುದು. ಆಗ ತಾನು ಹಾಗೆ ಕುಹಕವಾಗಿ, ವ್ಯಂಗ್ಯವಾಗಿ ಆಡದೆ ಇದ್ದಿದ್ದರೆ ಅತ್ತಿಗೆ ಹೋಗುತ್ತಿರಲಿಲ್ಲ. ತನ್ನ ಅಸಹನೆಯೆ ಎಲ್ಲಕ್ಕೂ ಕಾರಣವಾಯಿತೆಂದು ತನಗೆ ತಾನೇ ಛೀಮಾರಿ ಹಾಕಿಕೊಂಡ. ಆವೊತ್ತು ಅತ್ತಿಗೆ ಹೊರಟುನಿಂತಾಗ, ತಾಯಿ ತಡೆದಾಗ, ಅತ್ತಿಗೆ ಸಮಾಧಾನಗೊಂಡು ನಿಲ್ಲುತ್ತಿದ್ದಳು. ಆದರೆ ತಾನೇ ಕೆಣಕಿ, ಕೆಣಕಿ, ಮಾತಿನಿಂದ ಚುಚ್ಚಿ ಅವಳನ್ನು ಓಡಿಸಿದುದು. ತಾನು ಹಾಗೆ ಮಾಡಿದುದು ಬಹಳ ತಪ್ಪಾಯಿತು. ಸುಮ್ಮನಿದ್ದಿದ್ದರೆ ಏನೂ ಆಗುತ್ತಿರಲಿಲ್ಲವೆಂದುಕೊಂಡ. ಈ ಎಂಟು ದಿನಗಳು ಹಗಲು ರಾತ್ರಿಯ ಕಾಯಿಲೆ ಕಾವಲು ಅವನ ಮನಸ್ಸನ್ನು ಮಾಗಿಸಿತು. ಅತ್ತಿಗೆಯನ್ನು ತಾನು ಹಾಗಂದುದು ನೆನಪಾಗಿ ಅವನ ಬುದ್ಧಿ ಕಂಪಿಸುತ್ತಿತ್ತು. ಯಾರೋ ಬೆರಳಿಟ್ಟು ತನ್ನನ್ನೆ ನಿಟ್ಟಿಸಿದಂತೆನಿಸಿ ಎದೆ ಜಿಲ್ಲೆನುತ್ತಿತ್ತು. ಕೊನೆಗೆ ತಾನು ಮಾಡಿದುದು ತಪ್ಪೆಂದು ನಿರ್ಧರವಾಗಿತ್ತು.

ಈಗಂತೂ ಯಾವಾಗಲೂ ವಸಂತುವಿನ ಬಾಯಲ್ಲಿ ಅತ್ತಿಗೆಯ ಮಾತು. ಎರಡನೆಯ ದಿನವಂತೂ ಹಾಲು ಕುಡಿಯಲು ಒಂದು ಹಗರಣ ಮಾಡಿಬಿಟ್ಟಳು, ವಸಂತು. ಏನೇನು ಹೇಳಿದರೂ ಕುಡಿಯಲೆ ಇಲ್ಲ. ಆ ದಿನವೆಲ್ಲ ಪೂರ್ತಿ ಉಪವಾಸ. ಮಾತೆತ್ತಿದರೆ 'ಅತ್ತಿಗೆ, ಅತ್ತಿಗೆ' ಎಂದು ಕಣ್ಣೀರುಗರೆಯುತ್ತಿದ್ದಳು. ತಾಯಿ, ತಂದೆ, ಸೀನು, ದೊಡ್ಡಣ್ಣ ಎಲ್ಲರೂ ಎಷ್ಟೆಷ್ಟು ಪ್ರಯತ್ನಿಸಿದರೂ ವಸಂತು ಜಗ್ಗಲಿಲ್ಲ 'ಅತ್ತಿಗೆ, ಅತ್ತಿಗೆ' ಎಂದು ಹಿಡಿದ ಪಟ್ಟನ್ನು ಬಿಡಲೆ ಇಲ್ಲ. ಸುಸ್ತಾಗಿ ಮಧ್ಯಾಹ್ನ ನಿದ್ರೆಹೋದಳು. ಮತ್ತೆ ಎಚ್ಚರವಾದಾಗ ವಿಪರೀತ ಸುಸ್ತಾಗಿಹೋಗಿತ್ತು. ಮೈ ಕೊಂಚ ಬೆಚ್ಚಗಾದಂತಾಗಿತ್ತು. ಎಲ್ಲರಿಗೂ ಮತ್ತೆ ಗಾಬರಿಯಾಯಿತು. ಈಗಲೂ ಹಾಲು ಕುಡಿಯಲು ಹಟ ಮಾಡಿದಳು. ಕೊನೆಗೆ ವಳಲೆಯಲ್ಲಿ ಹಾಕಿಕೊಂಡು ಮೆಟ್ಟಿಕೊಂಡು ಕುಡಿಸಿದ ಸೀನು. ಅವನ ಮುಖದ ಮೇಲೆಲ್ಲ ಅವಳು ಬಾಯಿಂದ ಉಗಿದ ಹಾಲು ಬಿದ್ದಿತ್ತು. "ಹೋಗೊ, ನೀನು ತುಂಬಾ ಕೆಟ್ಟವನು, ಅತ್ತಿಗೆ, ಅತ್ತಿಗೆ" ಎಂದು ವಸಂತು ಅಳುತ್ತಲೆ ಇದ್ದಳು. ಸಂಜೆ ಡಾಕ್ಟರು ಬಂದು ನೋಡಿದರು. "ನೋಡಿ, ಶ್ರೀನಿವಾಸ್. ಬಹಳ ಸುಸ್ತಾಗಿದೆ ಮಗುವಿಗೆ" ಎಂದರು.

" ಬೆಳಿಗ್ಗೆಯಿಂದ ಹಾಲನ್ನೆ ಕುಡಿದಿಲ್ಲ. ಕುಡಿಯೋಲ್ಲ ಅಂತ ಹಟ ಮಾಡತಾಳೆ, ಡಾಕ್ಟರ್" ಎಂದ ಸೀನು.

" ಯಾಕಮ್ಮ, ಹಾಲು ಕುಡಿಯೋಲ್ಲ, ವೈ ಬೇಗ ಆರೋಗ್ಯವಾಗ ಬೇಕಾದರೆ ಹಾಲು ಕುಡೀಬೇಕು" ಎಂದರು ಡಾಕ್ಟರ್, ವಸಂತುವಿನ ಕಡೆ ತಿರುಗಿ.

" ಅತ್ತಿಗೆ ಕುಡಿಸಬೇಕು" ಎಂದಳು ವಸಂತು.

" ಆಗಲಮ್ಮ, ನಿಮ್ಮ ಅತ್ತಿಗೆ ಕುಡಿಸಿದರೆ ಕುಡೀತೀಯ–ಹೌದೆ? ಸರಿ" ಎಂದು ಡಾಕ್ಟರ್ ಹೊರಟರು.

ಸೀನುವಿಗೆ ಮತ್ತೆ ತಾಕಲಾಟ. ಡಾಕ್ಟರೇನೊ ಬಲು ಸುಲಭವಾಗಿ ಆಗಲಿ, ಸರಿ, ಎಂದುಬಿಟ್ಟರು. ಆದರೆ ಈಗ ಅತ್ತಿಗೆಯನ್ನು ಎಲ್ಲಿಂದ ತರುವುದು, ಈಗೇನು ಮಾಡುವುದು ಎಂದು ತೋಚಲಿಲ್ಲ. ಡಾಕ್ಟರು ಕೂಡ ಅತ್ತಿಗೆಯನ್ನು ಕರೆಯಿಸುವ ವಿಷಯವಾಗಿ ಒಂದು ಮಾತನ್ನೂ ಆಡಲಿಲ್ಲ, ಏನೂ ಸೂಚಿಸಲೂ ಇಲ್ಲ. " ಮಗು ಬಹಳ weak (ದುರ್ಬಲ). ಸರಿಯಾಗಿ ಆಹಾರ ಮೈಗೆ ಸೇರದಿದ್ದರೆ ಮತ್ತೆ ಮರುಕಳಿಸುತ್ತೆ. Relapse (ಮರುಕಳಿಕೆ) ಆದರೆ ಬಹಳ serious (ಪ್ರಯಾಸ). ಈವತ್ತು ಬಂದಿರುವುದು fever (ಜ್ವರ) ಅಲ್ಲ. ಆದರೆ ಹೀಗೆಯೆ ಇನ್ನೆರಡು ದಿನವಾದರೆ ಖಂಡಿತ relapse (ಮರುಕಳಿಕೆ) ಆಗುತ್ತೆ. ಹುಷಾರಿನಿಂದ ನೋಡಿಕೊಳ್ಳಿ" ಎಂದು ಹೊರಟುಹೋದರು.

ಆ ರಾತ್ರಿ ಹೇಗೊ ಕಳೆಯಿತು. ಬೆಳಿಗ್ಗೆ ಮತ್ತೆ ವಸಂತುವಿನೊಡನೆ ತಿಕ್ಕಾಟ. ಹಾಲು ತಂದಾಗ ಅವಳು " ಲೊ ಸೀನು, ನನಗೆ ರಾತ್ರಿ ಒಳ್ಳೆ ಕನಸು ಬಿತ್ತು. ಎಷ್ಟು ಚೆನ್ನಾಗಿತ್ತೂ ಅಂತ. ನಿನಗೆ ನಾನು ಹೇಳೋಲ್ಲ, ಹೋಗು. ನೀನು ಬಹಳ ಕೆಟ್ಟವನು. ಅತ್ತಿಗೆಗೆ ಹೇಳತೀನಿ ನಾನು. ಅತ್ತಿಗೆ ಬಂದಿದ್ದಳು ಕಣೊ, ಲೊ ಸೀನು. ಯಾವಾಗ ಬರತಾಳೊ ಅತ್ತಿಗೆ?" ಎಂದಳು. ಸೀನುವಿಗೆ ಮತ್ತೆ ತಬ್ಬಿಬ್ಬಾಯಿತು. ಏನು ಹೇಳಲೂ ತೋಚದೆ ಹಾಲಿನ ಲೋಟವನ್ನು ಕೆಳಗಿಟ್ಟು ಅವಳ ಹತ್ತಿರ ಕುಳಿತ.

" ಈ ಹಾಲು ಕುಡಿದುಬಿಡು, ವಸಂತು" ಎಂದು ಗೋಗರೆದ.

" ಉಹೂಂ" ಎಂದು ವಸಂತು ಹಿಡಿದ ಹಟ ಬಿಡಲೇ ಇಲ್ಲ. ಏನೇನು ಹೇಳಿದರೂ ವಸಂತು ಹಾಲು ಕುಡಿಯಲಿಲ್ಲ. ಕೊನೆಗೆ ಸೀನುವಿನ ಬಾಯಿಂದ

ತಾನೇತಾನಾಗಿ ಮಾತು ಹೊರಬಿತ್ತು. ಅವನು ಅದನ್ನು ಆಡಬೇಕೆಂದಿದ್ದನೊ ಇಲ್ಲವೊ ಅಂತೂ ಅವನ ಮನಸ್ಸಿನಲ್ಲಿದ್ದುದು ಅವನಿಗರಿವಿಲ್ಲದೆ ಬಾಯಿಂದ ಹೊರಬಿದ್ದಿತ್ತು.

" ಅತ್ತಿಗೆ ಬರತಾಳೆ, ಕುಡಿಯಮ್ಮ."

" ಯಾವಾಗಲೊ ಬರತಾಳೆ ? " ಎಂದಳು ಆಸಕ್ತಿಯಿಂದ ವಸಂತು. ಕಾಯಿಲೆಯಿಂದ ಕಂದಿದ ಮುಖದಲ್ಲೂ ಒಂದು ಹೊಳಪು ಬಂದು ಕೂಡಿ ಕೊಂಡಿತು.

" ನಾಳೆ ಬರತಾಳೆ. ನೀನು ಈಗ ಹಾಲು ಕುಡಿದರೆ ಬರತಾಳೆ, ಇಲ್ಲ ದಿದ್ದರೆ ಇಲ್ಲ."

" ಖಂಡಿತವಾಗಿಯೂ ಬರತಾಳೇನೊ ? "

" ಖಂಡಿತವಾಗಿಯೂ."

" ಇಲ್ಲ ಕಣೊ, ಸೀನು. ಸುಳ್ಳು ಹೇಳತೀಯ " ಎಂದು ಅಪನಂಬಿಕೆ ಯಿಂದ ಅಂದಳು ವಸಂತು.

" ನಿಜವಾಗೂ ಬರತಾಳೆ, ಕಣೆ. ಈಗ ನೋಡು, ನೀನು ಈಗ ಹಾಲು ಕುಡಿದುಬಿಡು " ಎಂದು ಹಾಲನ್ನು ಹತ್ತಿರ ತಂದ.

"ನನ್ನಾಣೆಗೂ ಬರತಾಳೇನೊ? " ಎನ್ನುತ್ತ ವಸಂತು ಹಾಲು ಕುಡಿಯಲು ಸಿದ್ಧವಾದಳು.

ವಸಂತುವಿನ ಮುಖ ಈಗ ಗೆಲುವಾಯಿತು. ಯಾವ ತೊಂದರೆ ಅಡ್ಡಿ ಇಲ್ಲದೆ ಈಗ ಸಲೀಸಾಗಿ ಹಾಲು ಕುಡಿದುಬಿಟ್ಟಳು. ಅವಳನ್ನು ನೋಡಿ ಸೀನು ವಿನ ಕಣ್ಣು ಹನಿಗೂಡಿ ಮಂಜಾಯಿತು.

೯

ರಾಜಣ್ಣ ರೈಲಿನಿಂದ ಮನೆಗೆ ಬಂದಾಗ ರೂಮಿನ ಒಂದು ಮೂಲೆಯಲ್ಲಿ ಲೀಲಾ ಕಣ್ಣೀರು ಹಾಕುತ್ತ ಕುಳಿತಿದ್ದಳು. ಅವನು ಒಳಕ್ಕೆ ಬಂದುದನ್ನು ಕಂಡೊ ಡನೆ ಅವಳ ಅಳು ಉಕ್ಕಿತು. ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಕಣ್ಣೀರು ಹರಿದು ಮಹಾಪೂರವಾಗಿಬಿಟ್ಟಿತು. ರಾಜಣ್ಣ ಅವಾಕ್ಕಾದ. ಏನಾಗಿದೆಯೆಂದು ಕೇಳಿದರೆ ಲೀಲಾ ಮಾತಾಡದೆ ಅಳುತ್ತ ಇದ್ದಳು. ರಾಜಣ್ಣನಿಗೆ ಮೊದಲೆ

ರಾತ್ರಿಯ ರೈಲಿನ ಪ್ರಯಾಣದಿಂದ ಬೇಸರವಾಗಿ ಹೋಗಿತ್ತು. ನಿದ್ರೆಯಿರಲಿ, ಕುಳಿತುಕೊಳ್ಳಲು ಕೂಡ ಸರಿಯಾಗಿ ಜಾಗ ಸಿಕ್ಕಲಿಲ್ಲ. ಅಲ್ಲದೆ ದಾರಿಯಲ್ಲಿ ಇವನು ಹೇಗೊ ಕಷ್ಟಪಟ್ಟು ಕುಳಿತುಕೊಳ್ಳಲು ಒಂದು ಜಾಗ ಮಾಡಿಕೊಂಡು ಕುಳಿತಾಗ, ತುಮಕೂರಿನ ಹತ್ತಿರ ಒಬ್ಬರು ಕಾಲನ್ನು ಭದ್ರವಾಗಿ ತುಳಿದು ಬಿಟ್ಟಿದ್ದರು. ಇದೆಲ್ಲ ಸಿಡುಕು ಮನಸ್ಸಿನಲ್ಲಿ ತುಂಬಿತ್ತು. ಜತೆಗೆ ಇಲ್ಲಿ ಮನೆಗೆ ಬಂದರೆ ಲೀಲಾ ಹೊರಗೆ ಕುಳಿತಿದ್ದಳು. ಅದೊಂದು ದೊಡ್ಡ ಪೆಟ್ಟು. ರಾಜಣ್ಣನ ಮನಸ್ಸಿನ ಸಮತೂಕ ತಪ್ಪಿಸಿತು. ಎಲ್ಲಕ್ಕು ಮಿಗಿಲಾಗಿ ಅಳುತ್ತ ಕುಳಿತಿದ್ದಳು, ಲೀಲಾ! ಎರಡು ದಿನ ರಜೆಯಿತ್ತೆಂದು ಹಾಸನದಿಂದ ಇಲ್ಲಿಗೆ ಬಂದರೆ ಇಲ್ಲಿ ಕೊಂಚವಾದರೂ ಸುಖದ ಉರುವು ಇಲ್ಲ. ತನ್ನ ಆಸೆಗಳೆಲ್ಲವನ್ನು ಮೂಟೆ ಕಟ್ಟಿ ಮೂಲೆಗೆಸೆಯಬೇಕೆಂದು ರಾಜಣ್ಣನಿಗೆ ಈಗ ತೋರಿತು. ಬೇಸರ ಸಿಡು ಕಾಯಿತು. ಲೀಲಾ ಗಂಡನಿಗೆ ಅಸಮಾಧಾನವಾಗಿರುವುದನ್ನು ಕಂಡವಳೇ ಹೆಚ್ಚು ಸಿರುಕಣೆ ಮಾಡದೆ ತನ್ನ ಅಳುವಿಗೆ ಕಾರಣ ಹೇಳಿದಳು. ಹೆಂಡತಿ ಬಿಕ್ಕಿಬಿಕ್ಕಿ ಅಳುತ್ತ ಹೇಳುವುದನ್ನು ಕೇಳಿದ ರಾಜಣ್ಣನ ಸಹನೆ ಪೂರ್ತಿ ಮೀರಿತು. ಬುದ್ಧಿ ಎಲ್ಲಿಯೋ ಬಚ್ಚಿಟ್ಟುಕೊಂಡಿತು. ಬಿರುಗಾಳಿಯಂತೆ ಮನೆಯಲ್ಲಿ ಎಲ್ಲರ ಮೇಲೆಯೂ ಎರಗಿದ. ಈ ಬಿರುಗಾಳಿಗೆ ಸಿಕ್ಕಿ ತತ್ತರಿಸಿದವಳೆಂದರೆ ಶಾಂತ!

ಶಾಂತ ಏಳುವಾಗಲೆ ಉಲ್ಲಾಸವಾಗಿ ಎದ್ದಳು. ತನಗೇಕೆ ಇಂದು ಈ ರೀತಿಯ ಸಂತೋಷವೆಂಬುದು ಅವಳಿಗೇ ತಿಳಿಯದು. ಎಲ್ಲಿಯೋ ಅಡಗಿಕೊಂಡಿದ್ದ ಅಂತರ್ವಾಹಿನಿ ಇದ್ದಕ್ಕಿದ್ದಂತೆ ಚಿಮ್ಮಿ ಮುಗಿಲಿಗೇರುವಂತೆ ಈತನಕ ಎಲ್ಲಿಯೊ ಅಡಗಿದ್ದ ಉಲ್ಲಾಸ ಬುಗ್ಗೆಯಾಗಿ ಚಿಮ್ಮಿತು. ಹೊಸದಾಗಿ ಮೊದಲ ಬಾರಿಗೆ ಕಣ್ಣು ತೆರೆದು, ಬೆಳಗಿನ ಹೊಂಬೆಳಕಿನಲ್ಲಿ ಎಲ್ಲವನ್ನೂ ಹೊನ್ನಾಗಿ ಕಾಣುವಂತೆ, ಅವಳ ಕಣ್ಣಿಗೆ ಎಲ್ಲ ಹೊನ್ನಾಗಿ ಕಾಣಿಸಿತು. ಈ ಉಲ್ಲಾಸ ಅಡಕಗೊಳ್ಳುವಂತಿರಲಿಲ್ಲ—ತಗ್ಗುವಂತೆಯೂ ಇಲ್ಲ. ಪ್ರಪಂಚವೆಲ್ಲ ಸುಂದರವಾಗಿ ತೋರುತ್ತಿತ್ತು. ರಾತ್ರಿ ಚೆನ್ನಾಗಿ ನಿದ್ರೆಬಂದಿತ್ತು. ಸುಖವಾಗಿ ನಿದ್ರಿಸಿದ ಶಾಂತಳ ಮನಸ್ಸಿಗೆ ಆದರಿಂದ ಇಷ್ಟು ದಿನ ಮಾಯವಾಗಿದ್ದ ಹಾಯಿ ಮತ್ತೆ ಸಿಕ್ಕಿತು. ಅಷ್ಟೇ ಅಲ್ಲ, ಅದಕ್ಕೂ ಮಿಗಿಲಾಗಿ ಹೇಳಲಾರದ, ತಾಳಲಾರದ ಹಿಗ್ಗು ರಕ್ತದಲ್ಲಿ ರಣಿತವಾಗುತ್ತಿತ್ತು. ಹಾಸಿಗೆಯಲ್ಲಿ ಎಚ್ಚರವಾಗಿ ಮಲಗಿ

ಕೊಂಡು ಕಣ್ಣು ತೆರೆದೇ ಕಾಣದ ಕನಸುಗಳನ್ನು ಕಟ್ಟಲಾರಂಭಿಸಿದ್ದಳು. ಮನಸ್ಸು ಈಗ ವಿಹ್ವಲಗೊಳ್ಳುತ್ತಿರಲಿಲ್ಲ. ನಾಳೆ—ತನ್ನ ಮಗುವಿನೊಂದಿಗೆ ಹೀಗೆ ಆಡುವೆ, ಹಾಗೆ ಆಡುವೆನೆಂದು ಕಲ್ಪನೆ ಕಟ್ಟಿ ಮನಸ್ಸು ತುಟಿಗೆ ನಗೆ ತಂದಿತ್ತು. ಇಂದಿನ ಈ ಕನಸಿನಲ್ಲಿ ತನ್ನ ಯಜಮಾನರೂ ಸೇರಿದ್ದರು. ಖಂಡಿತ ಪ್ರೀತಿಯ ಪ್ರತೀಕವಾದ ಅವರಿಂದ ತಾನೆಂದೂ ದೂರವಾಗಿಲ್ಲ, ದೂರವಾಗುವುದೂ ಇಲ್ಲವೆಂದು ಶಾಂತಳಿಗೆ ಅನಿಸಿತು. ಸುಮಾರು ಅರ್ಧ ಗಂಟೆ ಹಜಾರದಲ್ಲಿ ತಂಗಾಳಿಯಲ್ಲಿ ಹಾಯಾಗಿ ಹೊದ್ದುಕೊಂಡು ಎಚ್ಚರವಾಗಿ ಮಲಗಿದ್ದಳು. ಅಕಾರಣವಾಗಿ ಬಂದ ಉಲ್ಲಾಸ ಅವಳಿಗೇ ಅಚ್ಚರಿಯಾಗಿತ್ತು. ಸಾವಿತ್ರಮ್ಮನವರು ಬಂದು ಒಂದೆರಡು ಸಾರಿ ಮಗಳ ಕಡೆ ನೋಡಿ ಒಳಕ್ಕೆ ಹೋದರು. ಈಗ ಮೂರನೆಯ ಸಾರಿ ಅವರು ಬಂದು ಕೂಗಿದಾಗ ಈ ಬಿಚ್ಚುಗಣ್ಣಿನ ಕನಸಿನಿಂದ ಶಾಂತಳಿಗೆ ಎಚ್ಚರ. ಬೇಗಬೇಗನೆ ಎದ್ದು ಬಚ್ಚಲುಮನೆಗೆ ಹೋಗಿ ಮುಖ ತೊಳೆದು ಬಂದಳು. ಕಾಫಿಯನ್ನು ಕುಡಿಯಬೇಕೆಂದುಕೊಂಡಾಗ ಅನಂತರಾಮುವಿನ ಅಳುವಿನ ದನಿ ರೂಮಿನಿಂದ ಕೇಳಿಬಂತು.

ಶಾಂತಳಿಗೆ ಆ ಅಳುವಿನಿಂದ ಮನಸ್ಸು ಕಲ್ಲೋಲವಾಯಿತು. ಈವರೆಗಿನ ಉಲ್ಲಾಸದ ಕೊಳಕ್ಕೆ ಕಲ್ಲೆಸೆದಂತಾಗಿತ್ತು. ಅನಂತುವನ್ನು ಈಗ ತಾನು ಕರೆತಂದು ಮುದ್ದಾಡಬೇಕು, ಅವನಿಗೆ ಕಾಫಿ ಕುಡಿಸಬೇಕು ಎಂದು ಅವಳ ಮನಸ್ಸು ಒದ್ದಾಡಿತು. ಆದರೆ ಲೀಲಾ ಮತ್ತೆ ಬಿರುಸಾಗಿ ತಿರುಗಿಬಿದ್ದರೆ! ತನ್ನಣ್ಣ ರಾಜಣ್ಣನೆ ಅವಳಿಗೆ ಹೇಳಿದ್ದ—ತನ್ನ ಕೈಗೆ ಅನಂತುವನ್ನು ಕೊಡಬೇಡವೆಂದು. ತಾನೇನು ಅಷ್ಟು ಕೆಟ್ಟವಳೆ?—ತನ್ನ ಅಣ್ಣನಾದವನೆ ತನ್ನನ್ನು ಹೀಗೆ ಸೋಂಕು ರೋಗದವಳಂತೆ ದೂರವಿಟ್ಟನಲ್ಲ ಎಂದು ಮನಸ್ಸು ಬಹಳ ಮಿಡುಕಿತು. ಹೃದಯದ ಭಾವನೆಗಳೆಲ್ಲ ತೊಡರಿಕೊಂಡವು. ಉಲ್ಲಾಸ ಮಾಯವಾಗಿ ಮತ್ತೆ ಉದಾಸ ಮೂಡಿತು. ತನ್ನ ಜನ್ಮ ಇಷ್ಟಕ್ಕೆ ಆಯಿತೆ—ಇನ್ನು ಎಲ್ಲಿಗೊಯ್ಯುವುದೊ ಎಂದು ನೊಂದಿತು. ಚುಕ್ಕಾಣಿಯಿಲ್ಲದ ನೌಕೆಯಂತೆ ಎಲ್ಲಿಗೆ ಸಾಗೀತೊ ತನ್ನ ಬಾಳು ಎಂದು ಒದ್ದಾಟ ಎದ್ದಿತು. ಆದರೆ ಸರಸಿ ಹೇಳಿದಂತೆ ತಾನು ತಪ್ಪು ಮಾಡಿದುದು ನಿಜ. ತಾನಾಗಿಯೆ ತನ್ನ ಜೀವವನ್ನು ಹರಿಬಿಟ್ಟಂತಾಗಿತ್ತು. ಮತ್ತೆ ಯಾರನ್ನಂದು ಏನು ಫಲ? ತನ್ನ ಕರ್ಮಫಲವನ್ನು ತಾನನುಭವಿಸಲೇಬೇಕೆಂದು ಮನಸ್ಸಿನ ನೋವಿಗೆ ಸಮಾಧಾನ

ಹೇಳಲು ಯತ್ನಿಸಿಕೊಂಡಳು. ಅನಂತರಾಮುವಿನ ಅಳು ಇನ್ನೂ ಜೋರಾಗಿ ಕೇಳಲಾರಂಭಿಸಿತು. ಅವನನ್ನೆತ್ತಿಕೊಳ್ಳಬಾರದೆನ್ನುವ ಛಲ ಒಂದು ಕಡೆ, ಮತ್ತೊಂದು ಕಡೆ ಮಗುವಿನ ಕಡೆ ಎಳೆಯುತ್ತಿದ್ದ ಪ್ರೀತಿಯ ಸೆಳೆತ ಇವೆರಡರ ನಡುವೆ ಅವಳ ಹೃದಯ ಹೊಯ್ದಾಡಿತು. ಹಿಂದಿನ ದಿನದ ಹಗರಣದನಂತರ ಮಗುವನ್ನೆತ್ತಿಕೊಳ್ಳುವ ಗೋಜಿಗೆ ಅವಳು ಹೋಗಿರಲಿಲ್ಲ. ಅನಂತರಾಮು ವೇನೊ ಮೂರು ನಾಲ್ಕು ಬಾರಿ ಹತ್ತಿರ ಬಂದಿದ್ದ. ಆದರೆ ಶಾಂತ ತಾನಾಗಿಯೆ ಅವನನ್ನು ದೂರವಿಟ್ಟಳು. 'ಅತ್ತೆ, ಕತ್ತೆ—ಮುಮು, ಮಮು' ಎಂದು ಹತ್ತಿರ ಬರುತ್ತಿದ್ದ ಮಗುವನ್ನು ತಿರಸ್ಕಾರ ಮಾಡುವುದು ಅವಳ ಕೊರಳಿಗೆ ಕುತ್ತು ಬಂದಂತೆ ಆಗುತ್ತಿತ್ತು. ಕರುಳು ಕಿತ್ತು ಕೈಗೆ ಕೊಟ್ಟಂತಾಗುತ್ತಿತ್ತು. ಆದರೆ ಬಹಳ ಕಷ್ಟದಿಂದ ತನ್ನ ಕರುಳಿನ ಈ ಕಲಕಾಟವನ್ನು ತಡೆದುಕೊಂಡು ಮುಖ ವನ್ನು ಆ ಕಡೆ ತಿರುಗಿಸಿಕೊಳ್ಳುತ್ತಿದ್ದಳು. ತಾನು ಅವನನ್ನೆತ್ತಿಕೊಂಡರೆ, ಪಾಪ, ಅವನಿಗೆ ಏಟು ಬೀಳುತ್ತದೆ, ತನ್ನ ತಪ್ಪಿನಿಂದ ಅವನಿಗೆ ಏಟು ಬೀಳ ದಿರಲಿ ಎಂದು ಯೋಚಿಸಿಕೊಂಡಳು. ಹೃದಯ ಮಗುವಿನ ಕಡೆ ತುಯ್ಯುತ್ತಿತ್ತು. ಆದರೆ ಆ ಸೆಳೆತಕ್ಕೆ ಮಗುವನ್ನು ಬಲಿಕೊಡಲು ಅವಳು ಸಿದ್ಧವಿರಲಿಲ್ಲ. ಒಂದು ಬಾರಿಯಂತೂ ಅನಂತರಾಮುವನ್ನೆತ್ತಿಕೊಳ್ಳದೆ ಇರುವುದು ಬಹಳ ಕಷ್ಟವಾಗಿ ಹೋಗಿತ್ತು. ಶಾಂತ ಹಿಂದಿನ ರಾತ್ರಿ ಊಟ ಮಾಡಿ ಹಾಸಿಗೆ ಹಾಸಿಕೊಂಡು ಕುಳಿತಿದ್ದಳು. ಬೆಳಿಗ್ಗೆ ಸರಸಿಯ ಮಾತುಗಳನ್ನು ಕೇಳಿದಮೇಲೆ ಒಂದು ಬಗೆಯ ಸಮಾಧಾನ ಜೀವವನ್ನು ಆವರಿಸಿತ್ತು. ಮೊದಲಿದ್ದ ಕತ್ತಲೆ ಕರಗು ವಂತೆ ತೋರುತ್ತಿತ್ತು. ಊಟ ಮಾಡಿದೊಡನೆ ವಾಕರಿಕೆಗೆ ಬಂದುದರಿಂದ ಅಡಿಕೆಯ ತಟ್ಟೆಯನ್ನು ಮುಂದೆ ಇಟ್ಟುಕೊಂಡು, ಒಂದೆರಡು ಕಾಳು ಅಡಿಕೆ ಯನ್ನು ಬಾಯಿಗೆ ಹಾಕಿಕೊಂಡಳು. ಸಾವಿತ್ರಮ್ಮನವರು ವೀಳೆಯದೆಲೆ ಹಾಕಿ ಕೊಳ್ಳಲಿ ಎಂದು ಎಲೆಯನ್ನು ತಂದಿಟ್ಟರು. ಇದ್ದಕ್ಕಿದ್ದಂತೆ ಅನಂತರಾಮು ತಾಯಿಯ ಹಿಡಿತದಿಂದ ತಪ್ಪಿಸಿಕೊಂಡು ಓಡಿಬಂದು, ಅಡಿಕೆಯ ತಟ್ಟೆಗೆ ಕೈ ಹಾಕಿದ. ಶಾಂತ ತಕ್ಷಣ "ಹಾಂ! ಹಾಂ! ತುಂಟ ಮರಿ, ಅಡಿಕೆ ಚೆಲ್ಲ ತೀಯಾ" ಎಂದು ಕೈ ಹಿಡಿದುಕೊಳ್ಳಲು ಯತ್ನಿಸಿದಳು. ಅತ್ತೆ ತನ್ನನ್ನು ಮಾತಾಡಿಸಿದಳಲ್ಲ ಎಂದು ಅನಂತುವಿಗೆ ಬಹಳ ಹಿಗ್ಗಾಯಿತು. ಒಂದು ಕೈಯಲ್ಲಿ ಅಡಿಕೆ ಹಿಡಿದಿದ್ದ. ಅದನ್ನು ಶಾಂತ ಬಿಡಿಸಲು ಬಗ್ಗಿದಾಗ ಇನ್ನೊಂದು

ಕೈಯಲ್ಲಿ ಅವಳ ಸೆರಗು ಹಿಡಿದುಬಿಟ್ಟ. ಜಗ್ಗುತ್ತ ಅವಳ ಕಡೆ ಬಾಗಿದ. ಶಾಂತಳಿಗೆ ಇದು ಬಹಳ ಹಿತವಾಯಿತು. ಆದರೆ ಮಗುವನ್ನೆತ್ತಿಕೊಂಡು ಮುದ್ದಾಡುವ ಆಸೆ, ಅವನಿಗೆಲ್ಲಿ ಏಟು ಬೀಳುವುದೊ ಎಂಬ ಹೆದರಿಕೆಯಿಂದ ಹಿಂದೆಗೆಯಿತು. ಕೈಯಲ್ಲಿದ್ದ ಅಡಿಕೆಯನ್ನು ಬಿಟ್ಟು ಅನಂತರಾಮು ಶಾಂತಳನ್ನು ತಬ್ಬಿಕೊಳ್ಳಲು ಯತ್ನಿಸಿದ. ಆ ಗಳಿಗೆಯಲ್ಲಿ ಶಾಂತ ಮಗುವಿಗೆ ಪೂರ್ತಿ ಮನಸೋತಳು. ಇನ್ನೇನು ಅವನನ್ನು ಮುತ್ತಿಡಬೇಕೆನ್ನುವಷ್ಟರಲ್ಲಿ ಲೀಲಾ ರೂಮಿನಿಂದ ಹೊರಕ್ಕೆ ಬಂದುಬಿಟ್ಟಳು. ಶಾಂತ ತಬ್ಬಿಬ್ಬಾದಳು. • ತಕ್ಷಣ ಹಾವು ಕಂಡವಳಂತೆ ಬೆಚ್ಚಿದಳು. ಅನಂತರಾಮುವಿನ ಹಿಡಿತ ತಪ್ಪಿಸಿಕೊಳ್ಳಲು ಯತ್ನಿಸಿದಳು. ಸೆರಗನ್ನು ಹಿಡಿದಿದ್ದ ಅವನು ಬಿಡಲೇ ಇಲ್ಲ. ಲೀಲಾ ಬಂದು ಕಿತ್ತು ಎತ್ತಿಕೊಂಡು ಹೋದಳು. ಆದರೆ ಏನೊ ಪುಣ್ಯವಶಾತ್, ಲೀಲಾ ಮಗುವಿಗೆ ಹೊಡೆಯಲಿಲ್ಲ. ಈಗ ಅನಂತರಾಮು ರೂಮಿನಲ್ಲಿ ಅಳುತ್ತಿದ್ದ. ಅವನ ಅಳುವಿನಿಂದ ಶಾಂತಳ ಮನಸ್ಸು ಕಲಕಿತು. ಏನು ಮಾಡುವುದೂ ತೋಚಲಿಲ್ಲ. ಹೇಗೆ ತನ್ನ ಮನಸ್ಸಿನ ಕಳವಳವನ್ನು ತಗ್ಗಿಸುವುದೊ ಅವಳಿಗೆ ತಿಳಿಯಲಿಲ್ಲ. ಕಾಫಿಯನ್ನೆತ್ತಿಕೊಂಡ ಅವಳ ಕೈ ಮೇಲಕ್ಕೆ ಬಾಯಿಯ ಕಡೆ ಹೋಗಲೆ ಒಲ್ಲದು. ಅನಂತುವಿನ ಅಳು ಕಡಿಮೆಯಾಗಿದ್ದರೆ ಶಾಂತ ಸುಮ್ಮ ನಿರಬಹುದಾಗಿತ್ತು. ಆದರೆ ನಿಮಿಷ ನಿಮಿಷಕ್ಕೂ ಅವನ ಅಳು ಹೆಚ್ಚುತ್ತ ಹೋಯಿತು ಕೊನೆಗೆ ಶಾಂತಳಿಗೆ ತಡೆಯಲಾಗಲಿಲ್ಲ. ಕಾಫಿಯ ಲೋಟವನ್ನು ಕೆಳಗಿಟ್ಟು ರೂಮಿಗೆ ಹೊರಟುಬಿಟ್ಟಳು.

ಅನಂತರಾಮು ಅದೇತಾನೆ ಎದ್ದು ಕಣ್ಣೊರಸಿಕೊಳ್ಳುತ್ತ ಅಳುತ್ತಿದ್ದ. ಲೀಲಾ ಎದ್ದು ಮೂಲೆಯಲ್ಲಿ ನಿಂತಿದ್ದಳು. ಹಾಸಿಗೆಯ ಮೇಲಿದ್ದ ಅನಂತು ವನ್ನು ಅವಳು ಬಂದು ಎತ್ತಿಕೊಳ್ಳುವಂತಿರಲಿಲ್ಲ. ಆದರೆ ಶಾಂತಳನ್ನು ಕರೆಯಲು ಕೂಡ ಅವಳಿಗೆ ಇಷ್ಟವಿರಲಿಲ್ಲ. ಹೀಗಾಗಿ ಅನಂತುವನ್ನು ಬರಿ ಮಾತಾಡಿ ಸಮಾಧಾನಗೊಳಿಸಲು ಯತ್ನಿಸಿದಳು. ದಿನವೂ ಎದ್ದೊಡನೆ ಎತ್ತಿಕೊಂಡು ಒಳ್ಳೆಯ ಮಾತಾಡಿ ಕಾಫಿ ಕುಡಿಸುತ್ತಿದ್ದು, ಅದೇ ಅನಂತುವಿಗೆ ಅಭ್ಯಾಸವಾಗಿ ಹೋಗಿತ್ತು. ಲೀಲಾ ದೂರದಿಂದಲೆ ಮಾತನಾಡಿಸಿದುದು ಅವನಿಗೆ ಈಗ ಸಾಕಾಗಲಿಲ್ಲ. ಅಷ್ಟೇ ಅಲ್ಲದೆ, ಅವನಿಗೆ ಅದೊಂದು ದೊಡ್ಡ ಕೊರತೆಯಾಗಿ ತೋರಿತು. ನಿದ್ರೆಯಿಂದೆದ್ದೊಡನೆ ಅಳಲಾರಂಭಿಸಿದ್ದ, ಅತ್ತೊಡನೆಯೆ

ಯಾರಾದರೂ ಬಂದು ಎತ್ತಿಕೊಳ್ಳಬೇಕಾಗಿತ್ತು, ಅದರ ಬದಲು ಬರಿಯ ಮಾತು ಮಾತ್ರ ಕೇಳಿತು. ಇದರಿಂದ ಅವನ ಮನಸ್ಸಿಗೆ ಏನೋ ಆತಂಕ ವಾಯಿತು. ತನ್ನನ್ನೆತ್ತಿಕೊಳ್ಳದೆ ದೂರದಲ್ಲಿ ನಿಂತು ಮಾತಾಡುವಳಲ್ಲ ತನ್ನ ತಾಯಿ ಎಂದು ದುಃಖ ಹೆಚ್ಚಿ, ಅಳು ಏರಿತು. ಲೀಲಾ ಅವನನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದಷ್ಟೂ ಅವನ ಅಳು ಜೋರಾಯಿತು. "ಅಳಬೇಡ, ಬಾರೊ ಇಲ್ಲಿ, ನನ್ನ ಹತ್ತಿರ ಬಾರೊ" ಎಂದು ಕೂಗಿ ಕೂಗಿ ಲೀಲಳಿಗೂ ಸಹನೆ ಮೀರಿತು. "ಬಾ ಅಂದರೆ ಬರದೆ ಅಳತೀಯಲ್ಲ, ಹಾಳಾಗಿ ಹೋಗು" ಎಂದು ಲೀಲಾ ಗೊಣಗುವ ಹೊತ್ತಿಗೆ ಶಾಂತ ರೂಮಿಗೆ ಕಾಲಿಟ್ಟಳು.

ಲೀಲಳ ಮಾತು ಕೇಳಿ ಶಾಂತಳಿಗೆ ಬೇಸರವಾಯಿತು. ಅತ್ತಿಗೆ ಎಂತಹ ಕೆಟ್ಟ ಮಾತಂದಳು. ಮಗು ಇನ್ನೂ ಈಗ ಏಳುತ್ತಿದೆ, ಅದಕ್ಕಿನ್ನೂ ನಿದ್ರೆಯ ಜೊಂಪು; ಆದ್ದರಿಂದ ಹಾಗೆ ಹಟ ಹಿಡಿಯುತ್ತಿದೆ. ಅದನ್ನು ಹಾಗೆ ಹಾಳಾಗಿ ಹೋಗೆಂದು ಬಯ್ಯಬಹುದೆ? ಅಷ್ಟೊಂದು ಜ್ಞಾನ ಬೇಡವೆ ಅತ್ತಿಗೆಗೆ ಎಂದು ಶಾಂತ ನೊಂದುಕೊಂಡಳು. ತಾನೇ ಮುಂದೆ ಬಂದು ಅನಂತರಾಮುವನ್ನು ಎತ್ತಿಕೊಂಡಳು. "ಬಾರೊ ಮರಿ, ನನ್ನ ಹತ್ತಿರ ಬಾಮ್ಮ. ಅಳಬೇಡವೊ, ನನ್ನ ರಾಜ. ನನ್ನ ದೊರೆಗೆ ಈಗ ಎಚ್ಚರವಾಯಿತೇನೊ? ಅಳಬೇಡ, ಮರಿ–ಅಳಬೇಡಮ್ಮ" ಎನ್ನುತ್ತ ಅವನನ್ನು ತಬ್ಬಿಕೊಂಡು ಸಮಾಧಾನಗೊಳಿಸಲು ಯತ್ನಿಸಿದಳು. ಅತ್ತಿಗೆಯನ್ನು ಒಮ್ಮೆ ನೋಡಿ "ಯಾವಾಗ, ಲೀಲಾ?" ಎಂದಳು. ಲೀಲಾ ಸೊಟ್ಟಮೋರೆ ಮಾಡಿಕೊಂಡು "ಈಗ ಸ್ವಲ್ಪ ಹೊತ್ತಿನಲ್ಲಿ" ಎಂದಳು. ಅವಳಿಗೆ ಮಾತಾಡುವುದು ಬೇಕಿಲ್ಲವೆಂದು ಸ್ಪಷ್ಟವಾಗಿ ಮುಖದಲ್ಲಿ ತೋರಿತು. ಮಗುನ್ನೆತ್ತಿಕೊಂಡು ಶಾಂತ ರೂಮಿನಿಂದ ಹೊರಕ್ಕೆ ಹೊರಡಲು ಅನುವಾದಳು. ಲೀಲಳಿಗೆ ಇದು ತನಗಾದ ಅವಮಾನವೆನಿಸಿತು. ತನ್ನ ಮಗುವನ್ನು ಅವಳು ಎತ್ತಿಕೊಳ್ಳಲಾಗದೆಂದು ಎಷ್ಟೋ ಸಾರಿ ಹೇಳಿಯಾಗಿತ್ತು. ಆದರೆ ಅದೊಂದು ಮಾತಿಗೂ ಬೆಲೆ ಕೊಡದೆ ಹೀಗೆ ಬೆಳಿಗ್ಗೆ ಎದ್ದೊಡನೆ ತನ್ನನ್ನು ಕೇಳಿಯೂ ಕೇಳದೆ ಅನಂತರಾಮುವನ್ನು ಎತ್ತಿಕೊಂಡು ಹೊರಟು ಬಿಟ್ಟಳಲ್ಲ ಶಾಂತ ಎಂದು ಕೋಪ ಬಂತು. ತನ್ನ ಮಗು ಈ ತನಕ ಅಳು ತ್ತಿತ್ತು. ಈಗ ಶಾಂತ ಎತ್ತಿಕೊಂಡುದರಿಂದ ಅದರ ಅಳು ನಿಂತಿತು. ತಾನೀಗ ಹಾಗೆಯೆ ಅದನ್ನೆತ್ತಿಕೊಳ್ಳುವಂತಿಲ್ಲ ಎಂಬುದು ತಿಳಿದೂ ತಿಳಿದೂ ಲೀಲಾ

ಸಿಡುಕಾದಳು. ಎಲ್ಲ ಬಿಟ್ಟು, ತಾನೀಗಲೆ ಹೊರಗಾಗಬೇಕೆ? ತನ್ನ ಈ ಅಸಹಾಯ ಸ್ಥಿತಿಯಿಂದಲೆ ಲೀಲಳಿಗೆ ಶಾಂತಳ ಮೇಲೆ ಸಿಡುಕು ಹೆಚ್ಚಲು ಕಾರಣವಾಯಿತು. ಅಂತೂ ಈಗ ಶಾಂತ ಹೊರಕ್ಕೆ ಮಗುವನ್ನು ಕರೆದು ಕೊಂಡು ಹೋಗಲು ಬಿಡಕೂಡದು ಎನಿಸಿತು. ಅದೂ ಅಲ್ಲದೆ, ಈ ದಿನ ರಾಜಣ್ಣ ಬೇರೆ ಬರುವ ದಿನ. ರಾಜಣ್ಣ ರೈಲಿನಲ್ಲಿ ಬಂದು ಮನೆಗೆ ಕಾಲಿಟ್ಟಾಗ ಮಗು ಶಾಂತಳ ಹತ್ತಿರವಿದ್ದುದನ್ನು ಕಂಡರೆ ಬಹಳ ಕೋಪಗೊಳ್ಳುವನು. ಆ ಕೋಪವೆಲ್ಲ ತನ್ನ ಮೇಲೆ ತಿರುಗುವುದೇನೊ ಎಂದು ಲೀಲಳಿಗೆ ಭಯ. ಹೀಗಾಗಿ ಲೀಲಾ ಶಾಂತಳ ಕಡೆ ತಿರುಗಿ "ಅವನನ್ನು ಇಲ್ಲಿ ಕೊಡು" ಎಂದಳು.

ಅನಂತರಾಮುವನ್ನು ಎತ್ತಿಕೊಳ್ಳುವ ಮೊದಲು ಹಿಂದುಮುಂದು ನೋಡಿದ್ದಳು ಶಾಂತ. ಆದರೆ ಈಗ ಲೀಲಾ ಹೊರಗೆ ಕುಳಿತಳೆಂದಮೇಲೆ ಅನಂತುವಿಗೆ ತಾನೇ ಎಲ್ಲ ಮಾಡಬೇಕು ಎಂದು ಶಾಂತಳಿಗೆ ಗೊತ್ತು. ಅಲ್ಲದೆ ಅವನ ಅಪ್ಪುಗೆಯಲ್ಲಿ ಒಂದು ಬಗೆಯ ಹಾಯಿ, ಸುಖ ಕಾಣುತ್ತಿತ್ತು. ಈಗ ಅವನನ್ನು ಕೆಳಕ್ಕಿಳಿಸಲು ಅವಳಿಗೆ ಇಷ್ಟವಾಗಲಿಲ್ಲ. ಇನ್ನು ಮೂರು ದಿನವಂತೂ ತನ್ನ ತೋಳಿನಲ್ಲಿ ಕಳೆಯುತ್ತಾನೆಂದು ಹಿಗ್ಗು ಒಳಗೇ ಹರಿದು ಉಲ್ಲಾಸಕ್ಕೆ ಬೆರೆತುಕೊಂಡಿತ್ತು. ಈಗ ಅತ್ತಿಗೆಯ ಮಾತು ಕೇಳಿ ಅಚ್ಚರಿ ಯಾಗದಿದ್ದರೂ ಬೇಸರವೆ ಆಯಿತು. "ಯಾಕೆ ಅತ್ತಿಗೆ, ಈಗ ತಾನೆ ಎದ್ದಿದ್ದಾನೆ. ಮುಖ ಒರಸಿ ಕಾಫಿ ಕುಡಿಸುತ್ತೇನೆ. ಆಮೇಲೆ ಮಡಿ ಉಡಿಸಿ—" ಎಂದು ಸಮಾಧಾನ ಹೇಳಲು ಯತ್ನಿಸಿದಳು.

ಆದರೆ ಲೀಲಾ ಅವಳ ಮಾತನ್ನು ಮುಗಿಸಲು ಬಿಡಲೆ ಇಲ್ಲ. ಮಧ್ಯೆ ಬಾಯಿ ಹಾಕಿ ಸಿಡುಕಿನಿಂದ "ಏನೂ ಬೇಡ. ಒಂದೆರಡು ದಿನ ಮಡಿ ಇಲ್ಲದಿದ್ದರೆ ಏನೂ ನಷ್ಟವಿಲ್ಲ. ನನ್ನ ಹತ್ತಿರದಲ್ಲೆ ಇರತಾನೆ. ನಾನೇ ಕಾಫಿ ಕುಡಿಸತೀನಿ" ಎಂದಳು.

ಅತ್ತಿಗೆಯ ಈ ವಿತಂಡತರ್ಕದಿಂದ ಶಾಂತಳಿಗೆ ಇನ್ನೂ ಬೇಸರವಾಯಿತು. "ಯಾಕೆ, ಅತ್ತಿಗೆ. ನಾನು ಕಾಫಿ ಕುಡಿಸಿದರೆ ಅದೇನು ವಿಷವಾಗುತ್ತೆಯೆ? ನಾನಿನ್ನೂ ಅಷ್ಟೊಂದು ಕೆಟ್ಟಿಲ್ಲ" ಎಂದಳು ವಿಷಾದದ ದನಿಯಲ್ಲಿ.

ಅವಳ ಈ ಮಾತಿನಿಂದ ಲೀಲಳೂ ನೊಂದುಕೊಂಡಳು. ಆ ಗಳಿಗೆಯಲ್ಲಿ ಶಾಂತಳ ಬಗ್ಗೆ ಮತ್ತೆ ಮರುಕ ತೋರಿತೊ ಏನೊ, ಅಂತೂ ಮತ್ತೇನೂ

ಮಾತಾಡದೆ ಸುಮ್ಮನಾಗಿಬಿಟ್ಟಳು. ಶಾಂತ ಅತ್ತಿಗೆಯ ಮುಖ ನೋಡಿದಳು. ತುಟಿ ಉರುಗುಟ್ಟುತ್ತಿತ್ತು. ಆದರೆ ಯಾವ ಮಾತೂ ಬಾರದಿರಲು, ಇನ್ನೇನು ಮಾತು, ಎಂದು ಮಗುವನ್ನೆತ್ತಿಕೊಂಡು ಹೊರಟುಹೋದಳು.

ಲೀಲಳಿಗೂ ಎದ್ದೊಡನೆ ಕಾಫಿ ಕುಡಿದು ಅಭ್ಯಾಸ. ಎಷ್ಟು ಹೊತ್ತು ಕಾದರೂ ಶಾಂತ ಬಾರದಿರಲು ಅವಳಿಗೆ ಮತ್ತೆ ಸಿಡುಕು ಆರಂಭವಾಯಿತು. ಶಾಂತಳದೂ ತಪ್ಪಿರಲಿಲ್ಲ. ಮಗುವಿಗೆ ಮುಖ ತೊಳೆದು ಒರಸಿ, ಸಮಾಧಾನ ಮಾಡಿ, ಅನಂತರ ಲೋಟದಲ್ಲಿ ಕಾಫಿ ಹಾಕಿಕೊಂಡು ಬಂದು, ಹಜಾರದಲ್ಲಿ ರೂಮಿನ ಬಾಗಿಲ ಬಳಿ ಇಟ್ಟಳು. ಇನ್ನೊಂದು ಲೋಟದಲ್ಲಿ ಕಾಫಿ ತಂದು ಅತ್ತಿಗೆಯ ಹತ್ತಿರ ಇಟ್ಟು "ತಗೊ ಅತ್ತಿಗೆ, ಈ ಲೋಟವೇ ಇರಲಿ" ಎಂದಳು. "ಇಲ್ಲಿ ಕೂತುಕೊ ಮರಿ, ನಿನ್ನ ಗಿಂಡಿ ತರತೀನಿ" ಎಂದು ಹೇಳಿ ಅನಂತರಾಮುವನ್ನು ಹಜಾರದಲ್ಲಿ ಕೂಡಿಸಿ ಒಳಕ್ಕೆ ಹೋದಳು. ಕಾಫಿ ಬಹಳ ಬಿಸಿಯಾಗಿತ್ತು. ಲೀಲಾ ತನ್ನ ಲೋಟವನ್ನೆತ್ತಿಕೊಂಡಳು. ಬಹಳ ಬಿಸಿ, ಕೈ ಸುಡುತ್ತೆಂದು ಕೆಳಕ್ಕಿಟ್ಟುಬಿಟ್ಟು ಅಲ್ಲಿಯೆ ಕುಳಿತಳು. ಅನಂತು ಅಲ್ಲಿಯೆ ಕಾಫಿಯ ಲೋಟದ ಹತ್ತಿರ ಕುಳಿತಿದ್ದವನು ತಾಯಿಯ ಕಡೆ ಕೂಡ ನೋಡ ಲಿಲ್ಲ. ಲೀಲಳಿಗೆ ಇದರಿಂದ ಮನಸ್ಸು ಒಮ್ಮೆಲೆ ರೇಗಿತು. ತನ್ನ ಕಡೆ ಕೂಡ ತನ್ನ ಮಗು ನೋಡುವುದಿಲ್ಲ, ಶಾಂತ ಬರುವುದನ್ನೆ ಕಾಯುತ್ತಿದೆಯಲ್ಲ ಎಂಬ ಅಸೂಯೆಯಲ್ಲಿ ಹೃದಯ ವಿಹ್ವಲವಾಯಿತು. "ಇಲ್ಲಿ ಬಾರೊ, ನನ್ನ ಹತ್ತಿರ" ಎಂದು ಕೈಬೀಸಿ ಕರೆದಳು. ಆದರೆ ಅನಂತು "ಉಹುಂ! ಅತ್ತೆ, ಕತ್ತೆ" ಎಂದು ಪಕ್ಕಕ್ಕೆ ಸರಿದ. ಲೀಲಳಿಗೆ ಈಗ ಕೋಪ ಉಕ್ಕಿಬಂತು. "ಬರತೀಯೊ, ಇಲ್ಲವೊ" ಎಂದು ಎದ್ದು ನಿಂತಳು. ಅನಂತರಾಮು ಹೆದರಿ ಕಿಟಾರನೆ ಕಿರಿಚಿ ಕೊಂಡು ಏಳಲು ಹೋಗಿ ಬಿದ್ದುಬಿಟ್ಟ. ಲೋಟದ ಮೇಲೆ ಬಿದ್ದು ಕಾಫಿಯೆಲ್ಲ ಉರುಳಿತು. ಬಿಸಿ ಬಿಸಿ ಕಾಫಿ ಮೈಗೆಲ್ಲ ಆಗಿ ಮೈ ಸುಟ್ಟಂತಾಯಿತು. ಜೋರಾಗಿ ಅಳಲಾರಂಭಿಸಿದ. ಶಾಂತ ಮಗು ಕರಿಚಿದ್ದನ್ನು ಕೇಳಿ ಈಚೆಗೆ ಓಡಿಬಂದಳು. ಮಗುವನ್ನು ನೋಡಿ ಗಾಬರಿಯಿಂದ ಮೇಲಕ್ಕೆತ್ತಿಕೊಂಡಳು. "ಅಯ್ಯೊ, ಅಯ್ಯೊ! ಯಾಕಮ್ಮ, ಮರಿ–ಏನಾಯಿತು ನನ್ನ ದೊರೆಗೆ, ಬಿದ್ದು ಬಿಟ್ಟೆಯಾ. ಅಳಬೇಡ ನನ್ನಯ್ಯ, ಅಳಬೇಡ. ಬೇರೆ ಕಾಫಿ ಕೊಡಿಸೋಣ" ಎಂದು ಅನಂತುವನ್ನೆತ್ತಿ ಸಮಾಧಾನಗೊಳಿಸಲು ಯತ್ನಿಸಿದಳು. ಲೀಲಾ

ಸೆಟೆದುಕೊಂಡು ವ್ಯಗ್ರಮುಖವಾಗಿ ನಿಂತಿದ್ದಳು. ಏನೋ ಆಗಿರಬೇಕೆಂದು ಶಾಂತಳಿಗೆ ಅನಿಸಿತು. ಲೀಲಾ ನಿಂತ ನಿಲುವಿನಿಂದಲೆ ಹೇಳಬಹುದಾಗಿತ್ತು ಅದನ್ನು. ಇನ್ನೇಕೆ ಸುಮ್ಮನೆ ಹಗರಣವೆಂದು ಶಾಂತ ಲೀಲಳನ್ನು ಕೇಳಲಿಲ್ಲ. ಅದರಿಂದ ಲೀಲಳಿಗೆ ಇನ್ನೂ ರೇಗಿತು. ಒಳ್ಳೆಯ ಮಾತಿನಲ್ಲೆ ಅನಂತುವನ್ನು ಸಮಾಧಾನಮಾಡುತ್ತ, ಕಾಫಿಯಿಂದ ತೊಯ್ದ ಅವನ ಷರಟನ್ನು ಬಿಚ್ಚಿದಳು. "ಏನಾಯಿತು, ಮರಿ?" ಎಂದಳು ಮತ್ತೆ. ಅನಂತು ಕೂಡಲೆ ತಾಯಿಯ ಕಡೆ ತೋರಿಸುತ್ತ ಬಿಕ್ಕಿಬಿಕ್ಕಿ ಅಳಲಾರಂಭಿಸಿದ. "ಅಮ್ಮ—ಅತ್ತ" ಎಂದು ಜೋರಾಗಿ ಅಳಲಾರಂಭಿಸಿದ. ಕಡಮೆಯಾಗಿದ್ದ ದುಃಖ ನೆನಪಿನಿಂದ ಇನ್ನೂ ಜೋರಾಯಿತು. ಶಾಂತ ಮಗುವನ್ನು ಸಮಾಧಾನಗೊಳಿಸಲು "ಸುಮ್ಮನಿರು, ಅಮ್ಮನಿಗೆ ಹೊಡೆಯೋಣ. ಅವಳು ನಿನ್ನ ಹತ್ತಮಾಡಿದಳೇನೊ? ಅಮ್ಮ ಬಹಳ ಕೆಟ್ಟವಳು" ಎಂದಳು. ಸಹಜವಾಗಿ ಮಗುವಿಗೆ ಸಮಾಧಾನ ಮಾಡಲು ಹೇಳಿದ್ದ ಈ ಮಾತು ಲೀಲಳನ್ನು ಕೆಣಕಿತು. ಹಾವಿನಂತೆ ಭುಸುಗುಟ್ಟಿದಳು. "ಇವನ್ನೇ ಹೇಳಿಕೊಡು, ಮಗುವಿಗೆ, ನನ್ನನ್ನು ಕೆಟ್ಟವಳನ್ನಾಗಿ ಮಾಡು. ನನಗೂ ನನ್ನ ಮಗುವಿಗೂ ಬಿಟ್ಟುಹೋದರೆ ನಿನಗೆ ಸಂತೋಷ" ಎಂದು ಸಿಡುಕಿದಳು. ಶಾಂತಳಿಗೂ ಸಹನೆ ಮೀರಿತು. ಎಷ್ಟೋಂದು ತಾನು ಸುಮ್ಮನಿದ್ದರೂ ಅಷ್ಟೂ ಅತ್ತಿಗೆಯ ಮಾತು ಮಿತಿಮೀರುತ್ತಿತ್ತು. "ಹಾಗಂದರೇನು ಅತ್ತಿಗೆ, ನಿನ್ನ ಮಗುವನ್ನು ನಾನೇನು ದೂರಮಾಡಿದ್ದು? ಅದು ನಿನ್ನನ್ನು ಹೊಡಿ ಅಂತಲ್ಲ, ಅದಕ್ಕೆ ಸಮಾಧಾನಪಡಿಸಲು ಹೇಳಿದ್ದೆ ತಪ್ಪಾಯಿತೇನು?" ಎಂದಳು ಕೊಂಚ ದೃಢವಾದ ದನಿಯಲ್ಲಿ.

"ಹೌದು, ಹೌದು. ಎಲ್ಲಾ ಗೊತ್ತಿದೆ ನಿನ್ನ ಆಟ. ಸುಮ್ಮನಿರು" ಎಂದಳು ಲೀಲಾ ಗಡಸಾಗಿ.

ಈಗ ಶಾಂತಳಿಗೆ ನಿಜವಾಗಿ ರೇಗಿತು. ಆಕ್ರೋಶವೆ ಬಂದಹಾಗಾಯಿತು. ಇಷ್ಟು ದಿನ ಅವರ ಕೈಯಲ್ಲಿ ಅನುಭವಿಸಿದ್ದೆಲ್ಲ ಹೊಟ್ಟೆಯಲ್ಲಿ ಹಾಗೆಯೆ ಕುಳಿತಿತ್ತು. ಆದರೂ ಬಹಳ ಪ್ರಯಾಸದಿಂದ ನಾಲಗೆ ಬಿಗಿಹಿಡಿದೇ ಮಾತನಾಡಿದಳು. "ಏನು ನನ್ನ ಆಟ, ಹೇಳಿ. ಅತ್ತಿಗೆ, ಮೆತ್ತಗಿದ್ದರೆ ಹಾಗೆಯೆ ನಿಮಗೆ. ಅಳತಾ ಇದ್ದ ಮಗುವನ್ನೆತ್ತಿಕೊಂಡುದೆ ತಪ್ಪೇನು? ನೀನು ಯಾಕೆ ಹೀಗಾಡತೀಯೊ ನನಗಂತೂ ಗೊತ್ತಾಗುವುದಿಲ್ಲ."

" ಹೌದಮ್ಮ, ನನಗೆ ನಿನ್ನನ್ನು ಕಂಡರೆ ಆಗುವುದಿಲ್ಲ. ಏನು ಮಾಡುವುದು ಹೇಳು. ನನಗೆ ಬೇರೆಲ್ಲೂ ಜಾಗವೂ ಇಲ್ಲ. ಇಲ್ಲಿಯೆ ಇರಬೇಕು, ಅನುಭವಿಸ ಬೇಕು. ನಿನಗಂದರೆ ಇದು ಶಾಶ್ವತವಾದ ಮನೆ. ನಾನು ಬೇರೆ ಹೊರಗಿನವಳು " ಎಂದು ಲೀಲಾ ವ್ಯಂಗ್ಯವಾಗಿ ಅಂದುಬಿಟ್ಟಳು.

ಲೀಲಾ ಇಷ್ಟು ಕೀಳು ಮಟ್ಟಕ್ಕಿಳಿಯುವಳೆಂದು ಶಾಂತ ನಿರೀಕ್ಷಿಸಿರಲಿಲ್ಲ. ನೋವಿನಿಂದ ಕಣ್ಣು ಮಿಡಿಯಿತು, ಹೃದಯ ಬೆಂಕಿಯಾಯಿತು. ಆದರೂ ಸಂಯಮದಿಂದಲೆ ಶಾಂತ ಮೆಲ್ಲನೆ " ಹೌದು ಅತ್ತಿಗೆ, ನನಗೆ ತಾನೆ ಈ ಮನೆ ಶಾಶ್ವತ. ಎಷ್ಟಿದ್ದರೂ ಗಂಡಬಿಟ್ಟವಳಲ್ಲವೆ ? " ಎಂದಳು.

" ನಾನೇನೂ ಹಾಗನ್ನಲಿಲ್ಲವಲ್ಲ."

" ನೀನು ಇನ್ನು ಬೇರೆ ಅನ್ನಬೇಕೇನು ? ಇಷ್ಟು ಸಾಲದೆ ? " ಎಂದಳು ಶಾಂತ.

ತಕ್ಷಣ ಲೀಲಾ ಕಣ್ಣೀರುಗರೆಯಲು ಆರಂಭಿಸಿಬಿಟ್ಟಳು. " ಹೌದಮ್ಮ, ನಾವು ಏನಂದರೂ ತಪ್ಪು. ಒಂದು ಮಾತು ಆಡಿದರೆ ತಪ್ಪು, ಮಾತನಾಡುವುದೆ ತಪ್ಪು. ಏನು ಮಾಡುವುದು. ನನ್ನ ಹಣೆಯಲ್ಲಿ ಇಲ್ಲಿಗೆ ಬಂದು ಅನುಭವಿಸ ಬೇಕೆಂದು ಬರೆದಿದ್ದರೆ—ಅನುಭವಿಸದೆ ಇನ್ನೇನು ಮಾಡುವುದಕ್ಕಾಗುತ್ತೆ, ಎಲ್ಲ ನನ್ನ ಕರ್ಮ " ಎಂದು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಅನಂತರಾಮು ಬರಿಯ ಮೈಯಲ್ಲಿ ಕುಳಿತಿದ್ದವನು ತಾಯಿ ಅಳುವುದನ್ನು ನೋಡಿ, ಒಂದು ಗಳಿಗೆ ಸುಮ್ಮನೆ ಕಕ್ಕಾಬಿಕ್ಕಿಯಾದವನು ಏನು ಮಾಡಲೂ ತೋಚದೆ ತಾನೂ ಅಳಲಾರಂಭಿಸಿದ. ಶಾಂತಳಿಗೂ ಏನು ಮಾಡಲೂ ತೋರಲಿಲ್ಲ.

ಆ ಹೊತ್ತಿಗೆ ಸರಿಯಾಗಿ ರಾಜಣ್ಣ ರೈಲಿನಿಂದ ಬಂದ. ಹೆಂಡತಿ ಬಿಕ್ಕಿ ಬಿಕ್ಕಿ ಅಳುತ್ತ ಹೇಳಿದಳು. ರಾಜಣ್ಣ ಬೆಂಕಿಯಾದ. ಆ ಹೊತ್ತಿಗೆ ಸರಿಯಾಗಿ ಶಾಂತ ಅನಂತರಾಮುವನ್ನೆತ್ತಿಕೊಂಡು " ಬಾರೊ ಮರಿ, ಬೇರೆ ಬಟ್ಟೆ ಹಾಕ ತೀನಿ " ಎಂದಳು. ಮಗು ಅವಳನ್ನು ತಬ್ಬಿಕೊಳ್ಳುತ್ತ " ಮುಮು " ಎಂದುದೂ ರಾಜಣ್ಣನಿಗೆ ಕೇಳಿಸಿತು. ಅವನು ರೂಮಿನಿಂದ ಹೊರಕ್ಕೆ ಕಾಲಿಡುತ್ತಿದ್ದಂತೆ ಶಾಂತ ಅನಂತುವನ್ನು ಮುದ್ದಾಡುತ್ತ " ತುಂಟ ಮರಿ. ಕೆನ್ನೆ ಕಚ್ಚಿಬಿಟ್ಟೆ ಯಲ್ಲೊ, ಘಟಿಂಗ " ಎನ್ನುತ್ತ ಅಡಿಗೆಯ ಮನೆಯ ಕಡೆ ಹೊರಟಿದ್ದುದನ್ನು ನೋಡಿದ. ರಾಜಣ್ಣನ ಕೋಪಕ್ಕೆ ಮಿತಿ ಉಳಿಯಲಿಲ್ಲ. ಏನೋ ರಾವು

ಬಡಿದವನಂತಾಡಿಬಿಟ್ಟ. "ಶಾಂತ, ಮಗುವನ್ನು ಬಿಟ್ಟುಬಿಡು" ಎಂದ.

ಶಾಂತಳಿಗೆ ಎಂದೂ ಕಾಣದ ಧೈರ್ಯ ಇಂದು ಬಂದಿತ್ತು. ಅದಕ್ಕೆ ಕಾರಣ ಅವಳಿಗೇ ತಿಳಿಯದು. ಅಣ್ಣನ ರುದ್ರಾವತಾರ ಕಂಡು ಕೂಡ ಅವಳು ಬೆದರಲಿಲ್ಲ. "ಯಾಕಣ್ಣ, ನಾನೆತ್ತಿಕೊಂಡರೆ ಏನು ?" ಎಂದಳು.

"ಸುಮ್ಮನೆ ಬಿಟ್ಟುಬಿಡು, ಶಾಂತ" ಎಂದ ರಾಜಣ್ಣ.

ಶಾಂತ ಅವನ ಮಾತಿಗೆ ಏನೂ ಬೆಲೆ ಕೊಡದವಳಂತೆ ಅಡಿಗೆಯ ಮನೆಗೆ ಹೊರಟುಬಿಟ್ಟಳು. ರಾಜಣ್ಣನಿಗೆ ಹುಚ್ಚು ಹಿಡಿದಂತಾಯಿತು. ತನ್ನ ಮಾತಿಗೆ ಇಂತಹ ಅಸಡ್ಡೆಯೆ? ತನ್ನ ಮಗುವನ್ನು ತನ್ನ ಇಷ್ಟವಿಲ್ಲದಿದ್ದರೂ ಎತ್ತಿಕೊಂಡು, ತನ್ನನ್ನೆ ಅನಾದರ ಮಾಡುತ್ತಿರುವಳಲ್ಲ ಎಂದು ಮನಸ್ಸು ಹುಚ್ಚಾಯಿತು. ತಲೆ ಸಿಡಿದಂತಾಯಿತು. ದನಿ ವಿಕಾರವಾಯಿತು. ಜೋರಾಗಿ "ಶಾಂತ, ಬಿಡುತ್ತೀಯೊ ಇಲ್ಲವೊ. ನಿನ್ನ ಹತ್ತಿರ ಮಗುವನ್ನು ಬಿಡಬೇಡ ಅಂತ ಅವಳಿಗೆ ಹೇಳಿದ್ದರೂ ನಿನ್ನ ಹತ್ತಿರ ಕಳುಹಿಸಿದಳು!" ಎಂದ.

ಶಾಂತ ಮೆಲ್ಲನೆ ಅವನ ಕಡೆ ತಿರುಗಿದಳು. ಮುಖದಲ್ಲಿ ಯಾವ ವಿಕಾರವೂ ಕಾಣಲಿಲ್ಲ. ಕಣ್ಣು ಮಾತ್ರ ಬೆಳಕಾಗಿತ್ತು. ಮನಸ್ಸಿನ ರೋಷವನ್ನೆಲ್ಲ ಅದುಮಿಟ್ಟುಕೊಂಡಹಾಗಿತ್ತು. ಆದರೂ ನಡುಗದೆ ನಟ್ಟ ದನಿಯಲ್ಲಿ, "ಹೌದಣ್ಣ, ನನ್ನ ಹತ್ತಿರ ಮಗು ಬಂದರೆ ಕೆಟ್ಟುಹೋಗುತ್ತೆ, ಅಲ್ಲವೆ? ನಾನು ಗಂಡಬಿಟ್ಟವಳಲ್ಲವೆ? ಆದ್ದರಿಂದ ಎಲ್ಲರಿಗೂ ನಾನು ಬೇಡವಾದವಳೆ! ಅಣ್ಣನಾದರೇನು, ಅತ್ತಿಗೆಯಾದರೇನು, ಯಾರಾದರೇನು—ಎಲ್ಲರೂ ಒಂದೆ. ನಿನ್ನ ಮನಸ್ಸು ಕೆಡಿಸುವುದು ನನ್ನ ಇಷ್ಟವಿಲ್ಲ. ಅಷ್ಟೆ ಅಲ್ಲ, ಅದು ತಾನಾಗಿಯೆ ಬಂದು ಒದ್ದಾಡುತ್ತೆ, ಅದರಿಂದ ಎತ್ತಿಕೊಳ್ಳುತ್ತಿದ್ದೆ. ನಿಮ್ಮ ಆಟವೆಲ್ಲ ಅದಕ್ಕೆ ಹೇಗೆ ತಿಳಿಯಬೇಕು? ನಾನೂ ನೋಡತಾ ಇದೀನಿ. ನನ್ನ ಹತ್ತಿರ ಬಂದರೆ ಅತ್ತಿಗೆ ಅದನ್ನು ಹೊಡೆಯುತ್ತಿದ್ದಳು. ಅತ್ತಿಗೆ ಎಷ್ಟು ಚಾಕಲೇಟು ತಿನ್ನಿಸಿದರೂ ಪರವಾಗಿಲ್ಲ; ಆದರೆ ನಾನೊಂದು ಚಾಕಲೇಟು ತಿನ್ನಿಸಿಬಿಟ್ಟರೆ ಅದು ವಿಷ ಆಗುತ್ತೆ ಅಂತ ಹೆದರಿ ಅದನ್ನು ಬಾಯಿಂದ ಕಿತ್ತೆಸೆದಳು. ಇದೆಲ್ಲ ಯಾಕೆ? ನೀನು, ಅತ್ತಿಗೆ—ಯಾಕೆ ಹೀಗಾಡುತ್ತಿದೀರಿ ಗೊತ್ತೆ? ನನ್ನವರಾದವರಿಗೇ ನಾನು ಬೇಡವಾದೆನೆಂದು ನೀವು ತಿಳಿದುಕೊಂಡಿದೀರಿ ಅದು ನಿಜವೂ ಇರ ಬಹುದು" ಎಂದಳು. ದನಿ ಮೆಲ್ಲಮೆಲ್ಲನೆ ಏರುತ್ತಿತ್ತು. ರಾಜಣ್ಣನ ಮುಖವೂ

ಕುದಿಯುತ್ತಿತ್ತು.

"ಅದೆಲ್ಲ ನೀನೇ ಮಾಡಿಕೊಂಡದ್ದು. ನೀನು ಅನುಭವಿಸಬೇಕು" ಎಂದ ಕಟುವಾಗಿಯೆ.

"ನಿಜ, ಅಣ್ಣ. ನೀವೆಲ್ಲ ಏನು ಮಾಡತೀರಿ. ನಿಮಗೆಲ್ಲ ನಿಮ್ಮದೆ ಹೆದರಿಕೆ. ಆದರೆ ನನಗೆ ಒಂದು ಸಂತೋಷ. ಸುಳ್ಳುಸುಳ್ಳೆ ಸಹಾನುಭೂತಿ ತೋರಿಸಿ, ಮನಸ್ಸಿನಲ್ಲಿ ಇಲ್ಲದ ಮಮತೆಯನ್ನು, ಪ್ರೀತಿಯನ್ನು ಬಾಯಲ್ಲಿ ಆಡುವುದಕ್ಕಿಂತ ಇದೇ ಒಳ್ಳೆಯದು. ತಿರಸ್ಕಾರವನ್ನು, ತಾತ್ಸಾರವನ್ನು ಮನಸ್ಸಿನಲ್ಲಿ ತುಂಬಿಟ್ಟುಕೊಂಡು, ಬಾಯಲ್ಲಿ ಮಾತ್ರ ಪ್ರೀತಿಯ ಸೋಗು ಹಾಕುವುದಕ್ಕಿಂತ ಇದು ವಾಸಿ. ನೀವೆಲ್ಲ ನಿಜವಾಗಿ ಎಂತಹವರು ಅಂತ ನನಗೆ ಗೊತ್ತಾಯಿತು" ಎಂದಳು ಶಾಂತ ಕೊಂಚವೂ ಧೀಗೆಡದೆ.

"ನಿನಗೆ ತಿಳಿದರೆ ನಾವೇನೂ ಹೆದರುವುದಿಲ್ಲ. ನೀನೇನೂ ನಮ್ಮನ್ನು ಉದ್ಧಾರ ಮಾಡಬೇಕಾಗಿಲ್ಲ" ಎಂದು ಬಿರುಸಾಗಿ ಅಂದ ರಾಜಣ್ಣ.

"ಇದೆಲ್ಲಾ ಏನೊ ಇದು, ರಾಜಣ್ಣ. ಶಾಂತ, ನೀನು ಸುಮ್ಮನಿರು" ಎಂದು ಸಾವಿತ್ರಮ್ಮ ನಡುವೆ ಬಾಯಿ ಹಾಕಿಕೊಂಡು ಬಂದರು.

"ನೀನು ಬಾಯಿ ಹಾಕಿಕೊಂಡು ಬರಬೇಡ, ಅಮ್ಮ. ಸುಮ್ಮನಿರು" ಎಂದು ಶಾಂತ ತಾಯಿಗೆ ಹೇಳಿ, ರಾಜಣ್ಣನ ಕಡೆ ತಿರುಗಿ, "ಯಾರಿಂದಲೂ ಯಾರೂ ಉದ್ಧಾರವಾಗುವುದಿಲ್ಲ, ರಾಜಣ್ಣ. ಅದು ನಿನಗೆ ಹೇಳಬೇಕೆ? ಯಾರೂ ಯಾರಿಗೂ ಇಲ್ಲ. ನಮ್ಮವರೆಂದು ಯಾರನ್ನು ನಂಬಿರುತ್ತೇವೊ ಅವರೇ ಕೈಕೊಡುತ್ತಾರೆ" ಎಂದಳು.

"ಹೌದು, ಹೌದು. ಈಗ ನಿನಗೆ ನಾವು ಕೈಕೊಟ್ಟೆವಲ್ಲ. ನಮ್ಮ ಮನೆಗೇ ಬಂದು ಇದ್ದುಕೊಂಡು ನಮ್ಮ ಮೇಲೆಯೆ ಎಗರಿಬೀಳು ನೀನು."

"ನಿನ್ನ ಮನೆಗೆ ನಾನು ಬಂದಿಲ್ಲ. ನನ್ನ ತಂದೆಯ ಮನೆಗೆ ನಾನು ಬರಲು ಯಾರನ್ನೂ ಕೇಳಬೇಕಾಗಿಲ್ಲ" ಎಂದಳು ಶಾಂತ.

ಗಡಿಯಾರ ಹತ್ತು ಗಂಟೆ ಹೊಡೆಯಿತು. ಮಾತು ಇನ್ನೂ ಎಲ್ಲಿಗೆ ಹೋಗುತ್ತಿತ್ತೊ, ಅಷ್ಟರಲ್ಲಿ 'ಪೋಸ್ಟ್' ಎಂದು ಕೂಗಿ ಒಂದು ಕಾಗದವನ್ನು ಎಸೆದು ಪೋಸ್ಟ್‌ಮನ್ ಹೊರಟುಹೋದ. ತನಗಂತೂ ಯಾವುದೂ ಕಾಗದ ಬರಬೇಕಾಗಿಲ್ಲವೆಂದು ರಾಜಣ್ಣನಿಗೆ ಗೊತ್ತಿತ್ತು. ತನಗೆಲ್ಲಿ ಕಾಗದ ಬರುವು

ದೆಂದು ಶಾಂತಳಿಗೆ ಉದಾಸೀನ. ಇಬ್ಬರೂ ಕಾಗದದ ಕಡೆಗೆ ನೋಡಲಿಲ್ಲ. ಮುಂದೆ ಏನು ಮಾತಾಡಬೇಕೆಂದು ಒಬ್ಬರಿಗೂ ತೋಚಲಿಲ್ಲ. ಭೀಕರ ಮೌನದ ದೊಡ್ಡ ಮಹಾಪೂರ ಇಬ್ಬರ ನಡುವೆ ನಿಂತಿತ್ತು. ಒಂದು ಗಳಿಗೆ ಹಾಗೆ ನಿಂತಿದ್ದು ರಾಜಣ್ಣ ಕೊನೆಯಾಗಿ "ಇನ್ನು ಯಾಕೆ ಮಾತು, ಗಂಡ ಬಿಟ್ಟವಳ ಹತ್ತಿರ ಮಾತಾಡಿದರೆ ನಮಗೆ ಮಾನ ಬರುವುದಿಲ್ಲ" ಎಂದು ಗೊಣಗಿ ರೂಮಿಗೆ ಹೊರಟುಹೋದ.

ಹೆಂಡತಿಯೊಡನೆ ಗುಸಗುಸವೆಂದು ಮಾತನಾಡಿಕೊಂಡು ಐದು ನಿಮಿಷದ ನಂತರ ಬಟ್ಟೆ ಕಳಚಿ ಹೊರಕ್ಕೆ ಬಂದಾಗ ಶಾಂತ ಬಟ್ಟೆಬರೆಯನ್ನು ಚೀಲಕ್ಕೆ ಹಾಕಿಕೊಂಡು ಹೊರಡುತ್ತಿದ್ದುದು ಕಾಣಿಸಿತು. ತಿರಸ್ಕಾರದಿಂದ ಒಮ್ಮೆ ಹೂಂಕರಿಸಿ ಮುಂದೆ ಹೆಜ್ಜೆ ಇರಿಸಿದ. ಸಾವಿತ್ರಮ್ಮನವರೂ ಅಲ್ಲಿಯೆ ಬಂದು ನಿಂತು ಶಾಂತ ಹೊರಡುವುದನ್ನು ನಿಲ್ಲಿಸಲು ಯತ್ನಿಸುತ್ತಿದ್ದರು.

"ಬೇಡ, ಕಣೆ. ಹೀಗೆ ನಿಂತನಿಲುವಿನಲ್ಲಿ ಹೊರಟುಬಿಟ್ಟರೆ ಏನು ಗತಿ? ಹೋಗಬೇಡ ಕಣೆ" ಎಂದು ಸಾವಿತ್ರಮ್ಮ ಬೇಡಿಕೊಂಡರು.

"ನಾನು ಈಗ ಹೋಗಲೇಬೇಕು. ನನ್ನ ನಾದಿನಿಗೆ ಅಲ್ಲಿ ತುಂಬಾ ಕಾಯಿಲೆ, ಪಾಪ. ಮುದ್ದು ಮಗು, ಎಷ್ಟು ಸೊರಗಿಹೋಗಿದೆಯೊ. ನಾನು ಈಗಲೆ ಹೋಗಬೇಕು" ಎಂದಳು ಶಾಂತ ಚೀಲಕ್ಕೆ ಬಟ್ಟೆ ತುರುಕುತ್ತ.

"ಹೌದು, ಹೌದು—ಮಗು! ಎಂಟು ವರ್ಷದ ಎಮ್ಮೆ. ಅಲ್ಲಿ ದುಡಿದು ದುಡಿದು, ಅವರೆಲ್ಲರ ಸೇವೆ ಮಾಡಿಯೆ ನೀನು ಹೀಗಾದೆ" ಎಂದು ಸಾವಿತ್ರಮ್ಮ ಬಿಕ್ಕಳಿಸಿದರು.

"ನೀನು ಅವರನ್ನು ಏನೂ ಅನ್ನಬೇಡ, ಅಮ್ಮ. ನೀನೇನು ಹೇಳಿದರೂ ನಾನೀಗ ಹೋಗುತ್ತೇನೆ" ಎಂದಳು ಶಾಂತ.

"ಕಾಲಿಗೆ ಬಿದ್ದು, ಇಲ್ಲೇ ಇದ್ದು ನಮ್ಮನ್ನೆಲ್ಲ ಉದ್ಧಾರಮಾಡು, ಅಂತ ಕೇಳಿಕೊ ಅವಳನ್ನು, ಅಮ್ಮ. ಆಗಲಾದರೂ ಕೇಳುತ್ತಾಳೆಯೇನೊ, ನೋಡೋಣ. ಹೋಗತಾಳಂತೆ! ಎಲ್ಲಿಗೆ ಹೋಗತಾಳೊ ಕಾಣೆ. ಅಲ್ಲಿಂದ ಒಂದು ಸಾರಿ ಒದ್ದೋಡಿಸಿದಾರೆ, ಕೆಟ್ಟ ಚಾಳಿ ಅಂತ. ಈಗಲೂ ಸರಿಯಾದ ಶಾಸ್ತಿಯೆ ಆಗುತ್ತೆ. ಆಮೇಲೆ ನೀವೇ ಗತಿ ಅಂತ ನಮ್ಮ ಕಾಲು ಹಿಡಿಯೋದಕ್ಕೆ ಇಲ್ಲಿಗೆ ಬರತಾಳೆ, ನೋಡತಾ ಇರು" ಎಂದ ರಾಜಣ್ಣ ಬಚ್ಚಲ

ಮನೆಯೊಳಗಿನಿಂದಲೆ.

“ ಬೀದಿಯಲ್ಲಿ ನಾನು ಸತ್ತರೂ ಸರಿ, ಇನ್ನು ನಿಮ್ಮ ಮನೆಗೆ ಕಾಲಿಡುವುದಿಲ್ಲ ” ಎನ್ನುತ್ತ ಶಾಂತ ಹೊರಟುಬಿಟ್ಟಳು.

“ ನಿಮ್ಮ ತಂದೆ ಬರುವ ತನಕವಾದರೂ ನೋಡೆ. ಇನ್ನೇನು ಬರತಾರೆ ” ಎಂದರು ಸಾವಿತ್ರಮ್ಮ ಅಸಹಾಯಕತೆಯಿಂದ.

“ ಹೋಗಲಿ ಬಿಡಮ್ಮ. ಏನು ಕೂಚುಹತ್ತತಿ ನೀನು ಅವಳಿಗೆ ” ಅಂದ ರಾಜಣ್ಣ ವಿಕಟವಾಗಿ. ಟವಲಿನಲ್ಲಿ ಮುಖ ಒರಸಿಕೊಳ್ಳುತ್ತ ಹಜಾರಕ್ಕೆ ಬಂದ ಅವನ ಮುಖದ ಕಡೆ ನೋಡಲು ಕೂಡ ಶಾಂತಳಿಗೆ ಇಷ್ಟವಾಗಲಿಲ್ಲ.

“ ಅಪ್ಪ ಬಂದು ಮಾಡುವುದು ಅಷ್ಟರಲ್ಲೆ ಇದೆ. ನನಗೆ ಗೊತ್ತಿಲ್ಲವೆ, ರಾಜಣ್ಣ ! ಇನ್ನುಮೇಲಾದರೂ ನಿನಗೆ, ಅತ್ತಿಗೆಗೆ ನನ್ನ ಕಾಟವಿಲ್ಲ. ನೀವು ಸುಖವಾಗಿರಬಹುದು ” ಎಂದು ಹೇಳಿ ಶಾಂತ ಗೇಟ್ ತೆರೆದು ಹೊರಟಳು.

ಅನಂತರಾಮು ಇದ್ದಕ್ಕಿದ್ದಂತೆ ಅಳಲಾರಂಭಿಸಿದ್ದ. ಅವನ ಅಳುವಿನ ದನಿ ಕೇಳಿ ಶಾಂತಳಿಗೆ ಒಮ್ಮೆ ಅವನನ್ನೆತ್ತಿ ಮುದ್ದಿಡಬೇಕೆನಿಸಿತು. ಹಿಂದಕ್ಕೆ ಒಮ್ಮೆ ತಿರುಗಿಯೂ ನೋಡಿದಳು. ಹಜಾರದಲ್ಲಿ ಅಳುತ್ತ ಕುಳಿತಿದ್ದವನ ಈ ಪಕ್ಕದಲ್ಲಿ ರಾಜಣ್ಣ ನಿಂತಿದ್ದ, ಕೊಂಚ ಆ ಕಡೆ ರೂಮಿನ ಬಾಗಿಲಲ್ಲಿ ಲೀಲಾ ನಿಂತಿದ್ದಳು. ಇಬ್ಬರೂ ಸೆಟೆದು ನಿಂತಿದ್ದರು. ಆದರೆ ಲೀಲಳ ಮುಖ ಕೊಂಚ ಕಂದಿದಂತಿತ್ತು. ಮನೆಯ ಬಾಗಿಲಲ್ಲಿ ಸೆರಗಿನಿಂದ ಕಣ್ಣೀರು ಒರಸುತ್ತ ಸಾವಿತ್ರಮ್ಮನವರು ನಿಂತಿದ್ದರು. ಶಾಂತ ಮನಸ್ಸನ್ನು ಬಿಗಿ ಹಿಡಿದು ಅಲ್ಲಿಂದ ಕಾಲುಕಿತ್ತಳು.

## ೧೦

ರೈಲಿನಲ್ಲಿ ಕಿಟಕಿಗೆ ಒರಗಿಕೊಂಡು ಶಾಂತ ಯೋಚಿಸುತ್ತಿದ್ದಳು. ಇಪ್ಪತ್ತು ದಿನದ ಹಿಂದೆ ಹೀಗೆಯೆ ಏಕಾಏಕಿ ಮನೆ ಬಿಟ್ಟು ಹೊರಟುಬಂದುದು ಆಗಿತ್ತು. ಈಗ ತನ್ನ ಮನೆಗೇ ತಾನು ಹೋಗುತ್ತಿದೇನೆ. ಆದರೆ ಈ ಇಪ್ಪತ್ತು ದಿನಗಳ ನರಕಯಾತನೆ—ಎಂತಹ ಅನುಭವವೆನಿಸಿತು ! ತನ್ನ ಅಣ್ಣ, ಅತ್ತಿಗೆ ಹೀಗಾಗುವರೆಂದು ಅವಳೆಂದೂ ಎಣಿಸಿರಲಿಲ್ಲ. ಆಯಿತಲ್ಲ, ಇನ್ನುಮೇಲೆ ಅಲ್ಲಿ ಕಾಲಿಡದಿದ್ದರೆ ಸರಿ, ಎಂದುಕೊಂಡಳು. ಹಾಗೆ ಕಾಲಿಡದೆ ಇರಲೂ

ಆಗುವುದಿಲ್ಲವೆಂದು ಶಾಂತಳಿಗೆ ಗೊತ್ತು. ಬಾಣಂತನಕ್ಕೆ ಬರಲೇಬೇಕಾಗುತ್ತದೆ ಆದರೆ ಅದಕ್ಕೆ ಮೊದಲು ತಾನಾಗಿಯೆ ಈ ಮನೆಗೆ ಮತ್ತೆ ಕಾಲಿಡುವುದಿಲ್ಲ, ಅವರಾಗಿ ಕಾಗದ ಬರೆದು ಕರೆಸಿಕೊಂಡರೆ, ಕರೆದುಕೊಂಡು ಹೋದರೆ ಮಾತ್ರ ಮತ್ತೆ ತವರುಮನೆಗೆ ಹೋಗುವುದು. ಇಲ್ಲವಾದರೆ ಖಂಡಿತ ಇಲ್ಲ ಎಂದು ಕೊಂಡಳು. ಕಾಗದದ ಯೋಚನೆ ಬಂದೊಡನೆ, ಬೆಳಿಗ್ಗೆ ತನಗೆ ಬಂದ ಕಾರ್ಡಿನ ನೆನಪಾಯಿತು. ಈಗಾಗಲೆ ಅದನ್ನು ಇಪ್ಪತ್ತು ಸಾರಿ ಓದಿಯಾಗಿತ್ತು. ಚೀಲದಿಂದ ತೆಗೆದು ಮತ್ತೆ ಓದಿಕೊಂಡಳು.

ಬೆಳಿಗ್ಗೆ ಕಾಗದ ಸಿಕ್ಕಿದೊಡನೆ ಮನಸ್ಸು ನಿರ್ಧಾರಕ್ಕೆ ಬಂದಿತ್ತು. ಕಿಮಕ್ಕು ಕಮಕ್ಕೆನ್ನದೆ ತಕ್ಷಣ ಹೊರಡುವ ನಿಶ್ಚಯ ಮಾಡಿದ್ದಳು. ಹೇಗೆ ಏನು, ಎಂದು ವಿಚಾರ ಮಾಡುವಷ್ಟು ಕೂಡ ಅವಳಿಗೆ ಅವಕಾಶವಿರಲಿಲ್ಲ. ರಾಜಣ್ಣ ತನಗೆ ಅವಮಾನವಾಗುವಂತೆ ನಡೆದುಕೊಂಡಿದ್ದ. ಅದೇ ತಾನೆ ಜಗಳವಾಡಿದ್ದ, ಹೀನಾಮಾನವಾಗಿ ಅಂದಿದ್ದ. ಈ ನರಕಯಾತನೆಯಿಂದ ಹೇಗಾದರೂ ತಪ್ಪಿಸಿಕೊಂಡರೆ ಸಾಕೆಂದುಕೊಂಡಳು. ತಕ್ಷಣ ಹೊರಟುನಿಂತಳು. ಹೊರಕ್ಕೆ ಹೋದಾಗಲೂ ಅನಂತರಾಮುವಿನ ಅಳು ಕೇಳುತ್ತಿತ್ತು. ಅದು ಮನಸ್ಸಿನಲ್ಲಿ ಮತ್ತೆ ಮತ್ತೆ ಧ್ವನಿಗೊಂಡಿತು. ನೇರ ರೈಲುನಿಲ್ದಾಣಕ್ಕೆ ಹೊರಡದೆ ದಾರಿಯಲ್ಲಿ ಡಾಕ್ಟರ ಮನೆಯಲ್ಲಿ ಸರಸಿಯನ್ನು ಕಂಡುಹೋಗಲು ನಿಂತಳು. ಅಲ್ಲಿ ಸರಸಿ ಅವಳನ್ನು ನೋಡಿ " ಊರಿಗೆ ಹೊರಟೆಯಾ, ಶಾಂತ ? " ಎಂದಳು.

ಈ ತನಕ ಬಿಗಿಹಿಡಿದಿದ್ದ ದುಃಖ ಈಗ ಕಟ್ಟೆಯೊಡೆದು ಶಾಂತ ಮನಸಾರ ಅತ್ತಳು. ಸರಸಿಯ ತಾಯಿಯೂ ಸಮಾಧಾನ ಹೇಳಿದರು. ಕೊನೆಗೆ ರಾಜಣ್ಣ, ಲೀಲಾ ಮಾಡಿದ ಹಗರಣವನ್ನೆಲ್ಲ ಶಾಂತ ವಿವರಿಸಿದಳು. ತನಗೆ ಬಂದ ಕಾಗದವನ್ನು ತೋರಿಸಿದಳು. ಈಗ ಮನಸ್ಸು ಕೊಂಚ ಹಗುರಾಗಿತ್ತು. ಅತ್ತು ಭಾರ ಕಳೆದುಕೊಂಡಿದ್ದಳು. ಆಗ ಕಾವಿನಲ್ಲಿ ವಿಚಾರ ಮಾಡಲು ಅವಕಾಶ ವಾಗಿರಲಿಲ್ಲ. ಈಗ ಮನಸ್ಸಿಗೆ ಸಂದೇಹ, ಶಂಕೆಗಳು ಬಂದವು. ಅಲ್ಲಿಗೆ ಹೋದರೆ ಹೇಗೋ ಏನೋ ಎಂದು ಆತಂಕವಾಯಿತು. ಈ ಆತಂಕವನ್ನು ಸರಸಿಯಲ್ಲಿ ಹೇಳಿಕೊಂಡಳು :

" ನೋಡು, ಸರಸಿ. ಈ ಕಾಗದ—ಒಂದು ಕಾರ್ಡು, ಅದರಲ್ಲಿ ಬಾ ಅಂತ

ಕೂಡ ಬರೆದಿಲ್ಲ. ' ವಸಂತು ಟೈಫಾಯಿಡ್ಡಿನಲ್ಲಿ ಮಲಗಿದಾಳೆ. ಅತ್ತಿಗೆ, ಅತ್ತಿಗೆ ಅಂತಲೆ ಇರತಾಳೆ ' ಅಂತ ಮಾತ್ರ ಬರೆದಿದೆ. ನನ್ನ ಮೈದುನ ಸೀನುವಿನದೆ ಅಕ್ಷರ. ಆದರೆ ಇದು ನಿಜವೊ ಅಲ್ಲವೊ ಯಾರಿಗೆ ತಿಳಿಯಬೇಕು."

"ಶಾಂತ, ನಿನ್ನ ಬುದ್ಧಿಗೆ ಯಾಕೆ ಹೀಗೆ ಮಂಕು ಕವಿಯಿತೆ? ನೀನು ಇಲ್ಲಿಗೆ ಬಂದು ಇಪ್ಪತ್ತು ದಿನವಾಯಿತು. ಇಷ್ಟು ದಿನವೂ ಕಾಗದ ಬರೆಯದಿದ್ದ ನಿನ್ನ ಮೈದುನ ಈಗ ಯಾಕೆ ಸುಳ್ಳು ಕಾಗದ ಹಾಕಬೇಕು, ಹೇಳು."

"ಆದರೂ ನನಗೇನೊ ಅನುಮಾನ" ಎಂದು ಶಾಂತ ರಾಗ ಎಳೆದಳು.

"ಏನು ಅನುಮಾನ? ಅದು ಸುಳ್ಳಿರಬಹುದು ಅಂತಲೆ? ಸುಳ್ಳು ಅಂತಲೆ ತಿಳಕೊ. ಏನೀಗ ಕೊಳ್ಳೆಹೋಯಿತು. ನೀನು ಅಲ್ಲಿಗೆ ಹೋಗಬೇಕು, ಅಂತಲೆ ಅವನು ಈ ಸುಳ್ಳು ಕಾಗದ ಬರೆದಿರಬಹುದು. ಅಂದಮೇಲೆ ನೀನು ಅಲ್ಲಿಗೆ ಹೋಗಬೇಕೆಂದು ತಾನೆ ಅವನಿಷ್ಟ?"

"ಆದರೂ ಬಾ ಅಂತ ಬರೆಯಲಿಲ್ಲವಲ್ಲ" ಎಂದಳು ಅರೆಮನಸ್ಸಿನಿಂದ.

"ನಿನಗೆ ಇದೆಂತಹ ಹುಚ್ಚು ಹಿಡಿಯಿತೆ, ಶಾಂತ. ನಿನ್ನ ಮನೆಗೆ ನೀನು ಬರಲು, ಬಾ ಅಂತ ಹಸೆಗೆ ಕರೆಯಬೇಕೇನೆ? ಇಲ್ಲಿಗೆ ಬಾ ಅಂತ ಹೇಳಿಸಿಕೊಂಡು ಬಂದೆಯೇನು? ಇದು ನಿನ್ನ ಮನೆಯಲ್ಲ; ಆದರೆ ಅದು ನಿನ್ನ ಮನೆ. ಆ ಮನೆಯಲ್ಲಿ ನಿನ್ನವರೆಲ್ಲರೂ ನಿನಗಾಗಿ ಎಷ್ಟು ಒದ್ದಾಡುತ್ತಿದಾರೊ ನಿನಗೆ ಗೊತ್ತೆ? ಅಲ್ಲದೆ ನಿನ್ನ ನಾದಿನಿ—ಅವಳ ಹೆಸರು ವಸಂತು ತಾನೆ."

"ಹೂಂ."

"ನಿನ್ನ ನಾದಿನಿ ವಸಂತು ಕಾಯಿಲೆ ಬಿದ್ದು ನಿನಗಾಗಿ ಕೂಗಿಕೊಳ್ಳ ತಿದಾಳೆ ಅಂತ ಅಂದಮೇಲೆ ನೀನು ಇನ್ನೂ ಹೇಗೋ ಏನೊ ಅಂತ ಯೋಚಿಸ ತೀಯಲ್ಲ. ನಿನಗೆ ಹೋಗಬೇಕು ಅಂತ ಇಷ್ಟವೊ ಇಲ್ಲವೊ?"

"ಹೋಗಬೇಕೂಂತಲೆ. ಆದರೆ—"

"ನೋಡು ಶಾಂತ, ಈ ಅನುಮಾನವೆಲ್ಲ ಬಿಟ್ಟುಬಿಡು. ಏನೂ ಆಗದೆ ಇದ್ದ ಹಾಗೆ ಮನೆಗೆ ಹೋಗು. ಈ ಇಪ್ಪತ್ತು ದಿನಗಳು ಒಂದು ಕೆಟ್ಟ ಕನಸು ಮಾತ್ರ ಅಂತ ನಿನಗೇ ಅನಿಸುತ್ತೆ. ಎಲ್ಲ ಸರಿಯಾಗುತ್ತೆ."

ಶಾಂತಳ ಮನಸ್ಸಿಗೆ ಸಮಾಧಾನವಾಯಿತು. ಹೊರಡಬೇಕೆಂದೇ ಅವಳು ಮನೆ ಬಿಟ್ಟು ಹೊರಟಿದ್ದುದು. ಈಗಂತೂ ಸರಸಿಯೂ ತನ್ನ ಮನಸ್ಸಿನಲ್ಲಿದ್ದುದನ್ನೆ

ಹೇಳಿದ್ದುದರಿಂದ ಅವಳಿಗೆ ಇನ್ನೂ ಹಾಯಿಯೆನಿಸಿತು.

" ಹಾಗಾದರೆ ನಾನು ಹೊರಡತೀನಿ, ರೈಲಿಗೆ ಇನ್ನು ಹೊತ್ತಾಗುತ್ತೆ " ಎಂದು ಶಾಂತ ಎದ್ದಳು.

ಅಷ್ಟರಲ್ಲಿ ಸರಸಿಯ ತಾಯಿ ಒಳಕ್ಕೆ ಬಂದು " ಊಟ ಮಾಡಿದೆಯಾ, ಶಾಂತ ? " ಎಂದರು. ಅವಳ ಕಂದಿದ ಮುಖವೇ ಅವರಿಗೆ ಉತ್ತರ ಕೊಟ್ಟಿತು.

" ಚೆನಾಗಿದೆಯಮ್ಮ. ಹಸಿ ಮೈ. ಊಟ ಮಾಡದೆ ಹೊರಟದೀಯಲ್ಲ— ಬಹಳ ಚೆನ್ನಾಯಿತು. ಕೂತುಕೊ, ಒಂದು ಗಳಿಗೆ. ತಟ್ಟೆಯಲ್ಲಿ ಒಂದಿಷ್ಟು ಮೊಸರನ್ನ ಕಲಸಿ ತಂದುಕೊಡತೀನಿ " ಎಂದರು.

" ರೈಲಿಗೆ ಹೊತ್ತಾಗಿಹೋಯಿತು " ಎಂದಳು ಶಾಂತ ಮೆಲ್ಲನೆ.

" ಹೊತ್ತೂ ಇಲ್ಲ, ಏನೂ ಇಲ್ಲ. ಹನ್ನೆರಡು ಗಂಟೆಗಲ್ಲವೆ ರೈಲು. ಇಲ್ಲಿಂದ ಒಂದು ಗಾಡಿ ಮಾಡಿಕೊಂಡು ಹೋಗು. ಸರಸಿ, ಆ ಮುದ್ದಣ್ಣನಿಗೆ ಹೇಳು. ಒಂದು ಗಾಡಿ ತರಲಿ " ಎಂದು ಸರಸಿಯ ತಾಯಿ ಒಳಕ್ಕೆ ಹೋದರು.

ಕೈತುತ್ತು ಹಾಕಿಸಿಕೊಂಡು ಊಟ ಮಾಡಿ, ಸರಸಿ ಅಲ್ಲಿಂದ ಗಾಡಿಯಲ್ಲಿ ಹೊರಟಿದ್ದಳು. ತನ್ನ ತಾಯಿಗಿಂತಲೂ ಹೆಚ್ಚಾಗಿ ಸರಿಸಿಯ ತಾಯಿ ತನಗೆ ಪ್ರೀತಿ ವಿಶ್ವಾಸ ತೋರಿಸಿದ್ದುದು ಅವಳ ಕಣ್ಣಿನಲ್ಲಿ ನೀರು ತರಿಸಿತು. ಡಾಕ್ಟರಿಗೆ ಹೇಳಿ ಎಂದು ಅವರಿಗೆ ತಿಳಿಸಿ, ಸರಸಿಗೆ ಖಂಡಿತ ಕಾಗದ ಹಾಕುವುದಾಗಿ ಹೇಳಿ ಅಲ್ಲಿಂದ ಹೊರಟಿದ್ದಳು. ಅವಳ ಹತ್ತಿರ ಸಾಕಷ್ಟು ದುಡ್ಡಿದೆಯೊ ಇಲ್ಲವೊ ಎಂದು ಸರಸಿ ಗಾಡಿಯವನಿಗೆ ಮೊದಲೆ ದುಡ್ಡು ಕೊಟ್ಟುಬಿಟ್ಟಿದ್ದಳು. ಸರಸಿ ಎಂತಹ ಒಳ್ಳೆಯ ಸ್ನೇಹಿತೆ. ಅಂತಹ ಅಕ್ಕ ತನಗಿದ್ದಿದ್ದರೆ....ಎಂದು ಶಾಂತಳ ಮನಸ್ಸು ತಹತಹಿಸಿತು.

ರೈಲಿನಲ್ಲಿ ಬರುತ್ತ ಎಲ್ಲವೂ ಮೆಲಕು ಹಾಕಿದಂತೆ ನೆನಪಾಯಿತು. ಕಾಗದವನ್ನು ಮತ್ತೆ ಮತ್ತೆ ಓದಿಕೊಂಡಳು. ಅದರಲ್ಲಿದ್ದುದೆಲ್ಲ ಅಷ್ಟೆ : ವಸಂತು ವಿಗೆ ಕಾಯಿಲೆ. ಪಾಪ ! ಮದುವೆ ದಿನದಿಂದಲೆ ತನ್ನ ಪ್ರಾಣಕ್ಕೆ ಪ್ರಾಣ ವಾಗಿ ಒದ್ದಾಡುತ್ತಿದ್ದ ವಸಂತು ಈಗ ಕಾಯಿಲೆ ಮಲಗಿದಾಳೆ. ಎಷ್ಟು ಸೊರಗಿ ಹೋಗಿರುವಳೊ, ಎಷ್ಟೊಂದು ಸಂಕಟಪಡುತ್ತಿದ್ದಾಳೊ ಎಂದು ಕರುಳು ತುಡಿಯಿತು. ಮೈದುನ ಸೀನುವೂ ಅಷ್ಟೆ. ತನ್ನನ್ನು ಎಷ್ಟೊಂದು ಪ್ರೀತಿಯಿಂದ ಕಾಣುತ್ತಿದ್ದ. ಇನ್ನು ಮನೆಯಲ್ಲಿ ಅತ್ತೆ, ಮಾವ—ಅವರೇ ತನಗೆ ನಿಜವಾದ

ತಂದೆ ತಾಯಿ. ಎಷ್ಟೊಂದು ವಾತ್ಸಲ್ಯ ಮಮತೆ ತುಂಬಿತ್ತು ಅವರಲ್ಲಿ. ಇನ್ನು ಅವರು—ತನ್ನ ಯಜಮಾನರು—ದೇವರಂತಹವರು. ಒಂದು ನಾಲ್ಕು ದಿನ ತನ್ನನ್ನು ಊರಿಗೆ ಕಳಿಸಿದಾಗಲೆ ಕಂದಿಹೋಗಿದ್ದರು. ಈಗ ಅವರಿಗೆ ಹೇಳದೆ ಕೇಳದೆ ತಾನು ಬಂದುಬಿಟ್ಟದ್ದೆ. ಇಪ್ಪತ್ತು ದಿನವಾದರೂ ಕಾಗದ ಕೂಡ ಹಾಕದಂತಹ ಪಾತಕಿ ತಾನು. ತನಗಾಗಿ ಅವರು ಎಷ್ಟು ವ್ಯಾಕುಲಗೊಂಡಿರುವರೊ ಎಂದು ಶಾಂತಳ ಹೃದಯ ಹೊಡೆದುಕೊಂಡಿತು. ಕಣ್ಣು ತೆರೆಗೂಡಿತು. ತನ್ನ ತಪ್ಪನ್ನು ಅವರು ಕ್ಷಮಿಸುವರು. ಆದರೆ ತನಗೆ ನಾಚಿಕೆ—ಹೇಗೆ ತಾನೆ ಅವರಿಗೆ ಮುಖ ತೋರಿಸುವುದೆಂದು ಶಾಂತ ಒದ್ದಾಡಿದಳು. ಮತ್ತೆ ಕಾಗದ ನೋಡಿಕೊಂಡಳು. ಯಾವಾಗಲೂ ವಸಂತು 'ಅತ್ತಿಗೆ, ಅತ್ತಿಗೆ' ಎಂದೇ ಅನ್ನುತ್ತಿದಾಳೆಂದು ಬರೆದಿತ್ತು. ತಾನು ಮನೆ ಬಿಟ್ಟು ಹೊರಟಾಗ ಗೇಟಿನ ಬಳಿ ನಿಂತು 'ಅತ್ತಿಗೆ, ಅತ್ತಿಗೆ' ಎಂದು ವಸಂತು ಕೂಗಿಕೊಂಡು ಗೋಳಿಟ್ಟುದು ಶಾಂತಳ ಕಣ್ಣಮುಂದೆ ಕಟ್ಟಿತು. ಸದ್ಯ ಆ ಮಗುವೊಂದು ಉಳಿಮುಕೊಂಡರೆ ಸಾಕು. ತನ್ನನ್ನು ಅವರೆಲ್ಲ ಏನು ಬೇಕಾದರೂ ಅನ್ನಲಿ, ತನಗೇನೂ ಪರವಾಗಿಲ್ಲ. ಮುದ್ದು ವಸಂತು ಉಳಿದುಕೊಂಡರೆ ಸಾಕೆಂದು ಒದ್ದಾಡಿದಳು. ಎಷ್ಟು ಬೇಗನೆ ಮನೆಗೆ ಹೋಗುತ್ತೇನೊ ಎಂದು ತವಕಗೊಂಡಿತು ಮನಸ್ಸು. ಈ ಹಾಳು ರೈಲು ಎಷ್ಟು ನಿಧಾನವೆಂದುಕೊಂಡಳು. ಮನಸ್ಸಿನ ಆತಂಕದಲ್ಲಿ, ತವಕದಲ್ಲಿ ವಿಮಾನದಂತೆ ರೈಲು ಹೋಗಿದ್ದರೂ ಅವಳಿಗೆ ಸಮಾಧಾನವಿರುತ್ತಿರಲಿಲ್ಲ. ಶಾಂತಳ ಮನಸ್ಸು ಹಾರಿ ಮೈಸೂರಿನ ತವ್ಮು ಮನೆಗೆ ಹೋಗಿತ್ತು.

ಬೆಳಿಗ್ಗೆಯಿಂದ ಸೀನುವಿಗೆ ಸಾಕಾಗಿಹೋಗಿತ್ತು. ಅತ್ತಿಗೆಗೆ ಕಾಗದವನ್ನೇನೊ ಬರೆದು ಹಾಕಿಯಾಗಿತ್ತು. ಆದರೆ ಅತ್ತಿಗೆ ಬರುತ್ತಾಳೆಂದು ಹೇಗೆ ತಾನೆ ಹೇಳುವುದು. ತನ್ನ ಮೇಲೆ ಅತ್ತಿಗೆಗೆ ಇನ್ನೂ ಕೋಪವಿದೆಯೊ ಏನೊ. ಇಷ್ಟು ದಿನ—ಇಪ್ಪತ್ತು ದಿನವಾದರೂ ಒಂದು ಕಾಗದವನ್ನಾದರೂ ಹಾಕದೆ ಇದ್ದ ಅತ್ತಿಗೆ ತನ್ನ ಕಾಗದ ನೋಡಿ ಬರುವಳೆಂದು ಹೇಗೆ ತಾನೆ ನಂಬುವುದು. ತಾನು ಹಾಗೆ ಬರೆದುದು ತಪ್ಪು, ಬಾ ಎಂದು ಒಂದು ಮಾತು ಬರೆದಿದ್ದರೆ ಚೆನ್ನಾಗಿತ್ತು. ಆದರೆ ಬರೆಯುವಾಗ ತನ್ನ ಸ್ವಾಭಿಮಾನ ಬಿಡಲಿಲ್ಲ. ಈಗ ಹಾಗೆ ಬರೆಯಲಿಲ್ಲವಲ್ಲ ಎಂದು ಮನಸ್ಸು ಪಶ್ಚಾತ್ತಾಪ ಪಡುತ್ತಿತ್ತು. ಸೀನುವಿನ ಮನಸ್ಸು ಹೀಗೆ ತಾಕಲಾಡುತ್ತಿತ್ತು. ಜತೆಗೆ ವಸಂತು ಬೆಳಿಗ್ಗೆ ಏಳುತ್ತಲೆ

"ಸೀನು, ಅತ್ತಿಗೆ ಬಂದಳೇನೊ ?" ಎಂದು ಆರಂಭಿಸಿಬಿಟ್ಟಿದ್ದಳು. ಅವಳಿಗೆ ಉತ್ತರ ಹೇಳಿ ಸಮಾಧಾನಪಡಿಸುವುದಂತೂ ಸೀನುವಿಗೆ ಸಾಕುಸಾಕಾಗಿ ಹೋಗಿತ್ತು. "ಬರತಾಳೆ ಕಣೆ, ಈಗ ನೀನು ಔಷಧಿ ಕುಡಿದುಬಿಡು" ಎಂದರೆ "ಹೋಗೊ, ನೀನು ಸುಳ್ಳು ಹೇಳತೀಯ" ಎಂದು ಮುಖ ತಿರುವಿಕೊಳ್ಳುತ್ತಿದ್ದಳು ವಸಂತು. ಒಂದೊಂದು ಬಾರಿಯಂತೂ "ಅತ್ತಿಗೆ, ಅತ್ತಿಗೆ" ಎಂದು ಅಳಲು ಆರಂಭಿಸಿಬಿಟ್ಟಿದ್ದಳು. "ಈವತ್ತು ಖಂಡಿತ ಬರುತ್ತಾಳೆ, ಅತ್ತಿಗೆ" ಎಂದು ಸೀನು ಸಮಾಧಾನಗೊಳಿಸುತ್ತಿದ್ದ. ಅವಳನ್ನು ಸಮಾಧಾನಗೊಳಿಸಿದರೂ ಅವನಿಗೆ ತನ್ನ ಮನಸ್ಸೇ ಸಮಾಧಾನವಾಗಿರಲಿಲ್ಲ. ಅತ್ತಿಗೆ ಬರದೆ ಹೋದರೆ ಎಂಬ ಸಂದೇಹ ಎದ್ದೆದ್ದು ಕಾಡುತ್ತಿತ್ತು. ಆದರೆ ಮನಸ್ಸಿನೊಳಗೆ ಗಟ್ಟಿಯಾಗಿ ಕೂತಿತ್ತು ನಂಬಿಕೆ. ಅತ್ತಿಗೆ ಬಂದೇ ತೀರುವಳು. ಕಾಗದ ಕಂಡು ತಕ್ಷಣ ಹೊರಟು ಬರುವಳು ಎಂದು ಅವನ ಮನಸ್ಸು ಹೇಳುತ್ತಿತ್ತು. ಆದರೂ ತಾಕಲಾಟ, ಒದ್ದಾಟ.

ಸಂಜೆಯಾಗಿತ್ತು. ಗಂಗಮ್ಮನವರು ಒಳಗೆ ಕೆಲಸ ಮಾಡುತ್ತಿದ್ದರು. ದೇವರಿಗೆ ದೀಪ ಹಚ್ಚಲು ಬತ್ತಿಯನ್ನೂ ತುಪ್ಪವನ್ನೂ ಇಟ್ಟುಕೊಂಡು ಸೊಡಲಿಗೆ ಹಾಕುತ್ತಿದ್ದರು. ರೂಮಿನಲ್ಲಿ ವಸಂತುವಿನ ಹಾಸಿಗೆಯ ಪಕ್ಕದಲ್ಲಿ ಸೀನು ಕುಳಿತು ಅವಳಿಗೆ ಹಾಲು ಕುಡಿಸಲು ಪ್ರಯತ್ನಿಸುತ್ತಿದ್ದ. ಅವಳು ಹಟ ಹಿಡಿದು ಕುಡಿಯುವುದಿಲ್ಲವೆಂದುಬಿಟ್ಟಿದ್ದಳು.

"ಎಲ್ಲಮ್ಮ, ವಸಂತು. ಇದಿಷ್ಟು ಹಾಲು ಕುಡಿದು ಬಿಡು" ಎಂದು ಪುಸಲಾಯಿಸಿದ.

ಆದರೆ ವಸಂತು ಕೇಳಬೇಕಲ್ಲ. "ಉಹೂಂ" ಎಂದು ಮುಖ ಕೆಳಕ್ಕೆ ಮಾಡಿಬಿಟ್ಟಳು. ಬಹಳ ಪ್ರಯಾಸದಿಂದ ಅವಳ ಮುಖವನ್ನು ಮತ್ತೆ ಈ ಕಡೆ ತಿರುಗಿಸಿಕೊಂಡು,

"ಇದಿಷ್ಟು ಕುಡಿದುಬಿಡಮ್ಮ, ನೀನು ಜಾಣೆ" ಎಂದ.

"ಹೋಗೊ, ನನಗೆ ಬೇಡ. ನೀನು ಬಹಳ ಕೆಟ್ಟವನು. ಸುಳ್ಳುಸುಳ್ಳೆ ಹೇಳತೀಯಾ. ಅತ್ತಿಗೆ ಬರಲೆ ಇಲ್ಲ" ಎಂದಳು ಮುನಿಸಿನಿಂದ.

"ಖಂಡಿತ ಬರತಾಳೆ, ಕಣೆ. ಇನ್ನೇನು ಬರತಾಳೆ. ನೀನು ಹಾಲು ಕುಡಿದುಬಿಡು ಮತ್ತೆ."

ಆರು ತಿಂಗಳಿಗೆ" ಎಂದರು ಗಂಗಮ್ಮ ಆನಂದದಲ್ಲಿ.

ಶಾಂತ ತಲೆಯೆತ್ತಿ ಆ ಕಡೆ ನೋಡಿದಳು. ಅವಳ ಯಜಮಾನರು ಆಷ್ಟೇ ತಾನೆ ಬಂದವರು ರೂಮಿನ ಬಾಗಿಲಲ್ಲಿ ನಿಂತಿದ್ದರು. ಅವರ ಮುಖದಲ್ಲಿ ಪ್ರೀತಿ ತುಂಬಿ ತುಳುಕುತ್ತಿತ್ತು. ಶಾಂತ ತನ್ನ ಭಾಗ್ಯವನ್ನು, ಪುಣ್ಯವನ್ನು ಮನಸ್ಸಿನಲ್ಲಿಯೆ ವಂದಿಸಿಕೊಂಡಳು. ವಸಂತುವೂ ಅಣ್ಣನನ್ನು ನೋಡಿದಳು.

"ಅಣ್ಣ, ಅತ್ತಿಗೆ ಬಂದಳು!" ಎಂದು ಅತ್ತಿಗೆಯ ಕಡೆ ತಿರುಗಿ "ಅತ್ತಿಗೆ, ಸೋದರಳಿಯ ಅಂದರೇನು, ಅತ್ತಿಗೆ? ಎಲ್ಲಿಂದ ಬರತಾನೆ?" ಎಂದಳು.

ಶಾಂತಳ ಮುಖ ಕೆಂಪೇರಿತು. ವಸಂತುವಿನ ಮಾತಿಗೆ ಎಲ್ಲರೂ ನಕ್ಕರು. ಅವಳು ಕಕ್ಕಾವಿಕ್ಕಿಯಾಗಿ ಅತ್ತಿಗೆಯ ತೊಡೆಯ ಮೇಲೆ ಮತ್ತೆ ತಲೆಯಿಟ್ಟು ಕೊಂಡಳು. ಶಾಂತಳಿಗೂ ಆ ಮಾತಿನಿಂದ ನಗೆ ಬಂತು. ಕನ್ನೈದಿಲೆಯು ಅರಳುವಂತೆ ಅವಳ ಮುಖ ಆ ನಗೆಯ ಬೆಳುದಿಂಗಳಲ್ಲಿ ಅರಳಿತು. ಮನೆ ಬೆಳಕಾಯಿತು.



ಉಷಾ ಪ್ರೆಸ್, ಮೈಸೂರು

# ಎಸ್. ಅನಂತನಾರಾಯಣ ಅವರ ಕೃತಿಗಳು

**ಕಾದಂಬರಿ**

ಪಯಣದ ಹಾದಿಯಲ್ಲಿ
ಮುರುಕು ಮಂಟಪ
ಆಲದ ಹೂ
ಮಾರ್ದನಿ
ಅತ್ತಿಗೆ
ಬಣ್ಣದ ಚಿಟ್ಟೆ (ಬರಲಿದೆ)
ಜಯಂತಿ ( ,, )
ಸೋತ ಬದುಕು ( ,, )

**ಕವಿತೆ**

ಬಾಡದ ಹೂವು
ಉಷಾ ಸ್ವಪ್ನ

**ಕತೆ**

ವೈಥಿಲಿ
ಬೆಳುದಿಂಗಳ ರಾತ್ರಿಯಲ್ಲಿ
ಬಯಕೆಯ ಬೇಲಿ

**ವಿಮರ್ಶೆ**

ಕಾರಂತರ ಕಾದಂಬರಿಗಳು
ಮಾಸ್ತಿಯವರ ಕೃತಿ ವಿಮರ್ಶೆ (ಬರಲಿದೆ)

**ಅನುವಾದ**

ದತ್ತಾ
ಸ್ವಾಮಿ
ನಿಷ್ಕೃತಿ

**ಇತರ**

ಬಾಬುರಾಜೇಂದ್ರ ಪ್ರಸಾದ್
ಪುಟಾಣಿಗಳ ರಾಜ್ಯ
ಆಧುನಿಕ ಚೀನಾ
ಬಾಪೂವಲ್ಲರಿ (ಬರಲಿದೆ)

**ನಾಟಕ**

ಪ್ರೇಮ–ಬಲಿ
ಮಂಗಳಾರತಿ